# ಕನ್ನಡ ಧ್ವನ್ಯಾಲೋಕ ಮತ್ತು ಲೋಚನ ಸಾರ

ಡಾ. ಕೆ. ಕೃಷ್ಣಮೂರ್ತಿ



ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಜನಪ್ರಿಯ ಪುಸ್ತಕ ಮಾಲೆ

# ಕನ್ನಡ ಧ್ವನ್ಯಾಲೋಕ ಮತ್ತು ಲೋಚನಸಾರ

ಡಾ: ಕೆ. ಕೃಷ್ಣಮೂರ್ತಿ

ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು

KANNADA DHWANYALOKA MATTHU
LOCHANASARA - A Kannada Translation of DHWANYALOKA
and LOCHANA by Dr K Krishna Murthy and Published by
I M Vittala Murthy, Director, Directorate of Kannada & Culture
14/3A Nrupathunga Road, Bangalore 560 002

Pp xxxiv + 272



ಬೆಲೆ ರೂ. 18/–

ಮುದ್ರಣ: ಶ್ರೀ ರಾಘವೇಂದ್ರ ಮುದ್ರಣಾಲಯ
ಬೆಂಗಳೂರು

# ಅರಿಕೆ

ಕನ್ನಡದಲ್ಲಿ ಪ್ರತಿವರ್ಷವೂ ಪ್ರಕಟವಾಗುತ್ತಿರುವ ಪುಸ್ತಕಗಳ ಸಂಖ್ಯೆಗೆ ಹೋಲಿಸಿದರೆ, ಅದಕ್ಕೆ ಅನುಗುಣವಾಗಿ ಅವುಗಳನ್ನು ಕೊಂಡು ಓದುವ ಸಹೃದಯರು ಸಾಕಷ್ಟಿಲ್ಲವೆಂಬ ಕೊರಗು ಕನ್ನಡ ಪುಸ್ತಕೋದ್ಯಮವನ್ನು ಯಾವತ್ತಿನಿಂದಲೂ ಕಾಡುತ್ತಿರುವ ಸಂಗತಿ. ಇತ್ತೀಚೆಗಂತೂ ದಿನದಿಂದ ದಿನಕ್ಕೆ ಏರುತ್ತಿರುವ ಕಾಗದದ ಬೆಲೆ ಹಾಗೂ ಮುದ್ರಣ ವೆಚ್ಚಗಳಿಂದಾಗಿ, ಪುಸ್ತಕದ ಬೆಲೆಯೂ ಒಂದು ಹೊರೆಯಾಗಿ, ಎಂಥ ಪುಸ್ತಕಪ್ರೇಮಿಗಳೂ ಪುಸ್ತಕಗಳನ್ನು ಕೊಳ್ಳಲು ಹಿಂಜರಿಯುವಂಥ ಪರಿಸ್ಥಿತಿ ನಿರ್ಮಾಣವಾಗಿದೆ. ಈ ಹಿನ್ನೆಲೆಯಲ್ಲಿ ಒಳ್ಳೆಯ ಪುಸ್ತಕಗಳನ್ನು ಆಯ್ದು ಮುದ್ರಿಸಿ, ಸಾಧ್ಯವಾದಷ್ಟು ಕಡಿಮೆ ಬೆಲೆಯಲ್ಲಿ ಪುಸ್ತಕಪ್ರೇಮಿಗಳಿಗೆ ತಲುಪಿಸುವ ವ್ಯವಸ್ಥೆಯೊಂದು ರೂಪುಗೊಳ್ಳುವುದಾದರೆ, ಅದು ಖಂಡಿತವಾಗಿಯೂ ಕನ್ನಡ ಪುಸ್ತಕೋದ್ಯಮ ಹಾಗೂ ವಾಚನಾಭಿರುಚಿಯನ್ನು ಸಂವರ್ಧನಗೊಳಿಸುವ ದಿಕ್ಕಿನಲ್ಲಿ ಒಂದು ಮಹತ್ವದ ಪ್ರಯತ್ನವಾಗುತ್ತದೆ.

ವಾಸ್ತವದ ಸಂಗತಿ ಎಂದರೆ, ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು, ಈಗಾಗಲೇ ಹಲವು ಸಲ ಈ ಬಗೆಯ ಪ್ರಯತ್ನದಲ್ಲಿ ತೊಡಗಿ ಆದರ ಮೌಲಿಕತೆಯನ್ನು ಮನದಟ್ಟು ಮಾಡಿಕೊಂಡಿದೆ ಎನ್ನುವುದು. ಹಿಂದೆ ಕನ್ನಡ–ಸಂಸ್ಕೃತಿ ಪ್ರಸಾರ ಯೋಜನೆಯ ಅಂಗವಾಗಿ ಕುಮಾರವ್ಯಾಸ ಭಾರತ, ಜೈಮಿನಿಭಾರತ ಮೊದಲಾದ ಶ್ರೇಷ್ಠ ಜನಪ್ರಿಯ ಕೃತಿಗಳು ಅತ್ಯಂತ ಕಡಿಮೆ ಬೆಲೆಯಲ್ಲಿ ಶ್ರೀಸಾಮಾನ್ಯರಿಗೆ ತಲುಪಿದವೆಂಬುದನ್ನು ನೆನೆಯಬಹುದು. ಅನಂತರ ವಿಶ್ವ ಕನ್ನಡ ಸಮ್ಮೇಳನದ ಅಂಗವಾಗಿ, 1982ರಲ್ಲಿ ಒಂದುನೂರಾ ಹದಿನೇಳು ಪುಸ್ತಕಗಳನ್ನು, 1985ರಲ್ಲಿ ಐವತ್ತು ಪುಸ್ತಕಗಳನ್ನು ಮತ್ತು ಈಚೆಗೆ ಇನ್ನೂ ಮೌಲಿಕವಾದ ಹಲವು ಕೃತಿಗಳನ್ನು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸುಲಭ ಬೆಲೆಯಲ್ಲಿ ಜನಕ್ಕೆ ದೊರೆಯುವಂತೆ ಪ್ರಕಟಿಸಿದೆ. ಈ ಎಲ್ಲ ಸಂದರ್ಭಗಳಲ್ಲಿ ಈ ಪ್ರಕಟಣೆಗಳ ಬಗ್ಗೆ ಸಾರ್ವಜನಿಕರಿಂದ ದೊರೆತ ಪ್ರತಿಕ್ರಿಯೆ ಹಾಗೂ ಬೇಡಿಕೆಯ ಪರಿಣಾಮವಾಗಿ, ಇದೀಗ ಕರ್ನಾಟಕ ಸರ್ಕಾರವು ಪುಸ್ತಕೋದ್ಯಮವನ್ನು ಜನಪರವಾಗಿ ಮತ್ತು ದೃಢವಾಗಿ ಬೆಳೆಸುವ ಉದ್ದೇಶದಿಂದ 'ಕನ್ನಡ ಪುಸ್ತಕ ಪ್ರಾಧಿಕಾರ' ಎಂಬ ದೀರ್ಘಕಾಲಿಕ ಯೋಜನೆಯೊಂದನ್ನು ರೂಪಿಸಲು ಮುಂದಾಗಿದೆ.

ಲೇಖಕ–ಪ್ರಕಾಶಕ–ಓದುಗರ ನಡುವೆ ಒಂದು ಬಗೆಯ ಗಾಢ ಸಂಬಂಧವನ್ನು ಏರ್ಪಡಿಸುತ್ತಾ, ಶ್ರೀಸಾಮಾನ್ಯರಲ್ಲಿ ವಾಚನಾಭಿರುಚಿಯನ್ನೂ, ಪುಸ್ತಕ ಪ್ರೀತಿಯನ್ನೂ ಎಚ್ಚರಗೊಳಿಸುತ್ತಾ, ರಾಜ್ಯಾದ್ಯಂತ ಓದುಗರಿಗೆ ಒಳ್ಳೆಯ ಪುಸ್ತಕಗಳು ಭಾರವಾಗದ ಬೆಲೆಯಲ್ಲಿ ದೊರೆಯುವಂಥ ಸ್ಥಾಯೀ ವ್ಯವಸ್ಥೆಯೊಂದನ್ನು ರೂಢಿಸುವುದು ಈ ಯೋಜನೆಯ ಗುರಿಯಾಗಿದೆ.

ಈ ಪ್ರಾಧಿಕಾರವು ಮೂಲತಃ ಒಂದು ಸ್ವಾಯತ್ತ ಮಂಡಳಿಯಂತೆ ಕಾರ್ಯನಿರ್ವಹಿಸಬೇಕಾಗಿದೆ. ಇದರ ಮೊದಲ ಹಂತಗಳಲ್ಲಿ ಸರ್ಕಾರವು ಆರ್ಥಿಕ ನೆರವನ್ನು ನೀಡುವುದು ಅಗತ್ಯವಾದರೂ, ಕ್ರಮಕ್ರಮೇಣ ಅದು ತನ್ನ ಸ್ವಸಾಮರ್ಥ್ಯ ಹಾಗೂ ಗಳಿಕೆಯ ಮೇಲೆ, ಕೇವಲ ವ್ಯಾಪಾರಬುದ್ಧಿಗೆ ಮೀರಿದ ನಿಲುವಿನಲ್ಲಿ ತನ್ನನ್ನು ತಾನು ಬೆಳೆಸಿಕೊಳ್ಳಬೇಕಾಗಿದೆ.

ಈ ಬಗೆಯ ಆಶಯಗಳಿಂದ, ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು 'ಜನಪ್ರಿಯ ಪುಸ್ತಕ ಮಾಲೆ'ಯ ಸರಣಿಯಲ್ಲಿ, ಕನ್ನಡದ ಕೆಲವು ಒಳ್ಳೆಯ ಕೃತಿಗಳನ್ನು ಆಯ್ದು ಪುನರ್‌ಮುದ್ರಿಸಿ ಪ್ರಕಟಿಸುವ ಕಾರ್ಯವನ್ನು ಪ್ರಾರಂಭಿಸುತ್ತಿದೆ. ಈ ಸರಣಿಯಲ್ಲಿ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಪ್ರತಿನಿಧಿಸುವ ಕೃತಿಗಳನ್ನು ಆಯ್ಕೆ ಸಮಿತಿಯ ಸೂಚನೆಯ ಮೇರೆಗೆ ಪ್ರಕಟಣೆಗೆ ತೆಗೆದುಕೊಳ್ಳಲಾಗಿದೆ. ಈ ಕೃತಿಗಳನ್ನು ಕನ್ನಡ ಓದುಗರು ವಿಶ್ವಾಸದಿಂದ ಒಪ್ಪಿಕೊಳ್ಳುತ್ತಾರೆಂದು ನಾವು ಭಾವಿಸಿದ್ದೇವೆ.

ಈ 'ಜನಪ್ರಿಯ ಪುಸ್ತಕ ಮಾಲೆ'ಯ ಆಯ್ಕೆ ಸಮಿತಿಯ ಸದಸ್ಯರಾದ ಡಾ: ಹಾ. ಮಾ. ನಾಯಕ, ಡಾ:ಜಿ. ಎಸ್. ಶಿವರುದ್ರಪ್ಪ, ಪ್ರೊ: ಕೀರ್ತಿನಾಥ ಕುರ್ತಕೋಟಿ, ಡಾ: ಗಿರಡ್ಡಿ ಗೋವಿಂದರಾಜ, ಶ್ರೀ ಪೂರ್ಣಚಂದ್ರ ತೇಜಸ್ವಿ, ಡಾ: ಚಂದ್ರಶೇಖರ ಕಂಬಾರ, ಡಾ: ರಾಜೀವ ತಾರಾನಾಥ ಮತ್ತು ಶ್ರೀ ಬರಗೂರು ರಾಮಚಂದ್ರಪ್ಪ ಅವರಿಗೆ, ಈ ಪುಸ್ತಕಗಳನ್ನು ನಿಗದಿತ ಅವಧಿಯೊಳಗೆ ಮುದ್ರಿಸಿಕೊಟ್ಟ ಎಲ್ಲ ಮುದ್ರಕರಿಗೆ, ರಕ್ಷಾಪುಟದ ವಿನ್ಯಾಸವನ್ನು ರಚಿಸಿಕೊಟ್ಟ ಕಲಾವಿದ ಶ್ರೀ ಟಿ. ಸು. ಕೃಷ್ಣಶೆಟ್ಟಿಯವರಿಗೆ ಮತ್ತು ಈ ಯೋಜನೆಗೆ ಮುಕ್ತ ಮನಸ್ಸಿನಿಂದ ಮಂಜೂರಾತಿ ನೀಡಿದ ಕರ್ನಾಟಕ ಸರ್ಕಾರಕ್ಕೆ ನಾನು ಆಭಾರಿಯಾಗಿದ್ದೇನೆ.

29.3.1990
ಬೆಂಗಳೂರು

ಐ.ಎಂ. ವಿಠ್ಠಲಮೂರ್ತಿ
ನಿರ್ದೇಶಕರು

# ಅರ್ಪಣೆ

ಶಿಷ್ಯವಾತ್ಸಲ್ಯಪ್ರಪೂರ್ಣರೂ ಗುರುವರ್ಯರೂ
ಆದ

**ಡಾ. ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ., ಡಿ.ಲಿಟ್., ಅವರ ಪದತಲದಲ್ಲಿ**

ಇದೆಕೊಳ್ ಸಂಸ್ಕೃತನಾಟಕಪ್ರಕರಣಂ ಮಕ್ಕಳ್ಗಿದೋ ಭಾರತಂ
ಬದುಕಲ್ ಕಲ್ತೊಡೆ ದೊಡ್ಡವರ್ಗೆ ವಚನೋಪಾತ್ತಂ ಮಹಾಭಾರತಂ
ಮೊದಲೊಳ್ ಕೈಪಿಡಿ ಕನ್ನಡಕ್ಕೆ ಕವಿತಾಸಾರಪ್ರಕಾಶೋಜ್ಜ್ವಲಂ
ಚದುರರ್ಗಿಲ್ಲಿ ಕಥಾಮೃತಂ ಗಡೆನುತಂ ಗ್ರಂಥಂಗಳಂ ನಿರ್ಮಿಸಲ್ ೧

ನಡೆಯಿಂ ನುಡಿಯಿಂ ಜನಗಳ
ನಡೆಯಂ ನುಡಿಯಂ ಸಮಂತು ಕನ್ನಡನಾಡಂ
ಅಡಿಯಿಡಿಸುತೆ ನಡೆಗಲಿಸಲ್
ಗಡ ನೋಂತರ್ ಕೃಷ್ಣಶಾಸ್ತ್ರಿಗಳ್ ಕೃತಕೃತ್ಯರ್ ೨

ಗುರುಗಳ ವಿದ್ಯಾಗುರುಗಳ್
ಗರುಡಿಯೊಳಂ ಕಾವ್ಯಶಾಸ್ತ್ರದಾ ಗರುಡಿಯೊಳಂ
ಪರಿಣತರೆನೆ ಮೃದುಹೃದಯರ್
ಸರಿವರ್ಪರ್ ದ್ರೋಣಕಣ್ವರಿಂಗೀ ಯುಗದೊಳ್ ೩

ಪರಮಾಚಾರ್ಯರ ಪದವಿಯ
ನುರುಗೌರವದಿಂದೆ ವಿಶ್ವವಿದ್ಯಾನಿಲಯಂ
ಗುರುಗಳ್ಗಿತ್ತಾ ಸುದಿನಂ
ಬರೆಯಲ್ ಬಗೆದಂತೆ ಪೂರ್ಣವಾದೀ ಕೃತಿಯಂ ೪

ವರಮೆನಲಾಶೀರ್ವಾದಂ
ಗುರುವರ್ಯರ ಶಿಷ್ಯಕೋಟಿ ಹೃದಯಸ್ಥಿತರಾ
ಹರುಷದೆ ಬರೆದೀ ರಚನೆಯ
ನಿರಿಸಿರ್ಪಂ ಕೃಷ್ಣಮೂರ್ತಿ ಗುರುಪದತಲದೊಳ್ ೫

ಆರಿಂದೆನ್ನಯ ಕನ್ನಡ ಪ್ರಕಟನ ಪ್ರಾರಂಭಮಿಂಬಾದುದೋ
ಆರಿಂದಿನ್ನೆಗಮೆನ್ನ ಸರ್ವಲಿಖಿತಂ ಸಾನಂದಮಂಗೀಕೃತಂ
ಆರಿಂದೆನ್ನಯ ಬುದ್ಧಿ ಮುಂಬರಿದುದೋ ಪ್ರೋತ್ಸಾಹದೇದೀಪ್ತಿಯಿಂ
ದೋರಂತೀ ಕೃತಿಯಕ್ಕೆ ಕಾಣ್ಕೆಯವರಾ ಸಂಪೂಜ್ಯ ಪಾದಾಬ್ಜದೊಳ್ ೬

# ಮುನ್ನುಡಿ

ಸಂಸ್ಕೃತದಲ್ಲಿ ಅಲಂಕಾರಶಾಸ್ತ್ರದ ಚರಿತ್ರೆ ಸುಮಾರು ೧೫೦೦ ವರ್ಷ ನಡೆದು ಬಂತು. ಈ ದೀರ್ಘಕಾಲದಲ್ಲಿ ಹಲವು ಪ್ರಸ್ಥಾನಗಳು ಹುಟ್ಟಿದುವು. ಆಲಂಕಾರಿಕರು ಕಾವ್ಯಸೌಂದರ್ಯಕ್ಕೆ ಪ್ರಧಾನಕಾರಣವಾವುದೆಂಬುದನ್ನು ವಿಚಾರಮಾಡಿ, ರಸ ರೀತಿ ಗುಣ ಅಲಂಕಾರ ವಕ್ರೋಕ್ತಿ ಧ್ವನಿ ಔಚಿತ್ಯ ಮುಂತಾದವುಗಳನ್ನು ಪ್ರತಿಪಾದಿಸಿದರು. ಕನ್ನಡದಲ್ಲಿ ನೃಪತುಂಗನಿಂದ ಹಿಡಿದು ಲಿಂಗರಾಜನವರೆಗೆ ಸುಮಾರು ಒಂದು ಸಾವಿರ ವರ್ಷ ಇವುಗಳ ಆಧಾರದ ಮೇಲೆ ಹಲವು ಗ್ರಂಥಗಳು ಹುಟ್ಟಿದುವು. ಆದರೆ ಸಂಸ್ಕೃತ ದಿಂದ ಮೂಲಕೃತಿ ಯಾವುದೂ ಕನ್ನಡಕ್ಕೆ ನೇರವಾಗಿ ಭಾಷಾಂತರವಾಗಿರಲಿಲ್ಲ. ಆ ಕೆಲಸವನ್ನು, ನನಗೆ ತಿಳಿದಮಟ್ಟಿಗೆ, ಮೊದಲು ಕೈಕೊಂಡವರು ದಿ. ಅಕ್ಕಲೆ ಲಕ್ಷ್ಮೀ ನರಸಿಂಹಶಾಸ್ತ್ರಿಗಳು. ಅವರು ೧೯೦೫ರಲ್ಲಿ "ಕನ್ನಡಿಗರಾದ ಅಲಂಕಾರವಿದ್ಯಾರ್ಥಿಗಳು ಅಲಂಕಾರವಿದ್ಯಾರ್ಥಿಗಳೇ ಆದರಲ್ಲಾ" ಎಂದು ಚಿಂತಿಸಿ 'ಚಂದ್ರಾಲೋಕ'ವನ್ನು ಕನ್ನಡಿಸಿದರು. ಅದು 'ಕರ್ಣಾಟಕ ಗ್ರಂಥಮಾಲೆ'ಯಲ್ಲಿ ಪ್ರಕಟವಾಯಿತು. ಎರಡನೆ ಯದೇ ಡಾ. ಕೃಷ್ಣಮೂರ್ತಿಯವರ 'ಕನ್ನಡ ಧ್ವನ್ಯಾಲೋಕ'. ಇದು 'ಧ್ವನಿ'ಯನ್ನು ಪ್ರತಿಪಾದಿಸಿ ಆ ಪ್ರಸ್ಥಾನವನ್ನು ಸ್ಥಾಪಿಸುವ ಗ್ರಂಥ.

ಒಳ್ಳೆಯ ಭಾಷಾಂತರಕ್ಕೆ ಮೂಲದಷ್ಟೇ ಬೆಲೆ ಇರುತ್ತದೆ; ಅದನ್ನು ಓದುವುದು ಸುಲಭ, ಬರೆಯುವುದು ಕಷ್ಟ; ಉದ್ಗ್ರಂಥಗಳನ್ನು ಮೂಲದಲ್ಲಿಯೇ ಎಲ್ಲರೂ ಓದುವುದು ಅಸಾಧ್ಯ, ಆದ್ದರಿಂದ ಅವುಗಳನ್ನು ಚೆನ್ನಾಗಿ ಭಾಷಾಂತರ ಮಾಡಿ ಕೊಡುವ ವಿದ್ವಾಂಸರ ಉಪಕಾರ ದೊಡ್ಡದು. ಇಂಗ್ಲಿಷ್ ಸಾಹಿತ್ಯದಲ್ಲಿ ಸಾರವತ್ತಾಗಿ ರುವ ಒಂದು ಭಾಗ, ಹೀಗೆ ನಾನಾಭಾಷೆಗಳಿಂದ ಅನುವಾದಮಾಡಿಕೊಂಡಿರುವ ಉದ್ಗ್ರಂಥಗಳು. ಗ್ರೀಕ್ ಲ್ಯಾಟಿನ್ ಹೀಬ್ರೂ ಅರಬ್ಬಿ ಚೀನಿ ಈ ಭಾಷೆಗಳಿರಲಿ, ಸಂಸ್ಕೃತ ಒಂದನ್ನೇ ತೆಗೆದುಕೊಂಡರೂ, ಅದರ ವೇದ ಶಾಸ್ತ್ರ ಕಾವ್ಯ ಇವುಗಳಿಗೆ ಸಂಬಂಧಪಟ್ಟ ಹಾಗೆ ಇಂಗ್ಲಿಷಿನಲ್ಲಿ ಭಾಷಾಂತರಗಳಿವೆ; ಅವುಗಳಿಗೆ ಪೀಠಿಕೆ ಟಿಪ್ಪಣಿ ವಿವರಣೆ ವಿಮರ್ಶೆ ಮುಂತಾದವುಗಳಿವೆ. ಇಂಥ ಒಂದಾದರೂ ಗ್ರಂಥ, ಉದ್ಗ್ರಂಥ, ಕನ್ನಡಕ್ಕೆ ಬಂತಲ್ಲಾ ಎಂದು ಕನ್ನಡದ ಅಭಿಮಾನಿಗಳು ಹೆಮ್ಮೆಪಟ್ಟುಕೊಂಡಾರೆಂದು ನಾನು ಭಾವಿಸುತ್ತೇನೆ. ಡಾ. ಕೃಷ್ಣಮೂರ್ತಿಯವರಿಗಿಂತ ಈ ಕೆಲಸವನ್ನು ಮಾಡು ವುದಕ್ಕೆ ಹೆಚ್ಚಿನ ಸಾಮರ್ಥ್ಯ ಯೋಗ್ಯತೆಗಳನ್ನು ಪಡೆದಿರುವವರು ಈಗ ಕನ್ನಡನಾಡಿನಲ್ಲಿ ಹಲವರಿಲ್ಲವೆಂದರೆ, ಅದು ಪಕ್ಷಪಾತದ ಮಾತೆಂದಾಗಲಿ ಅತ್ಯುಕ್ತಿಯ ಮಾತೆಂದಾಗಲಿ ಯಾರೂ ಎಣಿಸುವುದಿಲ್ಲವೆಂದು ನಾನು ನಂಬುತ್ತೇನೆ. ಅವರು ಇಂಗ್ಲಿಷ್ ಸಂಸ್ಕೃತ

ಕನ್ನಡ ಮೂರರಲ್ಲೂ ಒಂದೇ ವಿಧವಾದ ಶ್ರೇಷ್ಠ ವಿದ್ವತ್ತನ್ನೂ ಪ್ರಶಸ್ತಿಯನ್ನೂ ಪಡೆದಿದ್ದಾರೆ. ಅಲಂಕಾರಶಾಸ್ತ್ರವನ್ನು ತಲಸ್ಪರ್ಶಿಯಾಗಿ ವ್ಯಾಸಂಗಮಾಡಿ ಬೊಂಬಾಯಿ ವಿಶ್ವವಿದ್ಯಾನಿಲಯಕ್ಕೆ "ಧ್ವನಿ"ಯ ಮೇಲೆ ವಿದ್ವದುಪನ್ಯಾಸವನ್ನು ಬರೆದುಕೊಟ್ಟು ಪಿಎಚ್.ಡಿ. ಪ್ರಶಸ್ತಿಯನ್ನು ಪಡೆದಿದ್ದಾರೆ. ಅವರ ಕಾವ್ಯರಚನಾಶಕ್ತಿ ಆ ವಿದ್ವತ್ತಿಗೆ ಸರಿತೂಗುವಂತಿದೆ, ಬಗೆಬಗೆಯ ಛಂದಸ್ಸುಗಳಲ್ಲಿ ಅವರು ಮೂಲದ ಅಸಂಖ್ಯಾತ ಪದ್ಯಗಳನ್ನು ಕನ್ನಡ ಮಾಡಿದ್ದಾರೆ. ಇವು ಎಷ್ಟು ಸುಲಲಿತವಾಗಿ ಬಂದಿವೆಯೆಂದರೆ, ಅವಷ್ಟನ್ನು ಓದುವುದೇ ಒಂದು ಸಂತೋಷ. ಶಾಸ್ತ್ರಭಾಗವನ್ನು ಸರಿಯಾಗಿ ಗ್ರಹಿಸಿ ಸ್ಪಷ್ಟವಾಗಿ ಪ್ರತಿಪಾದಿಸಿರುವುದೂ ಅಷ್ಟೇ ಆಶ್ಚರ್ಯವುಂಟುಮಾಡುತ್ತದೆ, (ಉದಾ: ಪುಟ ೧೮೮-೨೦೮). ಒಟ್ಟಿನ ಮೇಲೆ ಭಾಷಾಂತರವು ಬಹು ತೃಪ್ತಿಕರವಾಗಿರುವುದರಿಂದ ಇದನ್ನು ಓದುವ ಕನ್ನಡಿಗರು ಸಂಸ್ಕೃತದ ಮೂಲವನ್ನು ತಾವು ಓದಲಿಲ್ಲವಲ್ಲಾ ಎಂದು ಚಿಂತಿಸಬೇಕಾದುದಿಲ್ಲ. ಆದ್ದರಿಂದ ಆಧುನಿಕ ಕನ್ನಡ ಸಾಹಿತ್ಯಕ್ಕೆ ಡಾ. ಕೃಷ್ಣಮೂರ್ತಿಯವರಿಂದ ಆಗಿರುವ ಉಪಕಾರ ಬಹು ದೊಡ್ಡದು. ಇಂದಲ್ಲದಿದ್ದರೆ ಮುಂದಾದರೂ, ಕನ್ನಡಕ್ಕೆ ಹಿರಿಯಸ್ಥಾನ ಮನ್ನಣೆಗಳು ದೊರೆತಾಗ ಕನ್ನಡಿಗರಲ್ಲಿ ಅದನ್ನು ಹೆಚ್ಚುಮಂದಿ ಓದಿ ಗ್ರಹಿಸಿ ಉಪಯೋಗಿಸಿಕೊಳ್ಳುವ ಕಾಲ ಬಂದಾಗ, 'ಕನ್ನಡ ಧ್ವನ್ಯಾಲೋಕ'ದ ಬೆಲೆಯನ್ನು ಜನ ಅರಿತಾರು.

'ಧ್ವನಿ' ಎಂದರೇನು, ಕಾವ್ಯಮೀಮಾಂಸೆಯಲ್ಲಿ ಅದರ ಸ್ಥಾನವೇನು ಎಂಬುದನ್ನು ಅವರೇ ಸಂಸ್ಕೃತ ಕನ್ನಡ ಉದಾಹರಣೆಗಳೊಡನೆ ಈ ಪುಸ್ತಕದ ಮೊದಲ ಭಾಗದಲ್ಲಿ ವಿವರಿಸಿದ್ದಾರೆ. ಇದರ ನಾಲ್ಕು ಲೇಖನಗಳೂ* ತುಂಬ ಪ್ರೌಢವಾಗಿದ್ದು ಅಲಂಕಾರಶಾಸ್ತ್ರದ ಪ್ರಸಿದ್ಧಗ್ರಂಥಗಳ ಸಾಮಾನ್ಯಜ್ಞಾನವನ್ನಾದರೂ ಅಪೇಕ್ಷಿಸುತ್ತವೆ. ಧ್ವನ್ಯಾಲೋಕದ ಪರಿಚಯವಂತೂ ಅವುಗಳ ಗ್ರಹಿಕೆಗೆ ಬೇಕೇಬೇಕು. ಆದ್ದರಿಂದ ಅವರು ಪುಸ್ತಕದ ಉತ್ತರಭಾಗದಲ್ಲಿ ಅದನ್ನು ಭಾಷಾಂತರ ಮಾಡಿಕೊಟ್ಟಿದ್ದಾರೆ. ಇವು ಪರಸ್ಪರ ಸಹಾಯಕಗಳಾಗಿವೆ.

ಧ್ವನಿ ಎಂಬುದನ್ನು ಲಾಕ್ಷಣಿಕರು ಮೊದಲಿಂದ ಅರಿತಿದ್ದರೂ ಅದನ್ನು ಪ್ರಧಾನವಾಗಿ ಪ್ರತಿಪಾದಿಸಿದವನು ಆನಂದವರ್ಧನ. ಅವನಿಂದ ಮುಂದಕ್ಕೆ ಅದನ್ನು ಪ್ರಾಯಶಃ ಎಲ್ಲರೂ ಅಂಗೀಕರಿಸಿದರು. ಮಹಿಮಭಟ್ಟನು ಅದನ್ನು ಖಂಡಿಸಿ 'ವ್ಯಕ್ತಿವಿವೇಕ'ವೆಂಬ ಗ್ರಂಥವನ್ನು ಬರೆದು ಪ್ರಸಿದ್ಧಿಗೆ ಬಂದನು. ಮಹಿಮಭಟ್ಟನು ತಾರ್ಕಿಕ; ಅವನ ಗ್ರಂಥ ತುಂಬ ಜಟಿಲ; ಧ್ವನ್ಯಾಲೋಕದ ಅನೇಕ ಅಭಿಪ್ರಾಯಗಳನ್ನೂ ಉದಾಹರಣೆಗಳನ್ನೂ ಅವನು ಅನುವಾದ ಮಾಡಿ ಚರ್ಚಿಸಿದ್ದಾನೆ. ಅವನು ಆಗ್ರಹಗ್ರಸ್ತನಾದರೂ

* ಇವು ಪ್ರತ್ಯೇಕ ಗ್ರಂಥವಾಗಿ ಅಚ್ಚಾಗುತ್ತಿವೆ.

ಆ ಗ್ರಂಥವು ಧ್ವನ್ಯಾಲೋಕಕ್ಕೆ ಪೂರಕದಂತಿದೆ. ಅದೂ ಕನ್ನಡಕ್ಕೆ ಬಂದರೆ ಪ್ರೌಢವೂ ಪಾರಿಭಾಷಿಕವೂ ಆದ ಅಲಂಕಾರಶಾಸ್ತ್ರಭಾಗ ಕನ್ನಡಿಗರಿಗೆ ದೊರೆತಂತಾಗುತ್ತದೆ. ಧ್ವನ್ಯಾಲೋಕದಲ್ಲಿ ಕಂಡುಬರುವ ಶಾಸ್ತ್ರವಾದದ ಸರಣಿ ಅಲ್ಲಿ ಇನ್ನೂ ಚೆನ್ನಾಗಿ ಪರಿಚಯವಾಗಿ ಬುದ್ಧಿಗೆ ಹೆಚ್ಚಿನ ಪರಿಶ್ರಮ ಉಂಟಾಗುತ್ತದೆ.

ಲೋಕದಲ್ಲಿ ಸುಖವೂ ದುಃಖವೂ ಇರುವಂತೆ, ಸೌಂದರ್ಯವೂ ವಿಕಾರವೂ ಇವೆ. ಈ ಸೌಂದರ್ಯವಿಕಾರಗಳು ವಸ್ತುಗಳಲ್ಲಿರುವಂತೆ ಜನರ ನಡೆನುಡಿಗಳಲ್ಲಿಯೂ ಇವೆ. ನುಡಿಯ ಸೌಂದರ್ಯವೇ ಅಲಂಕಾರಶಾಸ್ತ್ರದ ವಿಷಯ.

ಅಲಂಕಾರಕ್ಕೆ ಸೌಂದರ್ಯವೆಂಬ ವಿಸ್ತಾರವಾದ ಅರ್ಥವೂ ಇದೆ, ಭೂಷಣವೆಂಬ ಸಂಕುಚಿತವಾದ ಅರ್ಥವೂ ಇದೆ. ಸೌಂದರ್ಯವೇ ನಿಜವಾದ, ಸ್ವತಸ್ಸಿದ್ಧವಾದ, ಅಲಂಕಾರ. ಸುಂದರವಾದ ವಸ್ತುವಿಗೆ ಬೇರೆ ಭೂಷಣವೇಕೆ? ಪೂರ್ಣಚಂದ್ರನನ್ನು ದೀಪದ ಬೆಳಕಿನಿಂದ ಬೆಳಗಿಸಬೇಕೇ? ಅದು ಚಿನ್ನಕ್ಕೆ ಗಿಲೀಟುಮಾಡುವಂಥ ಕೆಲಸ. ಆದರೂ ಚಿನ್ನಕ್ಕೆ ಒಪ್ಪವಿಡಬಹುದು, ಕಬ್ಬಿಣಕ್ಕೂ ಹೊಳಪು ಕೊಡಬಹುದು, ಕಲ್ಲನ್ನೂ ನಯಮಾಡಬಹುದು—ಅವಕ್ಕೆ ಇರುವ ಗುಣವನ್ನು ಸಂಸ್ಕಾರದಿಂದ ಹೆಚ್ಚಿಸಬಹುದು. ಹಾಗೇ, ಮಾತಿನಲ್ಲಿ ಸುಂದರವಾದ ಮಾತಾವುದು, ಆ ಸೌಂದರ್ಯವೆಲ್ಲಿದೆ, ಅದನ್ನು ಹೆಚ್ಚಿಸುವುದು ಹೇಗೆ—ಇವನ್ನೇ ಅಲಂಕಾರಶಾಸ್ತ್ರ ವಿಚಾರಮಾಡುತ್ತದೆ.

ಮಾತುಗಳು ಒಂದರಂತೆ ಒಂದು ಇರುವುದಿಲ್ಲ; ಒಂದಕ್ಕೊಂದಕ್ಕೆ ಹಲವು ವಿಧಗಳಲ್ಲಿ ವ್ಯತ್ಯಾಸವಿರುತ್ತದೆ. ಒಂದೇ ಅರ್ಥವಿರುವ ಪದಗಳನ್ನು ಪರಿಶೀಲಿಸಿದರೂ ಈ ವ್ಯತ್ಯಾಸ ಕಾಣುತ್ತದೆ. ಇವುಗಳನ್ನು ನೋಡಿ—

(೧) ಶಿವ ಶಂಕರ ರುದ್ರ ಪಶುಪತಿ ಚಂದ್ರಶೇಖರ ಶ್ರೀಕಂಠ ಈಶ್ವರ ಮೃತ್ಯುಂಜಯ ಮಹಾದೇವ ಕಪಾಲಿ ಕಪರ್ದಿ ಕೃತ್ತಿವಾಸ.

(೨) ಭಾನು ರವಿ ಸೂರ್ಯ ಆದಿತ್ಯ ನೇಸರು ಬಿಸುಗದಿರ.

(೩) ಹೆಣ್ಣು ಹೆಂಗಸು ವೈಯಾರಿ ಸಿಂಗಾರಿ ನಾರಿ ಸ್ತ್ರೀ ಕಾಮಿನಿ ಭಾಮಿನಿ ಮಾನಿನಿ ಪ್ರಮದೆ ವನಿತೆ ಲಲನೆ ವಿಲಾಸಿನಿ ನಿತಂಬಿನಿ ಬಜಾರಿ ಗೈಯಾಳಿ ಗರತಿ.

(೪) ಕಡಿ ಕೆತ್ತು ಕೊಚ್ಚು ಕುಯ್ಯು ಸೀಳು ಕೀಳು ಗೀಳು ಸಿಗಿ ಒಡೆ ತರಿ ತುರಿ ಕವರು ಚಚ್ಚು ಜಜ್ಜು ಕುಟ್ಟು ಬಗಿ ಅರೆ ಹರಿ ಹೋಳುಮಾಡು ತುಂಡುಮಾಡು ಪುಡಿಮಾಡು ಚೂರುಮಾಡು.

(೫) ಇಡು ಹಾಕು ಒಗೆ ಎಸೆ ಬೀರು ಎರಚು ಚೆಲ್ಲು.

ಕೆಲವು ಮಾತುಗಳಿಗೆ ಅರ್ಥವು ನಿರ್ದಿಷ್ಟವಾಗಿರುವುದರಿಂದ ಅವು, ಹಾಕಿದಕಡೆ ಬಿದ್ದಿರುವ ವಸ್ತುಗಳ ಹಾಗೆ, ನಿಶ್ಚೇತನವಾಗಿರುವಂತೆ ತೋರುತ್ತವೆ. ಇನ್ನು ಕೆಲವುಗಳಿಗೆ ಜೀವವಿರುವಂತೆ, ಪ್ರಭೆಯಿರುವಂತೆ, ತೋರುತ್ತದೆ. ಆ ಜೀವ ಆ ಪ್ರಭೆ ಮಾತಿನ

ಚೈತನ್ಯದ ಮೇಲೆ ಹೋಗುತ್ತದೆ. ಒಂದು ಬೆಂಡುಹೂವಿಗೂ ಮಲ್ಲಿಗೆ ಹೂವಿಗೂ ಹೇಗೆ ವ್ಯತ್ಯಾಸವೋ ಮರದ ಆನೆಗೂ ಜೀವದ ಆನೆಗೂ ಹೇಗೆ ವ್ಯತ್ಯಾಸವೋ, ಬೆಳಗುವ ಗ್ರಹಕ್ಕೂ ಮಿನುಗುವ ನಕ್ಷತ್ರಕ್ಕೂ ಹೇಗೆ ವ್ಯತ್ಯಾಸವೋ, ಹಾಗೆ ಅವಕ್ಕೆ ವ್ಯತ್ಯಾಸವಿರುತ್ತದೆ. ಮಧ್ಯಾಹ್ನದ ಸೂರ್ಯನ ಸುತ್ತ ಕಣ್ಣು ಕೋರೈಸುವಷ್ಟು ಪ್ರಭೆಯಿರುತ್ತದೆ; ಸಂಜೆಯ ಸೂರ್ಯ ಒಂದು ಕೆಂಪಿನ ಗುಂಡು. ಶರತ್ಕಾಲದ ಹುಣ್ಣಿಮೆಯ ಚಂದ್ರ ಅಮೃತಕಿರಣಗಳನ್ನು ಸುತ್ತಲೂ ಸೂಸುತ್ತಾನೆ, ಮಳೆಗಾಲದಲ್ಲಿ ಮೋಡ ಮುಚ್ಚಿದ ಚಂದ್ರ ಮಂಕು; ಮಂಡಲದಿಂದ ಹೊರಗೆ ಅದರ ಬೆಳಕಿಲ್ಲ. ಈ ನಡುಹಗಲಿನ ಸೂರ್ಯನೂ ಹುಣ್ಣಿಮೆಯ ಚಂದ್ರನೂ ಸಂಜೆಯ ಸೂರ್ಯ ಮೋಡದ ಚಂದ್ರ ಇವರಿಗಿಂತ ಹೇಗೆ ಮೇಲೆನ್ನಬಹುದೋ ಹಾಗೇ ಧ್ವನಿಯಿಂದ ಕೂಡಿದ ಮಾತನ್ನೂ ವಾಚ್ಯಕ್ಕಿಂತ ಮೇಲೆನ್ನಬಹುದು. 'ಯಾವತ್ ಪ್ರತಾಪನಿಧಿರಾಕ್ರಮತೇ ನ ಭಾನು-ರಹ್ನಾಯ ತಾವದರುಣೇನ ತಮೋ ನಿರಸ್ತಮ್' (ರಘುವಂಶ ೫–೭೧) ಎಂಬ ಕಾಳಿದಾಸನ ವಾಕ್ಯವನ್ನು ನೋಡಿ: ಇಲ್ಲಿ 'ಭಾನುಃ' ಎಂಬ ಮಾತು 'ಪ್ರತಾಪನಿಧಿ'ಯನ್ನೂ ಅವನ 'ಆಕ್ರಮಣ'ವನ್ನೂ ಹೇಗೆ ಪ್ರತಿಫಲಿಸುತ್ತದೆ! ಆ ಕೆಲಸವನ್ನು ಸೂರ್ಯನೆಂಬ ಅರ್ಥಕೊಡಬಲ್ಲ ಮತ್ತಾವ ಮಾತು ಮಾಡಬಲ್ಲುದು? ಹಾಗೇ ಅಶ್ವಘೋಷನು ಒಂದು ಕೆರೆಯನ್ನು ಬಿಳಿಯ ಸೀರೆ ಸುತ್ತಿಕೊಂಡು ಮಲಗಿರುವ ಪ್ರಮದೆಗೆ ಹೋಲಿಸಿರುವ ಈ ಶ್ಲೋಕವನ್ನು ನೋಡಿ (ಬುದ್ಧಚರಿತೆ ೪–೪೯) —

ದೀರ್ಘಿಕಾಂ ಪ್ರಾವೃತಾಂ ಪಶ್ಯ ತೀರಜೈಃ ಸಿಂಧುವಾರಕೈಃ।
ಪಾಂಡುರಾಂಶುಕಸಂವೀತಾಂ ಶಯಾನಾಂ ಪ್ರಮದಾಮಿವ॥

ಇಲ್ಲಿ 'ಶಯಾನಾಂ ಪ್ರಮದಾಂ' ಎಂಬುದಕ್ಕೆ ಬದಲಾಗಿ 'ಪ್ರಸುಪ್ತಾಂ ವನಿತಾಂ' ಎಂದೋ 'ಪ್ರಸುಪ್ತಾಂ ಲಲನಾಂ' ಎಂದೋ ಹೇಳಬಹುದು, ಛಂದಸ್ಸು ಕೆಡುವುದಿಲ್ಲ. ಆದರೆ ಅರ್ಥಪುಷ್ಟಿಯಲ್ಲಿ, ಧ್ವನಿಯಲ್ಲಿ, ಎಷ್ಟು ವ್ಯತ್ಯಾಸವಾಗುತ್ತದೆ! ವನಿತೆಯೆಂದರೆ ಹೆಂಗಸು, ಅಷ್ಟೇಯೆ; ಲಲನೆಯೆಂದರೆ ಚಂಚಲೆಯಾಗಿ ಬಳಕುತ್ತಿರುವ ಲತಾಂಗಿ, ಪ್ರಮದೆ, ಯೌವನದಿಂದ ಕೊಬ್ಬಿ ರಸರಸವಾಗಿರುವವಳು. ಪ್ರಸುಪ್ತಾಂ ಎಂದರೆ ನಿದ್ದೆ ಹೋಗಿರುವವಳು; ಶಯಾನಾಂ ಎಂದರೆ ಕಾಲು ನೀಡಿಕೊಂಡು, ಆದರೆ ಎಚ್ಚರವಾಗಿ, ಮಲಗಿರುವವಳು. ಹಾಗೇ ದೀರ್ಘಿಕಾಂ ಎಂಬುದಕ್ಕೆ ಬದಲಾಗಿ ವಾಪಿಕಾಂ ಎಂದೋ ಸರಃ ಎಂದೋ ಹೇಳಬಹುದು. ದೀರ್ಘಿಕೆ ನೀಳ, ವಾಪಿ ಆಳ; ಸರಸ್ಸು ಕುರುಚಲನ್ನೋ ಕುಂಟೆಯನ್ನೋ ಮನಸ್ಸಿಗೆ ತರುತ್ತದೆ. ಅದು ನಪುಂಸಕಲಿಂಗ. ಇದನ್ನು ಹೆಚ್ಚು ವಿವರಿಸಬೇಕಾಗಿಲ್ಲ. ಈ ಮಾತುಗಳ ಔಚಿತ್ಯ ಧ್ವನಿ ಸ್ವಾರಸ್ಯಗಳು ಅವರವರ ಸಂಸ್ಕಾರಾಭಿರುಚಿಗಳ ಮೇಲೆ ಹೋಗುತ್ತವೆ. ಅಶ್ವ

ಘೋಷ ಕಾಳಿದಾಸರು ಆನಂದವರ್ಧನನಿಗಿಂತ ಐನೂರು ಆರುನೂರು ವರ್ಷಗಳಷ್ಟು ಹಿಂದೆ ಇದ್ದವರು ; ಅವರು ಧ್ವನ್ಯಾಲೋಕದ ನಿಯಮವನ್ನು ಅನುಸರಿಸಿ ಬರೆದವರೇ ನಲ್ಲ ; ಅಂಥವರ ಪ್ರಯೋಗಗಳನ್ನು ಪರಿಶೀಲಿಸಿ, ಆನಂದವರ್ಧನನು ತನ್ನ ಲಕ್ಷಣ ಗ್ರಂಥವನ್ನು ಬರೆದನು.

ವಾಲ್ಮೀಕಿವ್ಯಾಸಮುಖ್ಯಾಶ್ಚ ಯೇ ಪ್ರಖ್ಯಾತಾಃ ಕವೀಶ್ವರಾಃ ।
ತದಭಿಪ್ರಾಯಬಾಹ್ಯೋಽಯಂ ನಾಸ್ಮಾಭಿರ್ದರ್ಶಿತೋ ನಯಃ ॥ (ಪುಟ ೧೬೮)

ಅವರು ಪ್ರಯೋಗಿಸುವ ಮಾತುಗಳು 'ಹತ್ತುಕಟ್ಟುವ ಕಡೆ ಒಂದು ಮುತ್ತು ಕಟ್ಟು' ಎಂಬಂತಿರುತ್ತವೆ ; ಕತ್ತಲೆಯ ಮನೆಯಲ್ಲಿ ದೀಪ ತಂದಿಟ್ಟಂತಿರುತ್ತವೆ —

ವಿಚ್ಛಿತ್ತಿಶೋಭಿನೈಕೇನ ಭೂಷಣೇನೇವ ಕಾಮಿನೀ ।
ಪದದ್ಯೋತ್ಯೇನ ಸುಕವೇಃ ಧ್ವನಿನಾ ಭಾತಿ ಭಾರತೀ ॥ (ಪುಟ ೧೨೫)

ಒಂದು ಮರದ ದಿಮ್ಮಿಯನ್ನು ಸಲಾಕಿಯಿಂದ ಹೊಡೆದರೆ 'ಥಡ್' ಎಂದು ಸದ್ದಾಗುತ್ತದೆ ; ಉತ್ತರ ಕ್ಷಣದಲ್ಲಿಯೇ ಅಡಗಿಹೋಗುತ್ತದೆ. ಅದೇ ಒಂದು ಲೋಹದ, ಅದರಲ್ಲಿಯೂ ಬೆಳ್ಳಿಯ ಅಥವಾ ಕಂಚಿನ, ಪಾತ್ರೆಯನ್ನು ಹೊಡೆದರೆ, 'ಠಣ್' ಎಂದು ಸದ್ದಾಗುತ್ತದೆ. ಆ ಸದ್ದು ಅಲ್ಲಿಯೇ ಅಡಗಿಹೋಗುವುದಿಲ್ಲ ; ಹರಡುತ್ತದೆ, ಅಲೆ ಅಲೆಯಾಗಿ ಮುಂದುವರಿಯುತ್ತದೆ, 'ಅನುರಣನ'ವಾಗುತ್ತದೆ. ಹಾಗೇ, ಪರ್ವತ ಪ್ರಾಂತದಲ್ಲಿ ಸಿಡಿಯುವ ಸಿಡಿಲು ಮಾರ್ದನಿ ಪಡಿಮಾರ್ದನಿಗೊಟ್ಟು ಕುಡಿವರಿದು ಆ ಪ್ರಾಂತವನ್ನೆಲ್ಲಾ ಗುಡುಗುಡು ಶಬ್ದದಿಂದ ತುಂಬುತ್ತದೆ. ವಸ್ತುತಃ ಅದು 'ಢಂ !' ಎಂಬ ಒಂದೇ ಏಟು, ಒಂದೇ ಸದ್ದು. ಹೀಗೆ ಸತ್ತ್ವವುಳ್ಳ, ಜೀವವುಳ್ಳ, ಒಂದು ಮಾತೂ ಹತ್ತು ಮಾತಿನ ಕೆಲಸಮಾಡುತ್ತದೆ ; ಮಾತನಾಡಿ ಆಗದ ಕೆಲಸವನ್ನೂ ಮಾಡುತ್ತದೆ ; ಇದು 'ಧ್ವನಿ'ಯ ಮಹತ್ವ. ಈ ಧ್ವನಿಯನ್ನು ಮಾತಿನ 'ಜೀವ' ವೆಂದಾದರೂ ಕರೆಯಬಹುದು', 'ಆತ್ಮ'ವೆಂದಾದರೂ ಕರೆಯಬಹುದು, 'ಪ್ರಭೆ' ಎಂದಾದರೂ ಎನ್ನಬಹುದು.

ಧ್ವನಿಯು ಮಾತಿನ ಭಾಗದಲ್ಲಾದರೂ ಇರಬಹುದು, ಮಾತುಗಳು ಸೇರಿ ಆದ ವಾಕ್ಯ, ಪ್ರಬಂಧ ಇವುಗಳಲ್ಲಿ ಬೇಕಾದರೂ ಇರಬಹುದು :—

ಸುಪ್‌ತಿಙ್‌ವಚನಸಂಬಂಧೈಃ ತಥಾ ಕಾರಕಶಕ್ತಿಭಿಃ ।
ಕೃತ್ತದ್ಧಿತಸಮಾಸೈಶ್ಚ ದ್ಯೋತ್ಯೋಽಲಕ್ಷ್ಯಕ್ರಮಃ ಕ್ವಚಿತ್ ॥ (ಪುಟ ೧೫೪)
ಯಸ್ತ್ವಲಕ್ಷ್ಯಕ್ರಮವ್ಯಂಗ್ಯೋ ಧ್ವನಿವರ್ಣಪದಾದಿಷು ।
ವಾಕ್ಯೇ ಸಂಘಟನಾಯಾಂ ಚ ಸ ಪ್ರಬಂಧೇಽಪಿ ದೀಪ್ಯತೇ ॥ (ಪುಟ ೧೨೫)

'ಬೆಳಗಾಯಿತು' 'ಸಂಜೆಯಾಯಿತು' ಎಂಬ ವಾಕ್ಯಕ್ಕೆ ಸಂದರ್ಭಾನುಸಾರವಾಗಿ

ಬಗೆಬಗೆಯ ಅರ್ಥವಾಗುತ್ತದೆ. ಅವೆಲ್ಲಾ ಧ್ವನಿತಾರ್ಥವೇ. ಅದು ಸ್ವತಸ್ಸಿದ್ಧವಾಗಿರಬಹುದು, ಸಂದರ್ಭ ಸನ್ನಿವೇಶಗಳಿಂದ ಬಂದಿರಬಹುದು, ಉಚ್ಚರಿಸುವ ಬಗೆಯಿಂದ (ಕಾಕು) ಬಂದಿರಬಹುದು. ರಾಮ ರಾವಣ ಅವನು ನಾನು—ಇಂಥ ಮಾತುಗಳಿಗೆ ಪ್ರಕರಣವಿಶೇಷದಲ್ಲಿ ಬಹಳವಾದ ಅರ್ಥ ಬಂದು ತುಂಬುತ್ತದೆ. ರಾಮಾಯಣ ಭಾರತಗಳಿಗೆ ಧ್ವನಿತವಾಗುವ ರಸಭಾವಗಳೇ ಬೇರೆ, ವಾಚ್ಯವಾದ ರಸಭಾವಗಳೇ ಬೇರೆ.

ಹೀಗೆ ಕಾವ್ಯದ ಎಲ್ಲಾ ಅಂಶಗಳಲ್ಲಿಯೂ ಕಂಡುಬರುವ 'ಧ್ವನಿ'ಯನ್ನು ಆನಂದವರ್ಧನನು ಬಿಡಿಸಿ, ತೋರಿಸಿ, ಅದರ ಪ್ರಾಧಾನ್ಯದ ಮೇಲೆ ಕಾವ್ಯದ ಯೋಗ್ಯತೆಯು ಹೆಚ್ಚುಕಡಮೆಯಾಗುವುದೆಂದು ಹೇಳಿದನು: ಅದೇ ಪ್ರಧಾನವಾಗಿರುವುದು ಉತ್ತಮಕಾವ್ಯ, ಅಪ್ರಧಾನವಾಗಿರುವುದು ಮಧ್ಯಮಕಾವ್ಯ, ಇಲ್ಲದೆಯೇ ಇರುವುದು—'ದುಷ್ಕರ'ಕಾವ್ಯಗಳು—ಅಧಮಕಾವ್ಯ, (ಪುಟ ೨೨೫-೨೬). ಅಧಮ ಕಾವ್ಯವೂ ಕಾವ್ಯವೇ; ಏಕೆಂದರೆ ಅದರಲ್ಲಿಯೂ ಶಬ್ದಾರ್ಥಗಳಿರುತ್ತವೆ; ಚಮತ್ಕಾರವಿರುತ್ತದೆ. ಆದ್ದರಿಂದ ಅದು 'ಚಿತ್ರ' ಕಾವ್ಯ; ರೇಖಾಚಿತ್ರದಂತೆ ಅದೂ ಚಿತ್ರ; ಕಥೆಯ ಒಂದು ಸನ್ನಿವೇಶವನ್ನು ಚಿತ್ರಿಸುವ ಚಿತ್ರದಂತೆ ರಸಭಾವವ್ಯಂಜಕವಾದ ಕಲಾಕೃತಿಯಲ್ಲ. ಆದರೂ "ಮುಖ್ಯವಾಗಿ ಕಾವ್ಯವೆಂಬುದು 'ಧ್ವನಿ'ಯೊಂದೇ ಎಂಬುದು ತತ್ತ್ವ." (ಪುಟ ೨೨೯)

ಆದ್ದರಿಂದ ಶ್ರೇಷ್ಠನಾದ ಕವಿಯು ಔಚಿತ್ಯವರಿತು ಇಂಥ ಪದಗಳನ್ನು ವಿವೇಚನೆಯಿಂದ ಆರಿಸಿಕೊಂಡು ಕಾವ್ಯಕಟ್ಟಿದರೆ ಅದು ಉತ್ತಮ ಕಾವ್ಯವಾಗುತ್ತದೆ. ಈ ಔಚಿತ್ಯವೇ 'ಪರಮರಹಸ್ಯ'—

ಪ್ರಸಿದ್ಧೌಚಿತ್ಯಬಂಧಸ್ತು ರಸಸ್ಯೋಪನಿಷತ್ಪರಾ ॥ (ಪುಟ ೧೪೭)

ಭರತನು 'ವಿಭಾವಾನುಭಾವ ವ್ಯಭಿಚಾರಿ ಸಂಯೋಗಾದ್ರಸನಿಷ್ಪತ್ತಿಃ' ಎಂದು ರಸಕ್ಕೆ ವಿಶಿಷ್ಟ ಲಕ್ಷಣವನ್ನು ಹೇಳಿ ಅದನ್ನು ನಾಟ್ಯದಲ್ಲಿ ಪ್ರತಿಪಾದಿಸಿದ ಮೇಲೆ ಅದಕ್ಕಿಂತ ಭಿನ್ನವಾದ ಕಾವ್ಯದ ಲಕ್ಷಣವನ್ನು ಹೇಳಹೊರಟ ಆಲಂಕಾರಿಕರು ರಸವನ್ನುಳಿದು ಮಿಕ್ಕ ಶಬ್ದಾರ್ಥವೈಚಿತ್ರ್ಯವನ್ನು—ರೀತಿ ಗುಣ ಅಲಂಕಾರ ವಕ್ರೋಕ್ತಿ—ಅದರಲ್ಲಿ ಪ್ರಧಾನವಾಗಿ ಪ್ರತಿಪಾದಿಸಿದರು. ರಸವು ಅವರಿಗೆ ತಿಳಿದಿದ್ದರೂ ಅದು ರಂಗದಲ್ಲಿ ಪಾತ್ರಾದಿಗಳಿಂದ ನೋಟ ಮುಗುಳುನಗೆ ಸನ್ನೆ ಮುಂತಾದ ಅಭಿನಯದ ಮೂಲಕ ವ್ಯಕ್ತವಾಗತಕ್ಕದ್ದೆಂಬ ಭಾವವಿದ್ದದ್ದರಿಂದ ಅದನ್ನು ಕಾವ್ಯದಲ್ಲಿ ಮುಖ್ಯವಾಗಿ ಪರಿಗಣಿಸಲಿಲ್ಲ. ರಸವಿದ್ದರೆ ಅದು ರಸವದಲಂಕಾರವಾಗಲಿ, ಕಾಂತಿ ಮುಂತಾದ ಗುಣಗಳಾಗಲಿ ಎಂದರು. ಕಾವ್ಯದಲ್ಲಿ ಧ್ವನಿಗೇ ಪ್ರಾಧಾನ್ಯ, ಧ್ವನಿಯಲ್ಲಿ

ರಸಧ್ವನಿಯೇ ಶ್ರೇಷ್ಠ, ನಾಟ್ಯದಲ್ಲಿ ವಿಭಾವಾದಿಗಳಿಂದ ಹೇಗೆ ರಸವು 'ವ್ಯಕ್ತ'ವಾಗ ಬಹುದೋ ಹಾಗೇ ಕಾವ್ಯದಲ್ಲಿಯೂ ಶಬ್ದಗಳಿಂದ ವ್ಯಕ್ತವಾಗಬಹುದು. "ರಸಾನು ಗುಣವಾದ ವಿಶಿಷ್ಟವಿಷಯಗಳನ್ನು ಸೇರಿಸಿಕೊಳ್ಳುವುದರಿಂದ ಅತಿಶಯವಾದ ಸೊಗಸು" ಬರುತ್ತದೆ (ಪುಟ ೧೯೫) ಎಂದು ಆನಂದವರ್ಧನನು ಧೈರ್ಯವಾಗಿ ಹೇಳಿದ ಮೇಲೆ ಕ್ರಮಕ್ರಮವಾಗಿ ಅದರ ಸತ್ಯವನ್ನರಿತು ವಿಶ್ವನಾಥನ ಕಾಲಕ್ಕೆ (೧೪ ನೆಯ ಶತ) 'ವಾಕ್ಯಂ ರಸಾತ್ಮಕಂ ಕಾವ್ಯಂ' ಎಂದು ಸ್ಪಷ್ಟವಾಗಿ ಕಾವ್ಯಲಕ್ಷಣದಲ್ಲಿ ರಸವನ್ನು ಸೇರಿಸುವಂತಾಯಿತು. ಹೀಗೆ ಕಾವ್ಯದಲ್ಲಿಯೂ ರಸವೇ ಪ್ರಧಾನವೆಂದು ಒಪ್ಪಲು ಆನಂದವರ್ಧನನ ಕೃತಿ ದಾರಿಮಾಡಿಕೊಟ್ಟಿತು.

ಆನಂದವರ್ಧನನು ಧ್ವನಿತತ್ತ್ವವನ್ನು ವಿವರಿಸುತ್ತೇನೆಂದು ಹೊರಟರೂ ಪ್ರಾಸಂಗಿಕವಾಗಿ, ರಸಗಳಲ್ಲಿ ಪ್ರಾಧಾನ್ಯ ವಿವೇಚನೆ, ಅವುಗಳ ಉತ್ಕರ್ಷಾಪಕರ್ಷಗಳು, ಔಚಿತ್ಯಾನೌಚಿತ್ಯಗಳು, ವಿರೋಧಾವಿರೋಧಗಳು, ಶಾಂತರಸ ಉಂಟೇ ಇಲ್ಲವೇ, ಶೃಂಗಾರವು ಏಕೆ ಅತ್ಯಂತ ರಮಣೀಯ, ಗುಣ ರೀತಿ ಅಲಂಕಾರ ಮುಂತಾದುವುಗಳ ಸ್ಥಾನವೇನು, ಕವಿಗೆ ಸ್ವಾತಂತ್ರ್ಯ ಎಷ್ಟುಮಟ್ಟಿನದು, ಯಾವುದು ಅನ್ಯಕೃತಿಯ ಛಾಯೆ, ಯಾವುದು ಚೌರ್ಯ ಎಂದು ಮುಂತಾದ ವಿಚಾರಗಳನ್ನೂ ವಿಮರ್ಶೆಮಾಡಿದ್ದಾನೆ. ಪ್ರಾಯಶಃ 'ಪ್ರತಿಭೆ'ಯನ್ನು ಇಷ್ಟು ವಿಸ್ತಾರವಾಗಿ ವಿವರಿಸಿರುವವನು ಈತನೊಬ್ಬನೇ. "ಈ ಪ್ರಪಂಚದಲ್ಲಿ ಎಷ್ಟೋ ಬಗೆಯ ಕವಿಪರಂಪರೆಯು ಬಂದು ಹೋಗುತ್ತಿರುವುದಾದರೂ ಕಾಳಿದಾಸನೇ ಮೊದಲಾದ ಮಹಾಕವಿಗಳು" ಎಲ್ಲೋ ಇಬ್ಬರು ಮೂವರು—ಅಥವಾ ಐದಾರು ಜನ—ಎಂದು ಖಂಡಿತವಾಗಿ ಹೇಳಿ ವ್ಯಾಸ ವಾಲ್ಮೀಕಿ ಕಾಳಿದಾಸರ ಕಾವ್ಯಗಳಿಂದ ಮನಸಾರ ಉದಾಹರಣೆಗಳನ್ನು ಕೊಟ್ಟಿರುವ ಆಲಂಕಾರಿಕನೂ ಆನಂದವರ್ಧನನೊಬ್ಬನೇ. ಧ್ವನ್ಯಾಲೋಕದ ನಾಲ್ಕನೆಯ ಉದ್ಯೋತವೆಲ್ಲಾ ರಾಮಾಯಣ ಮಹಾಭಾರತಗಳ ವಿಮರ್ಶೆಯೇ ಎಂದರೆ ತಪ್ಪಾಗಲಾರದು.

ಧ್ವನ್ಯಾಲೋಕವನ್ನು ನೋಡಿದರೆ, ಅದರಲ್ಲಿ ಮಹಾಭಾರತ ರಾಮಾಯಣಗಳಿಂದ ತೆಗೆದ ಘನವಾದ ಉದಾಹರಣೆಗಳ ಜೊತೆಗೆ, 'ಧ್ವನಿ' ಎಂದು ತೀರ ಸಾಧಾರಣವಾದ, ಅಶ್ಲೀಲವೆಂದು ತೋರುವ, ಬಿಡಿ ಪ್ರಾಕೃತಪದ್ಯಗಳೂ ಉದಾಹರಣೆಗಳಾಗಿ ಕೊಡಲ್ಪಟ್ಟಿರುವುದು ಕಂಡುಬರುತ್ತದೆ. ಇವು ಎಲ್ಲಾ ಸಂದರ್ಭಗಳಲ್ಲಿಯೂ ಉತ್ತಮ ಕಾವ್ಯಕ್ಕೆ ಉದಾಹರಣೆಯೆಂದು ಭಾವಿಸಬಾರದು. ಧ್ವನಿಯ ಸ್ವರೂಪವನ್ನು ತೋರಿಸಲು ಕೊಟ್ಟ ಉದಾಹರಣೆಗಳೆಂದು ಭಾವಿಸಬೇಕು. ಆನಂದವರ್ಧನನ ಕಾಲದಲ್ಲಿ ಪ್ರಾಕೃತ ಕಾವ್ಯಕ್ಕೆ ಇನ್ನೂ ಹೆಚ್ಚಾದ ಮನ್ನಣೆಯಿತ್ತು; ಶೃಂಗಾರರಸಕ್ಕೂ ಪಕ್ಷಪಾತವಿತ್ತು; ಅದನ್ನು ಅವನು ಮುಕ್ತಕಂಠದಿಂದ ಹೇಳಿದ್ದಾನೆ. (ಪುಟ ೧೮೫)

ಶೃಂಗಾರೀ ಚೇತ್ ಕವಿಃ ಕಾವ್ಯೇ ಜಾತಂ ರಸಮಯಂ ಜಗತ್ ॥ (ಪುಟ ೨೨೮)
ಶೃಂಗಾರ ಏವ ಮಧುರಃ ಪರಃ ಪ್ರಹ್ಲಾದನೋ ರಸಃ ॥ (ಪುಟ ೭೦)

ಸ್ವತಂತ್ರವಾಗಿ ಯೋಚಿಸಲೂ ಬರೆಯಲೂ ಪ್ರಯತ್ನಪಡಿ, ಸರಸ್ವತಿಯು ಸಹಾಯಮಾಡುತ್ತಾಳೆ–ಎಂದು ಆನಂದವರ್ಧನನು ಕವಿಗಳಿಗೆ ಉಪದೇಶಮಾಡಿದನು. ಇದು ನಿಜ. ಅವನೇ ಇದಕ್ಕೆ ಉದಾಹರಣೆ. ಸರಸ್ವತಿಯು ಅವನಿಗೆ ಒಲಿದಿದ್ದಾಳೆ. ಅವನು ಸತ್ಯಕ್ಕೆ ಮಣಿದು, ತಾನು ಪ್ರತಿಪಾದಿಸಿರುವ ಧ್ವನಿತತ್ತ್ವವು 'ಸಮಾಮ್ನಾತ ಪೂರ್ವ'ವೆಂದು ಹೇಳಿದರೂ ಅವನ ಧೀರ ಪ್ರತಿಪಾದನೆ ನೂತನ ಸೃಷ್ಟಿಗೇನೂ ಕಡಮೆಯದಲ್ಲ; ಅವನ ಉಪಜ್ಞತೆಗೆ ಏನೂ ಕುಂದಿಲ್ಲ; ಅಂಥ ಪ್ರತಿಭಾವಂತನಾದ ಆಲಂಕಾರಿಕ ಸಂಸ್ಕೃತದಲ್ಲಿ ಮತ್ತೆ ಹುಟ್ಟಲಿಲ್ಲ.

ಈ ಸತ್ಕಾವ್ಯತತ್ತ್ವ ಪರಿಪಕ್ವಬುದ್ಧಿಯುತರಿಗೆ ಕೂಡ ಕಂಡರೂ ಕಾಣದ ಹಾಗೆ ಮರೆಯಾಗಿತ್ತು; ಅದನ್ನು ಆನಂದವರ್ಧನನು ಸಂಸ್ಕೃತದಲ್ಲಿ ವಿವರಿಸಿದನು. ಸಂಸ್ಕೃತದಲ್ಲಿದ್ದರೂ ಕನ್ನಡಿಗರ ಪಾಲಿಗೆ ಇಲ್ಲದಂತಿದ್ದ ಅದನ್ನು ಡಾ. ಕೃಷ್ಣಮೂರ್ತಿಯವರು ಕನ್ನಡದಲ್ಲಿ ರಚಿಸಿದರು. ಇದು ಕನ್ನಡಿಗರಾದ ಭವ್ಯಾತ್ಮರಿಗೆ ಕಲ್ಪತರೂಪಮಾನ ಮಹಿಮೆಯುಳ್ಳದ್ದಾಗಿ, ಒಂದು ಅಪೂರ್ವವಾದ ಭೋಗ್ಯವಸ್ತುವೆನಿಸಲಿ— ಸೋಽಯಂ ಕಲ್ಪತರೂಪಮಾನಮಹಿಮಾ ಭೋಗ್ಯೋಽಸ್ತು ಭವ್ಯಾತ್ಮನಾಮ್ !

ಬೆಂಗಳೂರು
೨೧–೦೨–೧೯೫೧

ಎ. ಆರ್. ಕೃಷ್ಣಶಾಸ್ತ್ರೀ

# ಅರಿಕೆ

ಈಗ ಹತ್ತು ವರ್ಷಗಳ ಹಿಂದೆ ಸಂಸ್ಕೃತ ಧ್ವನ್ಯಾಲೋಕದ ಕಾವ್ಯತತ್ತ್ವವನ್ನು ಕನ್ನಡದಲ್ಲಿ ಯಥಾಮತಿ ಬರೆಯುವ ಒಂದು ಸುಸಂಧಿ ಪ್ರೊ. ಕೃಷ್ಣಶಾಸ್ತ್ರಿಗಳ ಅನುಗ್ರಹದಿಂದ ನನಗೆ ಒದಗಿತು. ಧ್ವನಿತತ್ತ್ವವನ್ನು ಕುರಿತ ನನ್ನ ವಿವೇಚನೆ "ಆನಂದವರ್ಧನನ ಕಾವ್ಯಮೀಮಾಂಸೆ" ಯೆಂಬ ಶೀರ್ಷಿಕೆಯಲ್ಲಿಯೂ (ಪುಟಗಳು ೧೨೪), ಇಡಿಯ ಸಂಸ್ಕೃತ ಮೂಲಗ್ರಂಥದ ಅನುವಾದವು "ಕನ್ನಡ ಧ್ವನ್ಯಾಲೋಕ" ಎಂಬ ಶೀರ್ಷಿಕೆಯಲ್ಲಿಯೂ (ಪುಟಗಳು ೨೦೪), ಮೊದಲಿಗೆ 'ಪ್ರಬುದ್ಧ ಕರ್ಣಾಟಕ'ದ ಸಂಚಿಕೆಗಳಲ್ಲಿ ಪ್ರಕಟವಾದುವು. ಇವೆರಡನ್ನೂ ಕೂಡಿಸಿ ಒಂದು ಗ್ರಂಥವಾಗಿ ತ. ಸು. ವೆಂ. ಸ್ಮಾರಕ ಗ್ರಂಥಮಾಲೆಯಲ್ಲಿ ಪ್ರಕಟಿಸಿದ ಉಪಕಾರ ನನ್ನ ಪ್ರಕಾಶಕ-ಮಿತ್ರರಾದ ಶ್ರೀ ಟಿ.ಎಸ್. ಶಾಮರಾವ್ ಮತ್ತು ಶ್ರೀ ಎಚ್.ಎಂ. ಶಂಕರನಾರಾಯಣರಾಯರದು. ಅಚ್ಚುಮಾಡಿಸಲಾಗಿದ್ದ ಕೆಲವೇ ಪ್ರತಿಗಳು ಈಗಾಗಲೇ ತೀರಿ ಕೆಲವು ವರ್ಷಗಳಾದುವು. ಈ ನಡುವೆ ಮೊದಲ ಮುದ್ರಣವನ್ನು ಓದಿದ ನನ್ನ ವಿದ್ವನ್ಮಿತ್ರರಲ್ಲಿ ಕೆಲವರಿಂದ ಇದರ ಹೆಚ್ಚಿನ ಉಪಯುಕ್ತತೆಗಾಗಿ ಎಷ್ಟೋ ಸಲಹೆಗಳೂ ಬಂದಿದ್ದವು. ಅವರಲ್ಲಿ ಮುಖ್ಯವಾಗಿ ಡಾ. ಎಂ. ವಿ. ಗೋವಿಂದಸ್ವಾಮಿ, ಪ್ರೊ. ಎ. ಎನ್. ಮೂರ್ತಿರಾವ್, ಪ್ರೊ. ನಂ. ಶಿವರಾಮಶಾಸ್ತ್ರಿ, ಇವರನ್ನು ಇಲ್ಲಿ ನೆನೆಯಬೇಕು. ಈ ಮಹನೀಯರ ಅಭಿಪ್ರಾಯದಂತೆ ನನ್ನ ಮನಸ್ಸಿನಲ್ಲಿ ನೆಟ್ಟ ಅಭಿಪ್ರಾಯಗಳೆಂದರೆ ಇವು —

೧. 'ವಿವೇಚನೆಯ ಭಾಗ ಸ್ವತಂತ್ರವಾಗಿದೆ, ಗ್ರಂಥದ ಅರ್ಥಜ್ಞಾನಕ್ಕೆ ಆದರಿಂದಾಗುವ ಸಹಾಯ ಅಲ್ಪ.'

೨. 'ಅನುವಾದ ಭಾಗ ಶಾಸ್ತ್ರಪರಿಚಯವಿಲ್ಲದವರಿಗೆ ಸಮಗ್ರಾರ್ಥವನ್ನು ಮಾಡಿಕೊಡುವುದು ದುಸ್ತರ; ಇಲ್ಲಿ ವಿವರಣೆಗಳಿಗೆ ವಿಶೇಷ ಅಗತ್ಯವಿದೆ.'

೩. '"ಧ್ವನ್ಯಾಲೋಕ"ದ ಸಮರ್ಪಕ ಅಭ್ಯಾಸಕ್ಕೆ ಅಭಿನವಗುಪ್ತರ "ಲೋಚನ"ದ ಸಹಾಯ ಅತ್ಯಗತ್ಯ.'

ಈ ನ್ಯೂನತೆಗಳನ್ನು ನಾನು ಇಲ್ಲವೆನ್ನುವಂತಿಲ್ಲ. ಆದರೆ ಅದಕ್ಕೆ ಮುಖ್ಯ ಕಾರಣವೆಂದರೆ ನನಗೆ ಆಗ ಅನಿವಾರ್ಯವಾಗಿದ್ದ ಪತ್ರಿಕೆಯ ಸ್ಥಲ ಪರಿಮಿತಿಯೆಂದು ನಿವೇದಿಸಿಕೊಳ್ಳಬೇಕಾಗಿದೆ. ಈ ಗ್ರಂಥದ ಪುನರಾವೃತ್ತಿಯ ಮಾತನ್ನು ಶ್ರೀ ಎಚ್.ಎಂ. ಶಂಕರನಾರಾಯಣರಾಯರು ತೆಗೆದಾಗ, ಗ್ರಂಥದ ಗಾತ್ರ ದ್ವಿಗುಣವಾಗಲು ಒಪ್ಪುವುದಾದರೆ ಮಾತ್ರ, ನಾನು ಹೊಸದಾಗಿ ಅದನ್ನು ಸಿದ್ಧಮಾಡಿಕೊಡಲು ಯತ್ನಿಸುವುದಾಗಿ ತಿಳಿಸಿದೆ. ಅವರು ಸಂತೋಷವಾಗಿ ಅದನ್ನು ಒಪ್ಪಿದರು. ನನಗೆ ತೋರಿದಷ್ಟು

ವಿಸ್ತಾರವಾಗಿ ಬರೆಯಬಹುದೆಂದು ಅಭಯವಿತ್ತರು. ಗುರುಗಳಾದ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳಿಗೆ ಡಾಕ್ಟರೇಟ್ ಪದವೀದಾನ ಸಮಾರಂಭದ ಸುಮುಹೂರ್ತದಲ್ಲಿ ಅಭಿನವಗುಪ್ತರ "ಲೋಚನ"ದ ಮುಖ್ಯಭಾಗವನ್ನೆಲ್ಲ ಕನ್ನಡಿಸುವ ಕಾರ್ಯಕ್ಕೆ ಆರಂಭಮಾಡಿದೆ. ಗುರುಗಳ ಆಶೀರ್ವಾದ ಬಲದಿಂದ ಅದು ನಿರ್ವಿಘ್ನವಾಗಿ ಮುಗಿದು, ಮಿತ್ರವರ್ಯ ಪ್ರಕಾಶಕರ ಅನುಗ್ರಹದಿಂದ ಬೇಗ ಮುದ್ರಿತವೂ ಆಗಿ, ಈಗ ಕನ್ನಡಿಗರ ಕೈ ಸೇರುತ್ತಿದೆ. ಡಾ. ಕೃಷ್ಣಶಾಸ್ತ್ರಿಗಳಿಗೆ ಇದನ್ನರ್ಪಿಸುವುದಕ್ಕಿಂತ ಹೆಚ್ಚಿನ ಆನಂದವನ್ನು ನಾನು ಕಾಣೆ.

ಹೀಗೆ ಈ ಗ್ರಂಥ ಹಳೆಯ ಆವೃತ್ತಿಯ ಹೊಸ ಮುದ್ರಣ ಮಾತ್ರವಲ್ಲ. ಅರ್ಧದಷ್ಟಾದರೂ ಇಲ್ಲಿ ಹೊಸ ವಿಷಯ ಸೇರಿದೆ. ಅಭಿನವಗುಪ್ತರ ಅಮೋಘ ವಿಚಾರಸರಣಿಯನ್ನು ಇಡಿಯಾಗಿ ಕೊಡಬೇಕೆಂದು ಯತ್ನಿಸಲಾಗಿದೆ ; ಬಿಟ್ಟಿರುವ ಭಾಗವೆಂದರೆ ಕೇವಲ ಪದಯೋಜನೆ, ಪ್ರತಿಪದಾರ್ಥ, ರೂಪನಿಷ್ಪತ್ತಿ, ಮುಂತಾದ ಅಲ್ಪಾಂಶಗಳೇ ಹೊರತು ತತ್ತ್ವಪ್ರಕ್ರಿಯೆಯನ್ನು ಕುರಿತ ವಿವೇಚನಾಭಾಗವಲ್ಲ. ಹೀಗೆ ಅವರ ತತ್ತ್ವಸಾರ ಈ ಆವೃತ್ತಿಯಲ್ಲಿ ಇದಂ ಪ್ರಥಮವಾಗಿ ಕನ್ನಡದಲ್ಲಿ ಮೂಡಿದೆಯಾಗಿ ಇದಕ್ಕೆ "ಲೋಚನಸಾರ"ವೆಂಬ ನಾಮಕರಣ ಅನ್ವರ್ಥವಾದೀತೆಂದು ನಂಬಿದೆ. ಹೊಸದಾಗಿಯೂ ಎಷ್ಟೋ ಟಿಪ್ಪಣಿಗಳನ್ನು ಬರೆದು ಸೇರಿಸಲಾಗಿದೆ. ಮೊದಲ ಆವೃತ್ತಿಯಲ್ಲಿದ್ದ ಇನ್ನೊಂದು ಕೊರತೆಯನ್ನು – ಆನಂದವರ್ಧನ, ಅಭಿನವಗುಪ್ತರ ಕಾಲದೇಶಾದಿಗಳ ವಿವೇಚನೆ— ಇಲ್ಲಿ ಹೊಸದಾಗಿ ಬರೆದು ಸೇರಿಸಿರುವ ಪೀಠಿಕೆ ನಿವಾರಿಸುತ್ತದೆ. ಅಲ್ಲದೆ ವಿದ್ವಾಂಸರ ಸಲಹೆಗಳನ್ನು ದೃಷ್ಟಿಯಲ್ಲಿಟ್ಟು ಇಡಿಯ ಮೂಲದ ಅನುವಾದವನ್ನು ಪುನರಾಲೋಕಿಸಿ ಸೂಕ್ತ ಬದಲಾವಣೆಗಳನ್ನು ಮಾಡಿದೆ. 'ಆನಂದವರ್ಧನನ ಕಾವ್ಯಮೀಮಾಂಸೆ' ಕೂಡ ಹೆಚ್ಚು ವಿಷಯಗಳನ್ನೊಳಗೊಂಡು ಗ್ರಂಥಾಂತರವಾಗಿ ಮುದ್ರಿತವಾಗುತ್ತಿದೆ.

ಅಭಿನವರೂಪದಲ್ಲಿ ಮತ್ತೆ ಬರುತ್ತಿರುವ ಈ ಕೃತಿ ನಾಡಿನ ರಸಿಕರಿಗೆ ಮೆಚ್ಚಾಗಲೆಂದು ಹಾರೈಸುತ್ತೇನೆ. ನನ್ನ ಲೇಖನ ವ್ಯವಸಾಯ ನಡೆಯುವಂತೆ ಪ್ರೋತ್ಸಾಹವೀಯುತ್ತಿರುವ ಕನ್ನಡ ಜನತೆಗೆ ಈ ಮೂಲಕ ನನ್ನ ಕೃತಜ್ಞತೆಯನ್ನು ಅರ್ಪಿಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ
೧೮–೧೦–೧೯೬೧

ಕೆ. ಕೃಷ್ಣಮೂರ್ತಿ

# ಸಂಪಾದಕರ ಮಾತು

ಸಂಸ್ಕೃತ ಅಲಂಕಾರ ಶಾಸ್ತ್ರದಲ್ಲಿ ಧ್ವನಿಪ್ರಸ್ಥಾನವನ್ನು ಸ್ಥಾಪಿಸುವ 'ಧ್ವನ್ಯಾಲೋಕ' ಆನಂದವರ್ಧನನ ಕೃತಿರತ್ನ. ಈ ಗ್ರಂಥಕ್ಕೆ ಸ್ವತಂತ್ರ ಗ್ರಂಥಕ್ಕೆ ಸಮನಾದ ಹಾಗೂ ಉಜ್ವಲವಾದ 'ಲೋಚನ'ವೆಂಬ ವ್ಯಾಖ್ಯಾನವನ್ನು ಅಭಿನವಗುಪ್ತರು ರಚಿಸಿದ್ದಾರೆ. ಕನ್ನಡದಲ್ಲಿ ಈ ಗ್ರಂಥಗಳು ಇಲ್ಲದಿದ್ದ ಕೊರತೆಯನ್ನು ಮನಸ್ಸಿಗೆ ತಂದುಕೊಂಡು, ನನ್ನ ಪ್ರಿಯ ಮಿತ್ರರಾದ ಡಾ. ಕೆ. ಕೃಷ್ಣಮೂರ್ತಿಗಳು ಧ್ವನ್ಯಾಲೋಕವನ್ನು ಸಂಪೂರ್ಣವಾಗಿಯೂ, ಲೋಚನದ ಸಾರವತ್ತಾದ ಭಾಗಗಳನ್ನು ಟಿಪ್ಪಣಿಗಳ ಮೂಲಕವಾಗಿಯೂ ಅನುವಾದ ಮಾಡಿ ಕನ್ನಡ ವಿದ್ವತ್ ಪ್ರಪಂಚಕ್ಕೆ ಮಹೋಪಕಾರ ಮಾಡಿದ್ದಾರೆ; ತಮ್ಮ ಬದುಕನ್ನು ಸಾರ್ಥಕಪಡಿಸಿಕೊಂಡಿದ್ದಾರೆ. ಗ್ರಂಥ ರಚನೆಗಾಗಿ ರಾತ್ರಿ ಹಗಲು ದುಡಿದು, ಅನೇಕ ಕ್ಲೇಶಗಳನ್ನು ಸಹಿಸಿಕೊಂಡು ಲೇಖಕರು ಕೆಲಸ ಮಾಡಿದ್ದರೂ, 'ಕ್ಲೇಶಃ ಫಲೇನ ಹಿ ಪುನರ್ನವತಾಂ ವಿಧತ್ತೇ' ಎಂಬ ಕವಿಕುಲ ಗುರುವಿನ ವಾಕ್ಯ ಅವರಿಗೆ ಸಮಾಧಾನ ತರುವುದೆಂದು ನಾನು ನಂಬುತ್ತೇನೆ.

ಹತ್ತು ವರ್ಷಗಳ ಹಿಂದೆ ಈ ಗ್ರಂಥ ಅಚ್ಚಾಗಿತ್ತು. ಇದರ ಪ್ರತಿಗಳು ಬಹು ಬೇಗ ತೀರಿಹೋಗಿ, ವಿದ್ಯಾರ್ಥಿಗಳಿಂದಲೂ, ವಿದ್ವಾಂಸರಿಂದಲೂ ಇದಕ್ಕಾಗಿ ಬೇಡಿಕೆಗಳು ಮತ್ತೆ ಮತ್ತೆ ಬರುತ್ತಿದ್ದರೂ, ಗ್ರಂಥದ ಮುದ್ರಣವನ್ನು ಕೈಕೊಳ್ಳಲು ಇದುವರೆಗೂ ಸಾಧ್ಯವಾಗಲಿಲ್ಲ. ಎಲ್ಲಕ್ಕೂ ಕಾಲ ಕೈಕೂಡಿ ಬರಬೇಕಷ್ಟೆ! ಈಗ ಆ ಕಾಲ ಬಂದಿದೆ. ಈ ಅವಕಾಶವನ್ನು ಉಪಯೋಗಿಸಿಕೊಂಡು, ಗ್ರಂಥವನ್ನು ಪರಿಷ್ಕಾರ ಮಾಡಿದೆ; ಹೊಸ ಟಿಪ್ಪಣಿಗಳನ್ನು ಸೇರಿಸಿದೆ. ಇದೊಂದು ಹೊಸದೊಂದು ಗ್ರಂಥವೆನ್ನುವಷ್ಟರಮಟ್ಟಿಗೆ ಈ ಕಾರ್ಯ ನಡೆದಿದೆ. ಅಲ್ಲದೆ ಬಹುಜನರಿಗೆ ಬೇಕಾಗಿದ್ದ ಈ ಗ್ರಂಥವನ್ನು ಈಗಲಾದರೂ ಪ್ರಕಟಿಸಲು ಸಾಧ್ಯವಾಯಿತಲ್ಲ ಎಂಬ ಸಮಾಧಾನ ವುಂಟಾಗಿದೆ. 'ಕನ್ನಡ ಧ್ವನ್ಯಾಲೋಕ'ಕ್ಕೆ ಹಿಂದೆ ಸೇರಿಸಿದ್ದ 'ಆನಂದವರ್ಧನನ ಕಾವ್ಯ ಮೀಮಾಂಸೆ' ಎಂಬ ಪ್ರಬಂಧವನ್ನು ಪ್ರತ್ಯೇಕವಾಗಿ ಅಚ್ಚಿಡುವ ಉದ್ದೇಶವಿರುವುದರಿಂದಲೂ, ಗ್ರಂಥದ ಗಾತ್ರ ವಿಸ್ತಾರ ಭಯದಿಂದಲೂ ಇಲ್ಲಿ ಕೈ ಬಿಡಲಾಗಿದೆ. ಮೇಲೆ ಹೇಳಿದ 'ಆನಂದವರ್ಧನನ ಕಾವ್ಯ ಮೀಮಾಂಸೆ' ಎಂಬ ಪ್ರಬಂಧ ಸದ್ಯದಲ್ಲೇ ಪ್ರತ್ಯೇಕವಾಗಿ ಪ್ರಕಟವಾಗುತ್ತದೆ. ಸಹೃದಯರು ಈ ಗ್ರಂಥವನ್ನು ಆದರದಿಂದ ಬರಮಾಡಿಕೊಳ್ಳುವರೆಂದು ನಂಬುತ್ತೇನೆ.

ಮೊದಲಿನಿಂದಲೂ ಈ ಗ್ರಂಥಕ್ಕೆ ಪ್ರೋತ್ಸಾಹಕೊಟ್ಟವರು ಗುರುವರ್ಯ ಡಾ. ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ., ಡಿ.ಲಿಟ್. ಅವರು. ಈ ಅನುವಾದ ಅವರ

ಪ್ರೋತ್ಸಾಹ, ಮಾರ್ಗದರ್ಶನ, ಆಶೀರ್ವಾದಗಳ ಸತ್ಫಲ. 'ಆದರೆ ಅವರ ಈ ಪ್ರೋತ್ಸಾಹ ಅಷ್ಟಕ್ಕೇ ನಿಲ್ಲಲಿಲ್ಲ. ಈ ವಿಷಯದಲ್ಲಿ ನನ್ನ ಮಿತ್ರರಿಗೆ ಅವರು ಸಲಹೆಗಳನ್ನು ನೀಡಿದರು. ಅನುವಾದ ಕಾರ್ಯ ವಿಳಂಬವಾಗದಂತೆ ಲೇಖಕರ ಬೆನ್ನು ತಟ್ಟಿದರು. ಅವರೊಡನೆ ಉದ್ದಕ್ಕೂ ಅಚ್ಚಿನ ಕರಡುಗಳನ್ನು ತಿದ್ದಿದರು.' ಅವರ ಶಿಷ್ಯವಾತ್ಸಲ್ಯದ ಇನ್ನೊಂದು ಉದಾಹರಣೆಯನ್ನು ಹೇಳಬಹುದಾದರೆ 'ಕನ್ನಡ ಋತುಸಂಹಾರ' ಹೊರಬಿದ್ದಾಗ ನನ್ನ ಮಿತ್ರರಾದ ಶ್ರೀ ಪರಮೇಶ್ವರಭಟ್ಟರನ್ನು ಬಾಯಿ ತುಂಬ ಹೊಗಳಿದರು. ಅವರ 'ಕನ್ನಡ ರಘುವಂಶ'ಕ್ಕೆ ಮುನ್ನುಡಿಯನ್ನು ಬರೆದು ಕೊಟ್ಟು ಹರಸಿದರು. "ನಾನು ಏಕಲವ್ಯ, ನೀವು ದ್ರೋಣರಿದ್ದಂತೆ. 'ಕನ್ನಡ ಶಾಕುಂತಳ'ವನ್ನು ನಿಮಗೆ ಅರ್ಪಿಸುತ್ತೇನೆ. ಒಪ್ಪಿಕೊಳ್ಳಿ" ಎಂದು ಬರೆದ ನನ್ನ ಮಿತ್ರರಿಗೆ ಅವರು ಈ ರೀತಿ ಕಾಗದ ಬರೆದರು :—

ಚಿ. ಪರಮೇಶ್ವರಭಟ್ಟನಿಗೆ ಆಶೀರ್ವಾದ—

ನಿನ್ನ ಕಾಗದ ತಲುಪಿತು ನನ್ನ ಶಿಷ್ಯರಾದ ನೀವು ಕೆಲವರು ನನ್ನ ಮೇಲೆ ಹೊರಿಸುತ್ತಿರುವ ಗೌರವದಿಂದ ನಾನು ಭೂಮಿಗೆ ಬಗ್ಗುತ್ತಿದ್ದೇನೆ ವಯಸ್ಸು, ವೃದ್ಧಾಪ್ಯ ನನ್ನನ್ನು ಬಗ್ಗಿಸಿಲ್ಲ ಗೌರವವು ಪ್ರತಿಯಾಗಿ ವಾತ್ಸಲ್ಯವನ್ನು ಚಿಮ್ಮಿಸುತ್ತಿದೆ ಅದರಲ್ಲಿ ಅಸ್ವಾಭಾವಿಕತೆ ಏನೂ ಇಲ್ಲ ಗುಣಕ್ಕೆ ಮತ್ಸರವೇ ? ಈಗಾಗಲೇ ನನ್ನ ಹೆಸರು ನಿನ್ನ ಕೃತಿಗಳ ಸಂಬಂಧದಲ್ಲಿ ಬೇಕಾದಷ್ಟು ಬಂದಿದೆ ಅಷ್ಟು ಗೌರವ ಸಾಕು. ಹೆಚ್ಚಾದರೆ ಕಾಳಿದಾಸನಿಗೇ ಆಶ್ಚರ್ಯವಾದೀತು ಶಾಕುಂತಳದ ಮರ್ಯಾದೆ ನನಗೆ ಬಹಳ ಹಿರಿದು. ನಿನ್ನ ಸಂಕಲ್ಪವೇ ಸಾಕು ನನ್ನ ಸಂತೋಷಕ್ಕೆ ಕಪ್ಪು ಶಾಯಿಯಲ್ಲಿ ಅದರ ಪ್ರಕಾಶನವು ಬೇಡ ನಿಮ್ಮಂಥ ಭೀಮಾರ್ಜುನರಿರುವಾಗ ನಾನು ದ್ರೋಣನೆಂದುಕೊಳ್ಳುವುದಕ್ಕೆ ಹೆಮ್ಮೆಯೇ ! ಆದರೆ ನೀನು ಏಕಲವ್ಯನಾಗುವುದು ಬೇಡ ನಿನ್ನ ಹೆಬ್ಬೆರಳುಗಳು ಇನ್ನೂ ಬಹುದಿನ ಮಿಕ್ಕ ಬೆರಳುಗಳೊಂದಿಗೆ ಸಹಕರಿಸಿ ಸತ್ಕಾರ್ಯ ನಡೆಸಲಿ ! ಇದರ ಯುಕ್ತಾಯುಕ್ತತೆಯ ವಿಷಯದಲ್ಲಿ ಶಂಕರನಾರಾಯಣನ ಸಲಹೆ ತೆಗೆದುಕೊಳ್ಳಬೇಡ ಅವನು ನನಗೆ ರತ್ನಾಭಿಷೇಕ ಮಾಡುತ್ತೇನೆಂದರೂ ಯುಕ್ತವೇ ಎನ್ನುತ್ತಾನೆ

22-7-1958 (ಸಹಿ) A. R Kıishna Sastri

ನಮ್ಮ ಗುರುಗಳ ಹೃದಯ ಎಷ್ಟು ಮೃದುವಾದದ್ದು, ಅವರ ವಾತ್ಸಲ್ಯ ಎಷ್ಟು ಅಮೋಘವಾದುದು ಎಂಬುದನ್ನು ತೋರಿಸಲು ಮೇಲಿನ ಪತ್ರವನ್ನು ಉದ್ಧರಿಸಲಾಯಿತು. 'ಮೃದೂನಿ ಕುಸುಮಾದಪಿ ಲೋಕೋತ್ತರಾಣಾಂ ಚೇತಾಂಸಿ' ಎಂಬ ವಾಕ್ಯವನ್ನು ಈ ತೆರನಾದ ಗುರುವರ್ಯರನ್ನು ನೋಡಿಯೇ ಭವಭೂತಿ ಹೇಳಿರಬೇಕೆನಿಸುತ್ತದೆ. ಶಿಷ್ಯವಾತ್ಸಲ್ಯಪ್ರಪೂರ್ಣರಾದ ನಮ್ಮ ಪ್ರಿಯ ಗುರುಗಳು ಕೃತಿ ಸಮರ್ಪಣೆಗೆ ಒಪ್ಪಿರುವುದು ನಮ್ಮ ಭಾಗ್ಯವೆಂದೆಣಿಸುತ್ತೇವೆ.

ಸಂಸ್ಕೃತ ಅಲಂಕಾರ ಗ್ರಂಥಗಳನ್ನು ಕನ್ನಡಿಸಲು ಡಾ. ಕೃಷ್ಣಮೂರ್ತಿಗಳಿಗೆ ಬೇರೊಂದು ಕಡೆಯಿಂದ ಸಹಾಯ ಪ್ರೋತ್ಸಾಹಗಳು ದೊರಕಿವೆ. ಸುಕವಿಯಶೋ ನಿರ್ಮತ್ಸರರೂ, ವಿದ್ವದುದ್ಯಮಗಳ ಆಧಾರಸ್ತಂಭರೂ ಆದ ಕವಿವರ್ಯ ಪದ್ಮ ಭೂಷಣ ಡಾ. ಕೆ. ವಿ. ಪುಟ್ಟಪ್ಪ, ಎಂ.ಎ., ಡಿ.ಲಿಟ್., ಅವರು ಈ ಗ್ರಂಥದ ರಚನೆಯ ವಿಷಯದಲ್ಲಿ ಮೊದಲಿನಿಂದಲೂ ತುಂಬ ಆಸಕ್ತಿವಹಿಸಿದ್ದಾರೆ. ಕೃತಿಯ ಪ್ರಕಟಣೆಗೆ ಆಗಿನ 'ಪ್ರಬುದ್ಧ ಕರ್ಣಾಟಕ'ದ ಸಂಪಾದಕರು ನೆರವಾಗಿದ್ದರು; ವೆಸ್ಲಿ ಪ್ರೆಸ್ಸಿನವರು ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟಿದ್ದರು. ಈ ಎಲ್ಲ ಮಹನೀಯರ ಸಹಾಯ ವನ್ನು ಇಲ್ಲಿ ತುಂಬು ಮನಸ್ಸಿನಿಂದ ನೆನೆಯುತ್ತೇವೆ.

ಗ್ರಂಥದ ಬೆಲೆಯ ವಿಚಾರವಾಗಿ ಒಂದು ಮಾತು. ಈಗಂತೂ ಕಾಗದದ ಬೆಲೆ, ಮುದ್ರಣದ ಬೆಲೆ ಗಗನಕ್ಕೇರಿದೆ. ಈ ವಿಧವಾದ ಪುಸ್ತಕಗಳನ್ನು ಒಳ್ಳೆಯ ಅಚ್ಚು ಕೂಟದಲ್ಲಿಯೇ ಅಚ್ಚಿಡಬೇಕು. ಬೇರೆ ಬೇರೆ ರೀತಿಯ ಅಕ್ಷರಗಳನ್ನು ಬಳಸಬೇಕು. ವಿದ್ಯಾರ್ಥಿಗಳೂ, ವಿದ್ವಾಂಸರೂ ಅಲ್ಲದೆ ಇತರರು ಈ ಗ್ರಂಥಗಳನ್ನು ಕೊಳ್ಳುವ ಸಂಭವ ಕಡಿಮೆ. ಇಂಗ್ಲೀಷಿನಲ್ಲಿ ಇದೇ ರೀತಿಯ ಗ್ರಂಥಗಳಿಗೆ ಇಟ್ಟಿರುವ ಬೆಲೆಯನ್ನು ಮನಸ್ಸಿಗೆ ತಂದುಕೊಂಡರೆ, ಈ ಪುಸ್ತಕದ ಬೆಲೆ ಏನೇನೂ ಹೆಚ್ಚಲ್ಲವೆಂದು ವಾಚಕರಿಗೆ ತೋರಬಹುದು.

ಗ್ರಂಥದ ಆಕಾರವನ್ನು ಈಗ ಬದಲಾಯಿಸಿದೆ. ಇಷ್ಟು ದೊಡ್ಡ ಗ್ರಂಥವನ್ನು ಬಹುಬೇಗ ಮುದ್ರಿಸಿಕೊಟ್ಟ ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸಿನ ಒಡೆಯರಾದ ಮಿತ್ರ ಶ್ರೀ ಜಿ. ಎಚ್. ರಾಮರಾಯರಿಗೂ, ಅವರ ತಮ್ಮ ಶ್ರೀ ಜಿ. ಎಚ್. ಕೃಷ್ಣಮೂರ್ತಿಗಳಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ಶಾರದಾ ಮಂದಿರ
ರಾಮಯ್ಯರ್ ರಸ್ತೆ, ಮೈಸೂರು
೨೪–೦೨–೧೯೬೦

ಎಚ್. ಎಂ. ಶಂಕರನಾರಾಯಣರಾವ್

# ಪೀಠಿಕೆ

"ಲಲಿತಂ ಪ್ರತೀಯಮಾನೋ-
ಪಲಕ್ಷಿತಂ, ವಾಚ್ಯಮಾದೊಡೊಪ್ಪದು ಕೃತಿ, ಪೆ
ರ್ಮೊಲೆಯುಂ ಮೆಱೆದೊಡೆ ಸಲೆ ಕ-
ಣ್ಮಲರಂ ಮೆಱೆಯುಮೊಡೆ ಯುವತಿಯೇನೊಪ್ಪುವಳೇ?"

—ನೇಮಿಚಂದ್ರ

## I

ಧ್ವನಿತತ್ತ್ವ ಕಾವ್ಯಲಕ್ಷಣದ ಕಣ್ಣಿದ್ದಂತೆ. ರಸಿಕರಿಗೆ ಕಣ್ಣಿನ ಕುಡಿಮಿಂಚು ಪ್ರಿಯವೇ ಹೊರತು ಕಣ್ಣಿಲ್ಲದ ಹೆಣ್ಣು ವ್ಯೆಯುಂದವಲ್ಲ!

ಕಾವ್ಯಸುಂದರಿಯ ಲಾವಣ್ಯ ಕೇವಲ ಕಾವ್ಯರಸಿಕರಿಗೆ ವೇದ್ಯ, ಇತರರಿಗೆ ಚೋದ್ಯ, ಮಹಾ ಮಹಾ ಶಾಸ್ತ್ರಪಂಡಿತರಿಗೂ ಅಭೇದ್ಯ! 'ಯಾದೃಶೋ ಯಕ್ಷಃ ತಾದೃಶೋ ಬಲಿಃ!' ದೇವರಿಗೆ ತಕ್ಕ ನೈವೇದ್ಯ! ಮಾರಿಗೆ ಕೋಣ, ಸೂರ್ಯನಿಗೆ ಅರ್ಘ್ಯ. ಅರಸಿಕರಿಗೆ ಆಡಂಬರ ಬೇಕು, ಕೋರೈಸುವ ಆಕರ್ಷಣೆ ಬೇಕು, ಮಾತಿನ ಮಾಲೆಗಳು ಬೇಕು. ರಸಿಕರಿಗೆ ಒಂದು ಮುಗುಳ್ನಗೆ ಸಾಕು, ಒಂದು ಕುಡಿನೋಟ ಸಾಕು, ಹೃದಯದ ಅನುರಾಗವನ್ನು ಘೋಷಿಸುವ ಮೌನಕ್ಕಿಂತ ಹೆಚ್ಚೇನೂ ಬೇಡ. ಇದೇ ಪ್ರೇಮದ ಸೆಲೆ, ಇದೇ ಪ್ರೇಮದ ನೆಲೆ, ಇದೇ ಪ್ರೇಮದ ಬೆಲೆ. ಕಾವ್ಯ ಪ್ರೇಮಿಗಳ ಅಪೇಕ್ಷೆಯಾದರೂ ಇಷ್ಟೆ:—ಕವಿಹೃದಯ ಬಂದು ತಮ್ಮ ಹೃದಯ ದೊಡನೆ ಸಂಯೋಗವನ್ನು, ಅಲ್ಲ, ಸಮಭೋಗವನ್ನು ಪಡೆಯಬೇಕೆಂದು. ಮೊದಲು ಯೋಗ, ಆಮೇಲೆ ಭೋಗ; ಮೊದಲು ಕಾವ್ಯಯೋಗ, ಆಮೇಲೆ ಹೃದಯೈಕ್ಯ, ರಸಾನುಭವ!

ಯೌವನದಲ್ಲಿ ಕಾಲಿಟ್ಟ ಲಲನೆ ಬುದ್ಧಿಪೂರ್ವಕವಾಗಿ ವಿಲಾಸಗಳನ್ನು ಸುರಿಸು ತ್ತಾಳೆಯೆ? "ಉಪದಿಶತಿ ಕಾಮಿನೀನಾಂ ಯೌವನಮದ ಏವ ಲಲಿತಾನಿ." ಯಾವ ಗುರುಗಳಿಂದಲೂ ಕಲಿಯತಕ್ಕ ವಿದ್ಯೆಯಲ್ಲ ಅದು; ಯೌವನವೇ ಅವಳ ಗುರು! ಮನ್ಮಥನ ಮೊದಲ ಹೆಜ್ಜೆಯೇ ಅವಳ ಲಜ್ಜೆ; ಗೆಜ್ಜೆ ಕಟ್ಟಿಕೊಂಡು ಅವಳು ಕುಣಿಯುವುದೇನೂ ಬೇಡ; ಆದರೂ ಸಜ್ಜಾದ ತರುಣರು ಅವಳ ಹಿಂದೆಯೇ ಇರು ತ್ತಾರೆ. ಅವಳ ಮೌನದಲ್ಲಿ, ಅವಳು ತನ್ನ ಮನೋಗತವನ್ನು ಮುಚ್ಚಿಡುವ ಭರದಲ್ಲೇ ಸೂಸುವ ನಾಚಿಕೆಯಲ್ಲಿ, ಅವರು ಕಂಡುದೇನು? ಅವಳ ಅರ್ಥಹೀನ ಅಂಗಭಂಗಿಯಲ್ಲಿ ಅವರು ತಮ್ಮ ಜೀವನದ ಸರ್ವಸಾರ್ಥಕ್ಯವನ್ನೂ ಕಾಣುವರಷ್ಟೆ! ಇಷ್ಟಾದರೂ ಇಬ್ಬರೆ

ಹೃದಯಗಳ ಮಿಳನವಾಗುವುದು—'ಅದ್ವೈತಂ ಸುಖದುಃಖಯೋಃ' ಎನ್ನುವಂತಹ ಮಿಳನ—ಎಷ್ಟೊಂದು ವಿರಳ! ಇದರ ಪರಿಯನ್ನು ಯಾವ ಶಾಸ್ತ್ರ ವಿವರಿಸಬಲ್ಲದು? ಸೌಂದರ್ಯಮೀಮಾಂಸೆಯೋ ಮನಶ್ಶಾಸ್ತ್ರವೋ?

ಕಾವ್ಯಲಲನೆಯ ಹೃದಯಾಂತರಾಳವನ್ನು ತೆರೆದು ತೋರುವೆನೆಂದು ಹೊರಟ ಮಹಾರಸಿಕ ಆನಂದವರ್ಧನ. ಅವನು ಕಂಡ ಕಾವ್ಯದ ತಿರುಳೇ 'ಧ್ವನಿ.' ಕವಿ ತನ್ನ ಹೃದಯ ಪಾತ್ರೆಯನ್ನು ತುಂಬಿ ಹೊರಗೆ ಘುಮ್ಮಿಕ್ಕುತ್ತಿರುವ "ರಸ"ವನ್ನು ಎಷ್ಟೆಷ್ಟು ಮುಚ್ಚಿಡಲು ಯತ್ನಿಸುತ್ತಾನೋ ಅಷ್ಟಷ್ಟೇ ಬಿಚ್ಚಿಡಲು ಸಮರ್ಥನಾಗುತ್ತಾನೆ; ಎಂದರೆ ವಿರೋಧಾಭಾಸವಲ್ಲದೆ ಮತ್ತೇನು! ಆದರೆ ಲೋಕೋತ್ತರವಾದ ಕಾವ್ಯಾನುಭವ ಲೌಕಿಕ ತರ್ಕದ ಹಿಡಿತದಲ್ಲಿ ನಿಲ್ಲತಕ್ಕುದಲ್ಲ. ಇದನ್ನು ಮೊದಲು ಮನಗಂಡ ಯಶಸ್ಸು ಆತನದು. ಕವಿ ಅರಿತು ಯತ್ನಿಸುತ್ತಾನೆಂದಲ್ಲ; ಅರಿಯದೆಯೇ ಆದರೂ ಮುಚ್ಚಿಡುತ್ತಿರುತ್ತಾನೆ. ರತಿಯೆಂದರೇನೆಂದು ಅರಿಯದ ಮುಗ್ಧೆ ಲಜ್ಜೆಯ ಮೂಲಕ ರತಿಯನ್ನು ಮುಚ್ಚಿಡುವಂತೆ! ಅಷ್ಟು ಸಹಜವಾದುದು, ಸುಕುಮಾರವಾದುದು, ಕವಿಯ ಶಬ್ದ ವ್ಯಾಪಾರ! ಇದಕ್ಕೆ ಹೆಸರೇನು ಕೊಡುವುದು? ಪ್ರಕಾಶನ, ದ್ಯೋತನ, ಸೂಚನೆ, ವ್ಯಂಜನ, ಧ್ವನನ—ಏನಾದರೂ ಸರಿಯೆ, ಬೆಳಗುವುದು ಅದರ ಕೆಲಸ; ಅಪರಿಮಿತವಾಗಿ ಬೆಳಗುವುದು; ಎರಡು+ಎರಡು=ನಾಲ್ಕು ಎಂಬಂತೆ ನೇರವಾಗಿ, ನಿರ್ದಿಷ್ಟವಾಗಿ ಹೇಳುವುದಲ್ಲ. ನಿರ್ದಿಷ್ಟವಾದ ಉಕ್ತಿ ಶಾಸ್ತ್ರ, ಸಂತುಷ್ಟವಾದ ಉಕ್ತಿ ಕಾವ್ಯ. ಶಾಸ್ತ್ರ ತಿಳಿಯಲು ಪ್ರಜ್ಞೆ ಸಾಕು; ಕಾವ್ಯವನ್ನು ಅನುಭವಿಸಲು ಪ್ರತಿಭೆಯೇ ಬೇಕು. ಪ್ರತಿಭೆಯ ಪರಮ ಲಕ್ಷ್ಯವೇ ರಸ-ಧ್ವನಿ; ಅದರ ಸಹಜ ಪ್ರಭಾವವೇ ಔಚಿತ್ಯ; ಅದರ ಪ್ರಕಟ ರೂಪವೇ ಅಲಂಕಾರ. ಶರೀರದ ರಮಣೀಯತೆಯನ್ನು 'ಸೌಂದರ್ಯ'ವೆಂದೂ, ಹೃದಯ ಸೌಂದರ್ಯವನ್ನು 'ಲಾವಣ್ಯ'ವೆಂದೂ ಕರೆಯಬಹುದಾದರೆ—ಮೊದಲನೆಯದು ಅಂಗಾಂಗ ಸೌಷ್ಠವ ಮತ್ತು ವಿನ್ಯಾಸಗಳಿಂದ ಉಂಟಾದುದು, ಎರಡನೆಯದು ಇಡಿಯ ವ್ಯಕ್ತಿತ್ವವನ್ನು ಕುರಿತದ್ದು; ಮೊದಲನೆಯದು ಬಾಹ್ಯ, ಎರಡನೆಯದು ಆಂತರ; ಮೊದಲನೆಯದು ಸಾಮಾನ್ಯ, ಎರಡನೆಯದು ಅಸಾಧಾರಣ —ಎಂದು ಮುಂತಾಗಿ ವಿವೇಚಿಸಬಹುದು. ಪರಮರಮಣೀಯತೆಗೆ ಎರಡೂ ಅಗತ್ಯ, ಯಾವುದರಲ್ಲಿ ವಿಶೇಷ ಕೊರತೆಯಾದರೂ ಊನವೇ ಎಂಬುದು ಸ್ಪಷ್ಟ. ಅಷ್ಟವಂಕ—ಅಮೃತಮತಿಯರ ಸಮಾಗಮ ಯಾರಿಗೂ ಸಮರ್ಪಕವೆನಿಸುವುದಿಲ್ಲ. ಅಷ್ಟವಂಕನು ಹೃದಯದಲ್ಲಿ ಸುಂದರನಾಗಿದ್ದರೂ ಸಮರ್ಪಕವೆನಿಸುತ್ತಿರಲಿಲ್ಲ. ಇದನ್ನು ಚೆನ್ನಾಗಿ ಅರಿತ ಆನಂದವರ್ಧನನು ದೋಷಹಾನ, ಗುಣಾದಾನ, ಅಲಂಕಾರ ಪ್ರಯೋಗಗಳೊಂದನ್ನೂ ನಿರರ್ಥಕಗಳೆನ್ನದೆ, ಇವಕ್ಕೆಲ್ಲ ರಸ-ಧ್ವನಿಯ ಔಚಿತ್ಯ ಸೇರಿದಾಗ ಅಭೂತಪೂರ್ವವಾದ ಕೃತಕೃತ್ಯತೆ ಹೇಗೆ ಉಂಟಾಗುವುದೆಂಬುದನ್ನು ಬಿಡಿಸಿ ತೋರಿಸು

ತ್ತಾನೆ. ಆ ಔಚಿತ್ಯ ತಪ್ಪಿದರೆ ಹೇಗೆ ಸ್ವಾರಸ್ಯ ಕುಂದಿ ಚಿತ್ರಪ್ರಾಯವಾಗುತ್ತದೆಂಬು ದನ್ನೂ ನಿರ್ದೇಶಿಸುತ್ತಾನೆ.

ಯಾವ ಒಂದು ಪ್ರಸಿದ್ಧ ಕಥಾವಸ್ತುವನ್ನು ಕವಿ ವರ್ಣಿಸಲಿ, ಆ ಕಥೆಯ ಸಂವಿಧಾನದಲ್ಲೇ ಮೊದಲು ರಸದೃಷ್ಟಿಯ ಅಗತ್ಯ ಕಾಣುತ್ತದೆ; ಅನಂತರ ಪಾತ್ರಗಳ ಪ್ರತಿಪಾದನೆಯಲ್ಲಿ ರಸದ್ದೇ ಸರ್ವಸಾಮ್ರಾಜ್ಯ. ವರ್ಣನಾ ಚಮತ್ಕಾರ ಬೇಕು, ನಿಜ; ಆದರೆ ಅದರ ಭರದಲ್ಲಿ ರಸದೃಷ್ಟಿ ಮಾಯವಾಗಬಾರದಷ್ಟೆ. ಕಥಾವಸ್ತುವೇ ಇಲ್ಲದ ಭಾವಕಾವ್ಯಗಳಲ್ಲಿ ರಸದೃಷ್ಟಿಯಲ್ಲದೆ ಬೇರೆ ಯಾವ ನಿಯಾಮಕವೂ ಇಲ್ಲವೇ ಇಲ್ಲ. ಹೀಗೆ ಹಿಂದೆ ಕೇವಲ ನಾಟಕಾದಿಗಳಿಗೆ ನಿಯಮಿತವಾಗಿದ್ದ ರಸನಿಯಮಗಳನ್ನು ಸಕಲ ಕಾವ್ಯಗಳಿಗೂ ಅನ್ವಯಿಸಿದ ಕೀರ್ತಿ ಆನಂದವರ್ಧನನದಾಗಿದೆ.

ಈ ದೃಷ್ಟಿಯಿಂದ ಕಾವ್ಯಗಳಲ್ಲಿ ಮೂರು ವರ್ಗಗಳನ್ನು ಮಾಡಬಹುದು—

(1) ರಸಾದಿ ವ್ಯಂಗ್ಯದೃಷ್ಟಿ ಪ್ರಧಾನವಾಗಿರುವ ಕಾವ್ಯಗಳು—ಇವು 'ಉತ್ತಮ' (ಇಲ್ಲಿಯೂ ಸಹಜ ಗುಣಾಲಂಕಾರಗಳಿಗೆ ಮಾನ್ಯ ಸ್ಥಾನವುಂಟು).

(2) ರಸಾದಿವ್ಯಂಗ್ಯ ದೃಷ್ಟಿ ತಪ್ಪದಿದ್ದರೂ ಅದರ ಚಮತ್ಕಾರ ವಾಚ್ಯಾಂಶದ ಚಮತ್ಕಾರಕ್ಕೆ ಪೋಷಕವಾಗಿರುವ ಕಾವ್ಯಗಳು—ಇವು 'ಮಧ್ಯಮ', ಆದರೂ ಸುಂದರ —ಸಹಜ ಮತ್ತು ಪ್ರೌಢ ಅಲಂಕಾರಮಯ ಕಾವ್ಯಗಳಿಗೆಲ್ಲ ಇಲ್ಲಿಯೇ ಸ್ಥಾನ.

(3) ರಸಾದಿ ವ್ಯಂಗ್ಯದೃಷ್ಟಿ ಇಲ್ಲದಂತಾಗಿರುವ ಖಡ್ಗಬಂಧಾದಿ ಚಿತ್ರರಚನೆಗಳು, —ಕೇವಲ ದುಷ್ಕರಾಲಂಕಾರಗಳು—ಇವು ಅಧಮ, ನಿಜವಾಗಿ ಕಾವ್ಯವೇ ಅಲ್ಲ.

ಈ ವಿಭಾಗಕ್ರಮವನ್ನು ಹಿಂದಿನ ಲಾಕ್ಷಣಿಕರಾರೂ ಮಾಡಿರಲಿಲ್ಲ. ಆನಂದವರ್ಧ ನನು ಇದನ್ನು ಮೊದಲು ತೋರಿಸಿ ನಮ್ಮ ನಾಡಿನ ಕಾವ್ಯಾಭಿರುಚಿ ಶುಚಿಯಾಗಲು ಸಹಾಯ ಮಾಡಿದನೆಂದು ಧಾರಾಳವಾಗಿ ಹೇಳಬಹುದು. ಆನಂದವರ್ಧನನೇ ಬಾಯಿ ಬಿಟ್ಟು ತನ್ನ ಗ್ರಂಥದ ಮುಖ್ಯೋದ್ದೇಶವನ್ನು ಹೀಗೆ ಹೇಳಿದ್ದಾನೆ—

"ಕವೀನಾಮೇವಂ ವಿಧಾನಿ ಸ್ಖಲಿತಾನಿ ಭವಂತೀತಿ
ರಸಾದಿರೂಪವ್ಯಂಗ್ಯ ತಾತ್ಪರ್ಯಮೇಷಾಂ ಯುಕ್ತಮಿತಿ
ಯತ್ನೋಽಸ್ಮಾಭಿರಾರಬ್ಧಃ, ನ ಧ್ವನಿಪ್ರತಿಪಾದನಮಾತ್ರಾಭಿನಿವೇಶೇನ...."

(III. 19. ರ ವೃತ್ತಿ)

'ಕವಿಗಳು ಪ್ರಸಿದ್ಧ ಕಥೆಯ ಸರಣಿಯನ್ನು ಮಾತ್ರ ತದ್ವತ್ತಾಗಿ ಅನುಸರಿಸಿದರೆ, ರಸೌಚಿತ್ಯ, ರಸೈಕ್ಯ ನಿಯಮಗಳನ್ನು ಕೈಬಿಟ್ಟರೆ, ತಪ್ಪುಗಳಾಗುತ್ತವೆ. ಆದ್ದರಿಂದ ಅವರಿಗೆ ಮಾರ್ಗದರ್ಶನ ಮಾಡುವುದಕ್ಕಾಗಿ ಈ ಗ್ರಂಥವನ್ನು ಬರೆಯ ತೊಡಗಿದ್ದೇವೆಯೇ ಹೊರತು, 'ಧ್ವನಿ'ಯೆಂಬ ಹೊಸ ತತ್ತ್ವವನ್ನು ಸ್ಥಾಪಿಸಬೇಕೆಂಬ ಅಭಿನಿವೇಶದಿಂದೇನಲ್ಲ.'

ಇದಕ್ಕೆ ವಿವರಣೆ ಕೊಡುತ್ತಾ ಅಭಿನವಗುಪ್ತರೆನ್ನುತ್ತಾರೆ—

'ವ್ಯಂಗ್ಯಾರ್ಥವಿರಲಿ, ಇಲ್ಲದೆ ಇರಲಿ, ನಮಗೆ ಅದರಲ್ಲಿ ಯಾವ ಅಭಿನಿವೇಶವೂ ಇಲ್ಲ. ಅದು ಕಾಗೆಗೆ ಎಷ್ಟು ಹಲ್ಲಿದೆಯೆಂಬ ಪರೀಕ್ಷೆಯಂತೆಯೇ ಸರಿ ! (ಕಾಕದಂತ ಪರೀಕ್ಷಾ ಪ್ರಾಯಮೇವ ತತ್ ಸ್ಯಾತ್ !)

ಹೀಗೆ ಈ ಗ್ರಂಥಕಾರನ ದೃಷ್ಟಿ ಮುಖ್ಯವಾಗಿ ಸಾಹಿತ್ಯವಿಮರ್ಶಕನ ದೃಷ್ಟಿ ; ಕೇವಲ ಶಾಸ್ತ್ರಕಾರನ ತಾರ್ಕಿಕ ದೃಷ್ಟಿಯಲ್ಲ. ಈ ದೃಷ್ಟಿಯಿಂದಲೇ ಉಚಿತ ಲಕ್ಷ್ಯಗಳನ್ನಾರಿಸಿಕೊಳ್ಳುವುದರಲ್ಲಿ ತನ್ನ ರಸಿಕತೆಯನ್ನು ಆನಂದವರ್ಧನನು ಚೆನ್ನಾಗಿ ತೋರಿಸುತ್ತಾನೆ. ವ್ಯಂಜಕತ್ವದಿಂದ ಕಾವ್ಯಕ್ಕೆ ಮಾತ್ರ ಅಸಾಧಾರಣವಾದ ಚಮತ್ಕಾರವೊದಗುವುದೆಂಬ ತತ್ತ್ವವನ್ನು ರಸಭಾವಾದಿಗಳ ಸ್ವರೂಪನಿರೂಪಣೆಯ ಮೂಲಕ ಸ್ಥಾಪಿಸಿದ ಮೇಲೆ, ಅದೇ ವ್ಯಂಜಕತ್ವದ ಮೂಲಕ, ವಾಚ್ಯವಾಗಿದ್ದರೆ ಗ್ರಾಮ್ಯ, ಹಾಗು ಅಸಭ್ಯವೆನಿಸಬಹುದಾಗಿದ್ದ ವಸ್ತುಗಳು ಕೂಡ ಹೇಗೆ ಚಮತ್ಕಾರವನ್ನು ತಳೆಯುತ್ತವೆಂಬುದನ್ನು ನಿದರ್ಶಿಸಲು ಗಾಥಾಸಪ್ತಶತಿಯೇ ಮುಂತಾದ ಜನಪದ ಸಾಹಿತ್ಯ ಗ್ರಂಥಗಳಿಂದ ಹತ್ತಾರು 'ವಸ್ತುಧ್ವನಿ'ಯ ಉದಾಹರಣೆಗಳನ್ನು ಎತ್ತಿಕೊಡುತ್ತಾನೆ. ಅಲಂಕಾರಗಳೂ ವ್ಯಂಗ್ಯವಾದಾಗ ತಳೆಯುವ ಚಮತ್ಕಾರಾತಿಶಯವನ್ನು 'ಅಲಂಕಾರಧ್ವನಿ'ಯಲ್ಲಿ ತೋರಿಸುತ್ತಾನೆ. ಈ ಮೂರು ವ್ಯಂಗ್ಯಗಳನ್ನೂ ಕಾವ್ಯದ ಜೀವಾಳವೆನ್ನುತ್ತಾನೆ. ಹೀಗೆ ಆನಂದವರ್ಧನನು ಮುಖ್ಯವಾಗಿ ವ್ಯಂಜನಾ ವ್ಯಾಪಾರವನ್ನೇ ಕಾವ್ಯದ ರಹಸ್ಯವೆಂದು ಭಾವಿಸಿ 'ಧ್ವನಿ'ಯೇ ಕಾವ್ಯದ ಆತ್ಮವೆನ್ನುತ್ತಾನೆ. ಆದರೆ ಈ ಮೂರು ಬಗೆಗಳಲ್ಲಿ ರಸಾದಿಧ್ವನಿಯ ಸ್ಥಾನ ಪರಮೋಚ್ಚವೆಂಬುದನ್ನೂ ಉಳಿದ ಧ್ವನಿಗಳಿಗೂ ಅದೇ ಪರ್ಯವಸಾನವೆಂಬುದನ್ನೂ ಸೂಚಿಸಲು ಮರೆಯುವುದಿಲ್ಲ.

ಪ್ರಾಚೀನ ಭಾರತದ ಸಾಂಪ್ರದಾಯಿಕ ವಿಚಾರಸರಣಿಗೆ ಕೇವಲ ರಸದೃಷ್ಟಿಯ ಸಾಹಿತ್ಯವಿಮರ್ಶೆ ಯುಕ್ತಿ ಯುಕ್ತವೆಂದಾಗಲಿ, ತರ್ಕಶುದ್ಧವೆಂದಾಗಲಿ, ಅಂಗೀಕಾರಯೋಗ್ಯವೆಂದಾಗಲಿ, ತೋರುವುದು ಸುಲಭವಾಗಿರಲಿಲ್ಲ. ಆದುದರಿಂದಲೇ ಆನಂದವರ್ಧನನು ಶಾಸ್ತ್ರೀಯವಾಗಿ ಧ್ವನಿಸಿದ್ಧಾಂತದ ಮೇಲೆ ಬರಬಹುದಾದ ಆಶಂಕೆಗಳನ್ನೆಲ್ಲ ಪೂರ್ವಪಕ್ಷರೂಪದಲ್ಲಿ ಎತ್ತಿ, ಸರ್ವಸಮರ್ಪಕವಾಗುವಂತೆ ಸಮಾಧಾನಗಳನ್ನು ಹೇಳಿ, ಧ್ವನಿಸಿದ್ಧಾಂತವನ್ನು ಸ್ಥಾಪಿಸಬೇಕಾಯಿತು. ಹೀಗೆ ಆನಂದವರ್ಧನನ ಮಹತ್ತ್ವದ ಮೂರು ಸಾಧನೆಗಳೆಂದರೆ ಹೊಸ ಸಾಹಿತ್ಯಾಭಿರುಚಿಯ ದಿಗ್ದರ್ಶನ, ಹೊಸ ಸಿದ್ಧಾಂತದ ಮಂಡನ ಮತ್ತು ಆಕ್ಷೇಪಗಳ ಖಂಡನ. ಅವನ ಖಚಿತ ಹಾಗು ನಿಶಿತ ಶೈಲಿಯಲ್ಲಿ ಹೊಸ ವಿಚಾರದ ದೀಪ್ತಿವಿಲಾಸ, ಉತ್ತಮರಸಿಕತೆಯ ಉಲ್ಲಾಸ, ಶಾಸ್ತ್ರಶುದ್ಧ ಯುಕ್ತಿವಿಕಾಸ, ಈ ಮೂರರ ತ್ರಿವೇಣೀಸಂಗಮವನ್ನು ಕಾಣಬಹುದು.*

* ಈ ವಿಷಯವಾಗಿ ವಿಸ್ತೃತ ವಿವೇಚನೆಯಲ್ಲಿ ಕುತೂಹಲವುಳ್ಳವರು ಇದೇ ಲೇಖಕನ ಆನಂದವರ್ಧನನ **ಕಾವ್ಯಮೀಮಾಂಸೆ**ಯೆಂಬ ಗ್ರಂಥವನ್ನು ಓದಬಹುದು.

# II

## ಧ್ವನ್ಯಾಲೋಕದ ಕಾರಿಕೆ, ವೃತ್ತಿಗಳು ಏಕಕರ್ತೃಕವೆ ಅಥವಾ ಭಿನ್ನಕರ್ತೃಕವೆ?

ಈ ಶತಮಾನದ ವಿದ್ವತ್ಸಂಶೋಧಕರಲ್ಲಿ ಇದು ಬಹಳ ಚರ್ಚಾಪನ್ನವಾದ ವಿಷಯ. ಚರ್ಚೆಯಿನ್ನೂ ನಡೆಯುತ್ತಲೇ ಇದೆ. ಪ್ರಾಚೀನ ಸಂಪ್ರದಾಯದಲ್ಲಿ ಮಾತ್ರ ಕಾರಿಕಾವೃತ್ತಿಗಳೆರಡೂ ಏಕಕರ್ತೃಕವೆಂಬ ವಿಷಯದಲ್ಲಿ ಸಂಶಯ ಲೇಶಕ್ಕೂ ಅವಕಾಶ ವಿಲ್ಲ. ಕುಂತಕ, ಮಹಿಮಭಟ್ಟ, ಕ್ಷೇಮೇಂದ್ರ, ರುಯ್ಯಕ, ಮಮ್ಮಟ, ಮುಂತಾದ ಮುಂದಿನ ಲಾಕ್ಷಣಿಕರೆಲ್ಲರೂ ಆನಂದವರ್ಧನನ ಹೆಸರಿನಲ್ಲಿ ಒಮ್ಮೆ ಕಾರಿಕೆಯನ್ನೂ ಒಮ್ಮೆ ವೃತ್ತಿಯನ್ನೂ ಸಹಜವಾಗಿಯೇ ಉದಾಹರಿಸುತ್ತಾರೆ. ಅಭಿನವಗುಪ್ತರು ಕೂಡ ಒಮ್ಮೊಮ್ಮೆ ಹೀಗೆಯೇ ಉದಾಹರಿಸಿರುವುದುಂಟು. ಆದರೂ ಅವರು ಲೋಚನದಲ್ಲಿ ಅನೇಕ ವೇಳೆ 'ವೃತ್ತಿಕಾರಃ' 'ಕಾರಿಕಾಕಾರಃ' ಎಂಬ ಮಾತುಗಳನ್ನು ಬಳಸಿ ಇಬ್ಬರೂ ಬೇರೆಯವರಿರಬಹುದೋ ಎಂಬ ಸಂದೇಹಕ್ಕೆ ದಾರಿ ಮಾಡಿಕೊಟ್ಟಿದ್ದಾರೆ. 'ಧ್ವನಿಕಾರ' ಎಂಬ ಹೆಸರನ್ನು ಮುಂದಿನವರು ಎಷ್ಟೋ ವೇಳೆ ಪ್ರಯೋಗಿಸುವುದುಂಟು. ಆದ್ದರಿಂದ ಇಂದಿನ ವಿದ್ವಾಂಸರಲ್ಲಿ ಕೆಲವರು — ಡಾ. ಪಿ. ವಿ. ಕಾಣೆ., ಡಾ. ಎಸ್. ಕೆ. ಡೇ., ಇತ್ಯಾದಿ—ಧ್ವನಿಕಾರಿಕೆಗಳನ್ನು ಬರೆದವನು ಧ್ವನಿಕಾರನೆಂದೂ, ವೃತ್ತಿಕಾರನು ಆನಂದವರ್ಧನನೆಂದೂ, ಇವರಿಬ್ಬರೂ ಬೇರೆ ವ್ಯಕ್ತಿಗಳೆಂದೂ ವಾದಿಸುತ್ತಾರೆ. ಈ ವಾದವನ್ನು ಒಪ್ಪುವ ಬೇರೆ ವಿದ್ವಾಂಸರು—ಎಸ್. ಪಿ. ಭಟ್ಟಾಚಾರ್ಯ, ಡಾ. ಗೋದವರ್ಮ, ಇತ್ಯಾದಿ—ವೃತ್ತಿಗ್ರಂಥಕ್ಕೂ ಕಾರಿಕಾಗ್ರಂಥಕ್ಕೂ ಭಿನ್ನಾಭಿಪ್ರಾಯಗಳಿರುವುದಲ್ಲದೆ, ಭಿನ್ನಶೈಲಿಯೂ ಇರುವುದೆಂದು ಕೆಲವೊಂದು ನಿದರ್ಶನಗಳನ್ನು ಕೊಡುತ್ತಾರೆ. ಆದರೆ ಈ ವಾದವನ್ನು ಪ್ರೊ. ಕುಪ್ಪುಸ್ವಾಮಿಶಾಸ್ತ್ರಿ, ಡಾ. ಎ. ಶಂಕರನ್, ಡಾ. ರಾಘವನ್, ಡಾ. ಸತ್ಕಾರಿ ಮೂಕರ್ಜಿ ಮುಂತಾದ ವಿದ್ವಾಂಸರು ಇನ್ನೂ ಒಪ್ಪಿಲ್ಲ. ಏಕಕರ್ತೃಕವಾದವನ್ನೇ ಅವರು ಒಪ್ಪುತ್ತಾರೆ. ೧೯೪೬ರಲ್ಲಿ ಡಾಕ್ಟರೇಟ್ ಪದವಿಗಾಗಿ ಈ ಲೇಖಕನು ಬರೆದ ಸಂಶೋಧನೋಪನ್ಯಾಸದಲ್ಲಿ—ಇದು ಈಗ ಅಚ್ಚಿನಲ್ಲಿದೆ*— ಇದರ ಬಗೆಗೆ ಸುಮಾರು ೬೦ ಪುಟಗಳಷ್ಟು ವಿಸ್ತಾರವಾದ ಚರ್ಚೆ ಬಂದಿದೆ. ಇದರ ವಿವರಗಳನ್ನಪೇಕ್ಷಿಸುವವರು ಅದನ್ನೇ ಓದಬಹುದು. ಇಲ್ಲಿ ಎರಡೇ ಮಾತುಗಳನ್ನು ಬರೆದಿದೆ—

---

* The Dhvanyaloka and its Critics (Kavyalaya Publishers, Krishnamurthipuram, Mysore-4.)

(೧) ಕಾಳಿದಾಸನನ್ನು ರಘುವಂಶಕಾರ ಎನ್ನುವ ಬದಲು 'ರಘುಕಾರ' ಎನ್ನುವುದು ಹೇಗೆ ರೂಢಿಯೋ ಹಾಗೆಯೇ 'ಧ್ವನ್ಯಾಲೋಕಕಾರ' ಎನ್ನುವ ಬದಲು 'ಧ್ವನಿಕಾರ' ಎಂಬ ಲಾಕ್ಷಣಿಕರ ರೂಢಿ ಭಿನ್ನಕರ್ತೃಕತ್ವದ ಸಾಧಕವಲ್ಲ. ಹೀಗೆಯೇ ಕುಂತಕನನ್ನು 'ವಕ್ರೋಕ್ತಿಕಾರ'ನೆಂದೂ ಹೇಳುವುದುಂಟು.

(೨) ಕೇವಲ ಧ್ವನಿಕಾರಿಕೆಗಳನ್ನು ಒಬ್ಬನು ಬರೆದನೆಂದು ಭಾವಿಸಿದರೆ, ಒಂದೇ ಉದಾಹರಣೆಯೂ ಇಲ್ಲದ, ಒಂದೇ ವಿವರಣೆಯೂ ಇಲ್ಲದ ಆ ಗ್ರಂಥದಿಂದ ಒಂದು ಅಲಂಕಾರ ಲಕ್ಷಣ ಗ್ರಂಥದ ಕಾರ್ಯ, ಅದೂ ಹೊಸ ಸಿದ್ಧಾಂತ ಸ್ಥಾಪನೆಯ ಮಹಾಕಾರ್ಯ, ಸಾಂಗವಾಯಿತೆಂದು ಭಾವಿಸಬೇಕಾಗುತ್ತದೆ. ಇದು ಸರಿಯೆಂದು ಯಾರಿಗೂ ತೋರುವುದು ಶಕ್ಯವಿಲ್ಲ. ಏಕೆಂದರೆ ಸಾವಿರಾರು ಗ್ರಂಥಗಳಿರುವ ಅಲಂಕಾರ ಶಾಸ್ತ್ರದ ಇತಿಹಾಸದಲ್ಲಿ ಒಂದೇ ವಿವರಣೆ, ಉದಾಹರಣೆಯೂ ಇಲ್ಲದ ಗ್ರಂಥ ಮತ್ತೊಂದು ಯಾವುದೂ ನಮ್ಮ ಕಣ್ಣಿಗೆ ಬೀಳುವುದಿಲ್ಲ. ಇದೊಂದೇ ಅಪವಾದವೆನ್ನಲು ಕೆಲವರ ಊಹೆ ಹೊರತು ಬೇರೆ ಕಾರಣವೇನಿದೆ ?

(೩) ಈ ಗ್ರಂಥಕ್ಕೆ 'ಧ್ವನ್ಯಾಲೋಕ,' 'ಕಾವ್ಯಾಲೋಕ,' 'ಸಹೃದಯಾಲೋಕ' ಎಂಬ ನಾಮಾಂತರಗಳುಂಟು. 'ಆಲೋಕ'ವೆಂಬುದು ವೃತ್ತಿಗ್ರಂಥದ ಹೆಸರೆಂದೂ, ತತ್ಪೂರ್ವಪದವು—ಎಂದರೆ 'ಧ್ವನಿ', 'ಕಾವ್ಯ', 'ಸಹೃದಯ'—ಕಾರಿಕಾಗ್ರಂಥದ ಹೆಸರೆಂದೂ ಡಾ. ಕಾಣೆಯವರ ಸೂಚನೆ. ಇದೆಷ್ಟು ಅಸಂಭವ ! ಒಂದು ವೇಳೆ 'ಧ್ವನಿ' ಯೆಂಬ ಪಾರಿಭಾಷಿಕ ಶಬ್ದ ಹಾಗೆ ಹೆಸರಾಗಬಹುದಾದರೂ 'ಕಾವ್ಯ', 'ಸಹೃದಯ' ಎಂಬ ಹೆಸರುಗಳು ಕಾವ್ಯಲಕ್ಷಣಗ್ರಂಥಕ್ಕೆ ಸಂಸ್ಕೃತದಲ್ಲಿ ನಾಮಧೇಯಗಳಾಗುವ ಶಕ್ಯತೆಯುಂಟೆ ? ನಮಗಂತೂ ಶಕ್ಯವೆನಿಸುವುದಿಲ್ಲ.

(೪) ಅಲಂಕಾರಶಾಸ್ತ್ರದ ಇತಿಹಾಸದಲ್ಲಿ ಕಾರಿಕೆಯನ್ನೊಬ್ಬನೂ ವೃತ್ತಿಯನ್ನು ಮತ್ತೊಬ್ಬನೂ ಬರೆದ ಬೇರಾವ ಉದಾಹರಣೆಯೂ ಇಲ್ಲವೇ ಇಲ್ಲ. ವಾಮನ, ಕುಂತಕ, ಮಹಿಮ, ಮಮ್ಮಟ, ಮುಂತಾದ ಮುಂದಿನ ಕಾಶ್ಮೀರಕ ಲೇಖಕರೆಲ್ಲರೂ ತಾವೇ ಸ್ವಕೃತ ಕಾರಿಕೆಗಳಿಗೆ ವೃತ್ತಿಯನ್ನು ಬರೆದವರು.

(೫) ಮುಖ್ಯವಾಗಿ ಅಭಿನವಗುಪ್ತರ ಸಾಕ್ಷ್ಯದ ವಿಷಯ. ಇದು ಇಬ್ಬಾಯ ಖಡ್ಗದಂತೆ ದ್ವಿಮುಖವಾಗಿಯೂ ಕತ್ತರಿಸುತ್ತದೆ. ಒಮ್ಮೆ ಆನಂದವರ್ಧನನೇ ಕಾರಿಕಾಕಾರನೆಂದು ಹೇಳಿ ನೂರೆಂಟು ಸಲ ಕಾರಿಕಾಕಾರನು ವೃತ್ತಿಕಾರನಲ್ಲವೆಂದರೆ, ಒಮ್ಮೆ ಅವರ ಬುದ್ಧಿಯೂ ಕೆಟ್ಟಿತೆಂದು ನಾವು ಊಹಿಸಿದರೆ ಸರಿಯೆ ?

ಎಷ್ಟೇ ವಿದ್ವಾಂಸರಾಗಲಿ—"ನ ಹಿ ಕಲುಷಿತಶೇಮುಷೀಕತ್ವಮಾವಿಷ್ಕರಣೀಯಮ್."

ಎಂದಮೇಲೆ ಇದಕ್ಕೆ ಬೇರೆ ಪರಿಹಾರವಿಲ್ಲವೇ ? ನೋಡಬೇಕಾದ್ದು ನಮ್ಮ ಕೆಲಸ.

ಕಾಶ್ಮೀರದ ಆ ಯುಗದಲ್ಲಿ ಇತರ ಶಾಸ್ತ್ರಗಳಲ್ಲೂ ಒಬ್ಬರೇ ಕಾರಿಕೆವೃತ್ತಿಗಳನ್ನು ಬರೆದರೂ—ಉದಾ: 'ಸ್ಪಂದಕಾರಿಕೆ' ಮತ್ತು 'ಸ್ಪಂದವೃತ್ತಿ'—ಇತರರಿಗೆ ಸೂಕ್ಷ್ಮ ಗೊತ್ತಾಗುವಂತೆ ಬರೆಯುತ್ತಿರಲಿಲ್ಲ. ಎರಡಕ್ಕೂ ಒಬ್ಬರೇ ಲೇಖಕರೆಂಬುದನ್ನು ತೋರಗೊಡುತ್ತಿರಲಿಲ್ಲ. ಮಮ್ಮಟನ ಕಾವ್ಯಪ್ರಕಾಶದಲ್ಲಾದರೂ ಹೀಗೆಯೇ. ಇದು ಅಂದಿನ ಶಾಸ್ತ್ರಲೇಖಕರ ಸಂಪ್ರದಾಯವಾಗಿತ್ತು. ವ್ಯಾಖ್ಯಾಕಾರರು ಕೂಡ ತಮ್ಮ ವಿವರಣೆಗಳಲ್ಲಿ ಪೂರ್ವಾಪರ ಗ್ರಂಥ ಸಂಗತಿಯನ್ನು ತೋರಿಸುವಾಗ ವೃತ್ತಿಭಾಗವೇ ಒಂದು ಸ್ವಯಂಪೂರ್ಣ ಗ್ರಂಥವೆಂದೂ ಕಾರಿಕಾಭಾಗವೇ ಬೇರೆ ಸ್ವಯಂಪೂರ್ಣ ಗ್ರಂಥವೆಂದೂ ಗೃಹೀತ ಹಿಡಿದು, ವೃತ್ತಿಯು ಕೆಲಸ ಕಾರಿಕಾರ್ಥದ ವಿವರಣೆ, ಅದನ್ನು ಅದು ಹೇಗೆ ಸಮರ್ಪಕವಾಗಿ ನಿರ್ವಹಿಸಿದೆ ಎಂಬುದನ್ನು ಸ್ಪಷ್ಟಪಡಿಸುತ್ತಿದ್ದರು. ಆದ್ದರಿಂದ 'ಕಾರಿಕಾಕಾರನು ಹೇಳಿದ್ದನ್ನು ವೃತ್ತಿಕಾರನು ವಿವರಿಸುತ್ತಿದ್ದಾನೆ' ಎಂಬ ಮಾತುಗಳು ಪಲ್ಲವಿಯಂತೆ ವ್ಯಾಖ್ಯಾನಗಳಲ್ಲಿ ಬರುತ್ತಿರುತ್ತವೆ. ಈ ಸಂಪ್ರದಾಯಕ್ಕೆ ಅನುಸಾರವಾಗಿ ಅಭಿನವಗುಪ್ತರೂ ಈ ವಿಭಾಗವನ್ನು ವ್ಯಾಖ್ಯಾಸೌಕರ್ಯಕ್ಕಾಗಿ ಮಾಡಿಕೊಂಡಿದ್ದಾರೆಂದರೆ ಔಚಿತ್ಯವುಳಿಯುತ್ತದೆ.

ಆದುದರಿಂದ ಆನಂದವರ್ಧನನೇ ಕಾರಿಕಾ-ವೃತ್ತಿಗಳೆರಡೂ ಕೂಡಿ ಆದ "ಧ್ವನ್ಯಾಲೋಕ" ಗ್ರಂಥದ ಕರ್ತೃವೆಂಬುದು ನಮ್ಮ ಅಭಿಪ್ರಾಯ.*

## III

### ಆನಂದವರ್ಧನನ ಕಾಲ, ದೇಶ ಮತ್ತು ಕೃತಿಗಳು

ಈತನ ಉಪಾಧಿಯಾದ 'ರಾಜಾನಕ' ಶಬ್ದವೇ ಸೂಚಿಸುವಂತೆ ಆನಂದವರ್ಧನನು ಕಾಶ್ಮೀರ ದೇಶದವನು. ಇವನ ತಂದೆಯ ಹೆಸರು 'ನೋಣ' ಎಂದು ಇವನ ಸ್ತೋತ್ರಕಾವ್ಯವಾದ '**ದೇವೀಶತಕ**'ದಿಂದ ತಿಳಿಯುತ್ತದೆ. ಕಾಶ್ಮೀರ ರಾಜಚರಿತೆಯಾದ ಕಲ್ಹಣನ ರಾಜತರಂಗಿಣಿಯಿಂದ ಈತನು ಕ್ರಿ.ಶ. ೮೫೫ರಿಂದ ೮೮೩ರ ವರೆಗೆ ಆಳಿದ ಅವಂತಿವರ್ಮನ ಆಸ್ಥಾನದಲ್ಲಿ ಪ್ರಸಿದ್ಧಿಯನ್ನೈದಿದನೆಂದು ತಿಳಿಯುತ್ತದೆ. ಈತನು ಉದ್ಭಟ ವಾಮನರಿಗಿಂತ (೮೦೦) ಈಚೆಯವನೂ ರಾಜಶೇಖರ, ಜಯಂತ ಭಟ್ಟರಿಗಿಂತ (೯೦೦) ಹಿಂದಿನವನೂ ಆಗಿದ್ದನೆಂಬುದಕ್ಕೆ ಗ್ರಂಥಸ್ಥ ಪ್ರಮಾಣಗಳೂ ಇವೆ. ಕಾಲವಿಷಯದಲ್ಲಿರುವ ಒಂದೇ ತೊಡಕೆಂದರೆ ಮನೋರಥನೆಂಬುವನು

---

*ಇದೇ ವಿಷಯವನ್ನು ಪ್ರೊ. ತೀ. ನಂ. ಶ್ರೀಕಂಠಯ್ಯನವರೂ ಭಾರತೀಯ ಕಾವ್ಯಮೀಮಾಂಸೆ (ಪು. ೫೯-೬೪) ಯಲ್ಲಿ ಪ್ರಸ್ತಾಪಿಸಿದ್ದಾರೆ.

ಆನಂದವರ್ಧನನ ಸಮಕಾಲೀನನೆಂಬ ಅಭಿನವಗುಪ್ತರ ಉಲ್ಲೇಖ. ಮನೋರಥನು ರಾಜತರಂಗಿಣಿಯ ಪ್ರಕಾರ ಜಯಾಪೀಡ (೭೮೦-೮೧೧) ಮತ್ತು ಅವನ ನಂತರದ ಲಲಿತಾದಿತ್ಯರ ಕಾಲದವನು. ಆನಂದವರ್ಧನನು ೮೮೦ರ ವೇಳೆಗೆ ಮಧ್ಯವಯಸ್ಕ ನಾದರೆ ಇವನು ಅವನ ಕಾಲದಲ್ಲಿದ್ದಿರಬಹುದೆ? ಎಂಬುದು ಸಮಸ್ಯೆ. ಆದರೆ ಈ ವಿಷಯದಲ್ಲಿ ಏನನ್ನೂ ಸ್ಪಷ್ಟವಾಗಿ ನಿರ್ಣಯಿಸುವುದು ಕಷ್ಟ.

ಆನಂದವರ್ಧನನ ಅನೇಕ ಕೃತಿಗಳ ಉಲ್ಲೇಖಗಳು ದೊರೆಯುತ್ತವಾದರೂ ಈಗ ಉಪಲಬ್ಧವಿರುವ ಕೃತಿಯೆಂದರೆ ಧ್ವನ್ಯಾಲೋಕದ ಅನಂತರ ದೇವೀಶತಕವೊಂದೇ. ಇದು 'ಕಾವ್ಯಮಾಲಾ' ಎಂಬ ಗ್ರಂಥಮಾಲೆಯಲ್ಲಿ ಮುಂಬಯಿಯಿಂದಚ್ಚಾಗಿದೆ. ಇದಕ್ಕೆ ವ್ಯಾಖ್ಯಾನವನ್ನು ಬರೆದವನು ಹತ್ತನೆಯ ಶತಮಾನದ ಕಯ್ಯಟನೆಂಬುವನು. ದೇವಿಯೇ ಸ್ವಪ್ನದಲ್ಲಿ ಬಂದು ಈ ನಿರುಪಮಶತಕವನ್ನು ತನ್ನಿಂದ ಬರೆಯಿಸಿದಳೆಂದು ಆನಂದವರ್ಧನನು ಹೇಳುತ್ತಾನೆ —

ದೇವ್ಯಾ ಸ್ವಪ್ನೋದ್ಗಮಾದಿಷ್ಟದೇವೀಶತಕಸಂಜ್ಞಯಾ।
ದೇಶಿತಾನುಪಮಾಮಾಧದತೋ ನೋಣಸುತೋ ನುತಿಮ್ ॥

ಇದರಿಂದ ಮಮ್ಮಟನು ಉದಾಹರಣೆಗಳನ್ನು ಕಾವ್ಯಪ್ರಕಾಶದಲ್ಲಿ ಎತ್ತಿಕೊಂಡಿದ್ದಾನೆ.* ಆನಂದವರ್ಧನನು ದುಷ್ಕರಕವಿತ್ವ ರಚನೆಗಳಲ್ಲಿಯೂ ತನಗಿರುವ ಕೌಶಲವನ್ನು ಮೆರೆಯುವ ಒಂದೇ ಉದ್ದೇಶದಿಂದ ಈ ಸ್ತೋತ್ರಶತಕವನ್ನು ರಚಿಸಿದಂತಿದೆ. ಇಲ್ಲಿ ಯಮಕಾನುಪ್ರಾಸಗಳದೇ ಸಾಮ್ರಾಜ್ಯ. ಇದರ ಚಿತ್ರಚಮತ್ಕಾರವನ್ನು ಕಂಡು ಬೆರಗಾದವರು ಇವನೇ ಧ್ವನ್ಯಾಲೋಕದಲ್ಲಿ ಚಿತ್ರಕ್ಕೆ ಕನಿಷ್ಠಸ್ಥಾನವನ್ನು ಹೇಗೆ ಕೊಟ್ಟನೆಂದು ಸೋಜಿಗಪಡುವಂತಿದೆ. ತನ್ನ ತಾರುಣ್ಯದಲ್ಲಿದ್ದ ಶಬ್ದಚಿತ್ರ ವ್ಯಾಮೋಹ ಇಳಿದು ಮಾಗಿದ ಮುಪ್ಪಿನಲ್ಲಿ ಧ್ವನ್ಯಾಲೋಕವನ್ನು ರಚಿಸಿದನೋ ಏನೋ! ಆದರೆ ದೇವೀಶತಕಕ್ಕೂ ಮುಂಚೆಯೇ ಅವನು ಕನಿಷ್ಠಪಕ್ಷ ಎರಡು ಮಹಾಕಾವ್ಯಗಳನ್ನು— ಒಂದು ಪ್ರಾಕೃತದ '**ವಿಷಮಬಾಣಲೀಲೆ**', ಇನ್ನೊಂದು ಸಂಸ್ಕೃತದ '**ಅರ್ಜುನಚರಿತ**' —ರಚಿಸಿಯಾಗಿತ್ತೆಂಬುದು ಸ್ಪಷ್ಟ —

ಯೇನಾನಂದ ಕಥಾಯಾಂ
ತ್ರಿದಶಾನಂದೇ ಚ ಲಾಲಿತಾ ವಾಣೀ।

---

* ಹೋಲಿಸಿರಿ, ಕನ್ನಡ ಕಾವ್ಯಪ್ರಕಾಶ, ಸಂಪುಟ ೨, ಪು. ೧೪೫. ಇತ್ಯಾದಿ.

"ಸರಸ್ವತಿ ಪ್ರಸಾದಂ ಮೇ ಸ್ಥಿತಿಂ ಚಿತ್ತಸರಸ್ವತಿ।
ಸರ ಸ್ವತಿ ಕುರು ಕ್ಷೇತ್ರ-ಕುರುಕ್ಷೇತ್ರ-ಸರಸ್ವತಿ ॥"

ತೇನ ಸುದುಷ್ಕರಮೇತತ್
ಸ್ತೋತ್ರಂ ದೇವ್ಯಾಃ ಕೃತಂ ಭಕ್ತ್ಯಾ ॥

ಎರಡರಲ್ಲೂ ತನ್ನ ನಾಮನಿರ್ದೇಶದ ಸಲುವಾಗಿ ಗ್ರಂಥನಿರ್ದೇಶದಲ್ಲಿ ಸ್ವಲ್ಪ ಮಾರ್ಪಡಿಸಿಕೊಂಡಿದ್ದಾನೆ. ಆದರೆ ಕಯ್ಯಟನ ವ್ಯಾಖ್ಯಾನ ಯಾವ ಕೃತಿಗಳೆಂಬುದನ್ನು ಸ್ಪಷ್ಟಪಡಿಸುತ್ತದೆ. ಧ್ವನ್ಯಾಲೋಕದಲ್ಲಿಯೂ ಹೀಗೆಯೇ ಗ್ರಂಥಾದಿಯಲ್ಲಿಯೂ 'ಆನಂದ' ಶಬ್ದವು ಮುದ್ರಿಕೆಯಂತೆ ಬರುತ್ತದೆ. ಅಭಿನವಗುಪ್ತರು ಅದನ್ನು ಸ್ಪಷ್ಟಪಡಿಸಿದ್ದಾರೆ. ಈ ಎರಡು ಮಹಾಕಾವ್ಯಗಳಿಂದ ತೆಗೆದ ಉದಾಹರಣೆಗಳು ಧ್ವನ್ಯಾಲೋಕದಲ್ಲಿಯೂ ಬರುತ್ತವೆ.

ಈತನ ಅನುಪಲಬ್ಧ ಕೃತಿಗಳೆರಡು ಶಾಸ್ತ್ರ ಕೃತಿಗಳು —

(೧) ತತ್ತ್ವಾಲೋಕ–ಪರಮಪುರುಷಾರ್ಥವಾದ ಮೋಕ್ಷ ಪರೀಕ್ಷೆಗಾಗಿ ಹೊರಟ ವೇದಾಂತಗ್ರಂಥವಿದು.

(೨) 'ಧರ್ಮೋತ್ತರೀ' (ಪಾಠಾಂತರ-ಧರ್ಮೋತ್ತಮಾ) — ಇದು ಬೌದ್ಧ ದಾರ್ಶನಿಕರಲ್ಲಿ ಅಗ್ರಗಣ್ಯನಾದ ಧರ್ಮಕೀರ್ತಿಯ ಪ್ರಮಾಣ ವಿನಿಶ್ಚಯ ಗ್ರಂಥಕ್ಕೆ ಧರ್ಮೋತ್ತರಾಚಾರ್ಯನು ಬರೆದ ಟೀಕೆಯ ವಿವರಣೆ.

ಅಭಿನವಗುಪ್ತರು ಈ ಎರಡು ಕೃತಿಗಳನ್ನು 'ಲೋಚನ'ದಲ್ಲಿ ಪ್ರಸ್ತಾಪಿಸಿದ್ದಾರೆ; ಆನಂದವರ್ಧನನು ಧ್ವನ್ಯಾಲೋಕವನ್ನು ಬರೆಯುವ ಹೊತ್ತಿಗೆ ಇವನ್ನೂ ಬರೆದಾಗಿತ್ತೆಂದು ಸ್ಪಷ್ಟವಾಗುತ್ತದೆ ಆತನೇ ಪರ್ಯಾಯವಾಗಿ ಇವುಗಳ ಮಾತನ್ನೆತ್ತುವುದರಿಂದ. ಹೀಗೆ ಧ್ವನ್ಯಾಲೋಕ, ಮಹಾಕವಿಯೆಂದೂ ಶಾಸ್ತ್ರಕಾರನೆಂದೂ ಪ್ರಸಿದ್ಧಿಗೆ ಬಂದಾಗಿದ್ದ ಆನಂದವರ್ಧನನ ಪರಿಪಕ್ವ ಪ್ರತಿಭೆಯ ಫಲವೆಂದು ಭಾವಿಸಲಡ್ಡಿಯಿಲ್ಲ. ಇದಕ್ಕೆ ಇಲ್ಲಿ ಉದಾಹೃತವಾಗಿರುವ

'ಯಾ ವ್ಯಾಪಾರವತೀ ರಸಾನ್ ರಸಯಿತುಂ....

ಎಂಬ ಪದ್ಯವೂ ಸಾಕ್ಷ್ಯವನ್ನೊದಗಿಸುತ್ತದೆ. ವಿಶ್ವವನ್ನು ನವೋನವವಾದ ರಸೈಕ ದೃಷ್ಟಿಯಿಂದೊಮ್ಮೆ, ಪರಿನಿಷ್ಠಿತವಾದ ವಿದ್ವದ್ದೃಷ್ಟಿಯಿಂದೊಮ್ಮೆ ಎಷ್ಟೆಷ್ಟು ವಿವೇಚಿಸಿದರೂ, ಚಿತ್ತಕ್ಕೆ ಆಯಾಸವಾಯಿತೇ ಹೊರತು, 'ಭಗವಂತನೆ, ನಿನ್ನ ಭಕ್ತಿಗೆ ಸಮಾನವಾದ ಸೌಖ್ಯ ದೊರೆಯಲಿಲ್ಲ!' ಎಂಬ ಉದ್ಗಾರ ಅನುಭವದಲ್ಲಿ ಮಾಗಿದ ಮಹಾಕವಿಯ ಹೃದಯಾಂತರಾಳದ ಪ್ರತಿಧ್ವನಿಯಂತೆ ಕಾಣುವುದಿಲ್ಲವೆ? ಹೀಗೆ ಆನಂದವರ್ಧನನ ಜೀವನ ಸರ್ವಾಂಗಸುಂದರವೂ ತತ್ತ್ವಾನುಭವ ಬಂಧುರವೂ ಭಕ್ತಿ ನಿರ್ಭರವೂ ಆಗಿತ್ತೆಂದು ಊಹಿಸಲವಕಾಶವಿದೆ.

## IV

### ಅಭಿನವಗುಪ್ತರ 'ಲೋಚನ'

ಎನ್ನಯ ಲೋಚನವಿರದಿರೆ
ಮುನ್ನಿನ ಚಂದ್ರಿಕೆಯದಿರ್ದೊಡೇನಾಲೋಕಂ।
ತನ್ನಯ ಚೆಲ್ವಂ ತೋರ್ಪುದೆ
ಯೆನ್ನುತೆ ರಚಿಸಿರ್ಪನಭಿನವಂ ಲೋಚನಮಂ॥*

ಆನಂದವರ್ಧನನ ಗ್ರಂಥಕ್ಕೆ ಅಪೂರ್ವವಾದ ಪ್ರಸಿದ್ಧಿ ಅತ್ಯಲ್ಪ ಕಾಲದಲ್ಲಿಯೇ ಬಂದುದಕ್ಕೆ "ಚಂದ್ರಿಕಾ" ಮುಂತಾದ ಟೀಕೆಗಳು ಐವತ್ತು ವರ್ಷಗಳ ಅವಧಿಯಲ್ಲೇ ಬರೆಯಲ್ಪಟ್ಟಿದು ಒಂದು ಸಾಕ್ಷಿಯಾದರೆ, ಅದೇ ಅವಧಿಯಲ್ಲಿ ಭಟ್ಟನಾಯಕ, ಮಹಿಮಭಟ್ಟ ಮುಂತಾದ ಮಹಾ ದಾರ್ಶನಿಕ ವಿಮರ್ಶಕರು ವ್ಯಂಜನಾ ವ್ಯಾಪಾರದ ಖಂಡನೆಗಾಗಿ ಸ್ವತಂತ್ರ ಉದ್ಗ್ರಂಥಗಳನ್ನು—ಹೃದಯದರ್ಪಣ, ವ್ಯಕ್ತಿವಿವೇಕ, ಇತ್ಯಾದಿ—ಬರೆದುದು ಇನ್ನೊಂದು ಸಾಕ್ಷಿಯನ್ನೊದಗಿಸುತ್ತದೆ. ಇವುಗಳಲ್ಲಿ ಚಂದ್ರಿಕಾಕಾರನು ಅಭಿನವಗುಪ್ತರ ವಂಶಕ್ಕೆ ಸೇರಿದ್ದವನೆಂಬುದು ಮತ್ತೂ ವಿಶೇಷ. ಇಷ್ಟಾದರೂ ಆತನ ಸಿದ್ಧಾಂತ ಮಂಡನೆಯಿಂದ ಖಂಡನಕಾರರ ಕೆಲಸ ದುಷ್ಕರವಾಗುವ ಬದಲು ಸುಕರವೇ ಆಗಿದ್ದಂತೆ ತೋರುತ್ತದೆ. ಈ ಖಂಡನೆಮಂಡನೆಗಳೆಲ್ಲವನ್ನೂ ಹೊಸದಾಗಿ ಪುನರ್ವಿಮರ್ಶಿಸಿ, ಶಾಸ್ತ್ರೀಯವಾದ ಶೈಲಿಯಿಂದಲೇ ಶಾಸ್ತ್ರಪರೀಕ್ಷಕರ ಆಶಂಕೆಗಳನ್ನು ನಿವಾರಿಸಿ, ಗ್ರಂಥಾರ್ಥವನ್ನು ಸಮಗ್ರವಾಗಿಯೂ ಸುಸಂಗತವಾಗಿಯೂ ವಿವರಿಸಿ, ಲಕ್ಷ್ಯಲಕ್ಷಣಗಳ ಸಮನ್ವಯವನ್ನು ಸುಂದರವಾಗಿ ಸಾಧಿಸಿ, ಗ್ರಂಥದಲ್ಲಿ ಸೂಚಿಸಿ ಕೈಬಿಟ್ಟ ಹಲವಾರು ಅಂಶಗಳನ್ನು ವಿಸ್ತರಿಸಿ, ಹೊಸ ಉದಾಹರಣೆಗಳನ್ನು ಸೇರಿಸಿ, ಸಿದ್ಧಾಂತವನ್ನು ಸರ್ವ ಗ್ರಾಹ್ಯವಾಗುವಂತೆ ಪ್ರತಿಷ್ಠಾಪಿಸಿದ ಪರಮಾಚಾರ್ಯರೇ ಅಭಿನವಗುಪ್ತರು. ಪ್ರತ್ಯಭಿಜ್ಞಾದರ್ಶನದ ವಿಖ್ಯಾತ ಭಾಷ್ಯಕಾರರಾದ ಇವರು ಜೀವಂತರಾಗಿ ಕೈಲಾಸಕ್ಕೆ ಶಿಷ್ಯರೊಡನೆ ತೆರಳಿದ ವಿಭೂತಿ ಪುರುಷರೆಂದು ಕಾಶ್ಮೀರದಲ್ಲಿ ದಂತಕಥೆಗಳು ಹುಟ್ಟಿವೆ. ಮಹಾ ತತ್ತ್ವಜ್ಞಾನಿಗಳೂ, ಸರ್ವತಂತ್ರಸ್ವತಂತ್ರರೂ, ಸರ್ವಶಾಸ್ತ್ರ ಪಾರಂಗತರೂ, ಆತ್ಮಾನುಭವ ಸಂಪನ್ನರೂ ಆದ ಈ ಮಹಾಮಹೇಶ್ವರರು ಅನೇಕ ಶಾಸ್ತ್ರಗ್ರಂಥಗಳನ್ನೂ, ಸ್ತೋತ್ರಗಳನ್ನೂ, ಭಾಷ್ಯವ್ಯಾಖ್ಯಾನಗಳನ್ನೂ ಬರೆದು ಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಿ ಅಮರರಾಗಿರುವರು. ಇವರು ಕ್ರಿ.ಶ. ೯೮೦ರಿಂದ ೧೦೨೦ರ ಅವಧಿಯಲ್ಲಿ ಜೀವಿಸಿದ್ದರೆಂಬುದು ನಿರ್ವಿವಾದವಾಗಿದೆ. ಇವರೂ ಕಾಶ್ಮೀರದವರೇ.

'ಪ್ರತ್ಯಭಿಜ್ಞಾವಿಮರ್ಶಿನೀ', 'ಮಾಲಿನೀ ವಿಜಯ ವಾರ್ತಿಕ', 'ಪರಮಾರ್ಥ

---

* "ಕಿಂ ಲೋಚನಂ ವಿನಾ ಲೋಕೋ ಭಾತಿ ಚಂದ್ರಿಕಯಾಪಿ ಹಿ।
ತೇನಾಭಿನವಗುಪ್ತೋಽತ್ರ ಲೋಚನೋನ್ಮೀಲನಂ ವ್ಯಧಾತ್॥"

ಸಾರ', ಮುಂತಾದ ಶಾಸ್ತ್ರಗ್ರಂಥಗಳನ್ನು ಬರೆದು ಇವರು ಪ್ರಸಿದ್ಧರಾಗಿರುವುದಿರಲಿ, ಭರತನಾಟ್ಯ ಶಾಸ್ತ್ರಕ್ಕೆ 'ಅಭಿನವ ಭಾರತೀ' ಎಂಬ ಸರ್ವಾಂಗಸುಂದರವಾದ ಭಾಷ್ಯವನ್ನು ಬರೆದು ಅದ್ವಿತೀಯ ಕೀರ್ತಿಯನ್ನು ಗಳಿಸಿದ್ದಾರೆ. ಸಾಹಿತ್ಯಶಾಸ್ತ್ರದ ಅಧ್ಯಯನವನ್ನು ಇವರು ಭಟ್ಟತೌತ ಮತ್ತು ಭಟ್ಟ ಇಂದುರಾಜರ ಸನ್ನಿಧಿಯಲ್ಲಿ ಕೈಗೊಂಡು ತೌತರ 'ಕಾವ್ಯಕೌತುಕ'ಕ್ಕೆ ವಿವರಣೆಯನ್ನು ಬರೆದರು. ದುರ್ದೈವದಿಂದ ಆ ಗ್ರಂಥ ಈಗ ಉಪಲಬ್ಧವಿಲ್ಲ. ಉಳಿದೆಲ್ಲ ಗ್ರಂಥಗಳು ಲುಪ್ತವಾದರೂ "ಲೋಚನ"ವೊಂದೇ ಅವರ ಅಪಾರ ಬಹುಶ್ರುತತ್ವ, ಅಪೂರ್ವ ಪದಪದ್ಧತಿ, ಅಮ್ಲಾನ-ಪ್ರತಿಭೆ, ಅಮೇಯ ರಸಿಕತೆ, ಅಸೀಮ ಪಾಂಡಿತ್ಯಗಳ ಶಾಶ್ವತ ಕೀರ್ತಿಸ್ತಂಭವಾಗಿ ನಿಲ್ಲಬಲ್ಲದು. ಅವರ ಮೂಲದ ಯೋಜನೆಯ ಕೌಶಲವನ್ನು ಮೆಚ್ಚಬೇಕೆ, ವಿವರಣೆಯ ಸೊಬಗನ್ನು ಬಣ್ಣಿಸಬೇಕೆ, ವಿವೇಚನೆಯ ಪರಿಣತಿಯನ್ನು ಹೊಗಳಬೇಕೆ, ಶಬ್ದಶುದ್ಧಿ, ಪ್ರಯೋಗ ಸಿದ್ಧಿಗಳನ್ನು ಎತ್ತಿ ತೋರಿಸಬೇಕೆ, ಶಾಸ್ತ್ರಯುಕ್ತಿ ವಿಚಾರ ಶಕ್ತಿಗಳನ್ನು ಹೇಳಬೇಕೆ, ಲಕ್ಷ್ಯವಿಸ್ತಾರ, ಲಕ್ಷ್ಯನಿರ್ಮಾಣದಕ್ಷತೆ, ಪೂರ್ವಪಕ್ಷ ನಿವಾರಣೆಯ ವಿಚಕ್ಷಣೆಗಳನ್ನು ಹೆಸರಿಸಬೇಕೆ, ಏನೊಂದೂ ತಿಳಿಯದೆ ವಿಮರ್ಶಕನು ದಿಙ್ಮೂಢನಾಗಿ ನಿಲ್ಲುತ್ತಾನೆ. ಇವರ ಬರವಣಿಗೆಯ ರೀತಿ-ನೀತಿಗಳು, ಉಪಮಾನ, ಅವಧಾನಗಳು, ಪ್ರೌಢಿ-ಪರಿಪಾಕಗಳು, ಇವರವೇ. ಅರ್ಥಪುಷ್ಟಿಗೂ ನೂತ್ನಸೃಷ್ಟಿಗೂ ನೆಲೆವೀಡಾಗಿರುವ "ಲೋಚನ"ಕ್ಕೆ –ಇದು ವ್ಯಾಖ್ಯಾನವಾದರೂ—ಸಂಸ್ಕೃತ ಅಲಂಕಾರಶಾಸ್ತ್ರದಲ್ಲಿ ಸ್ವತಂತ್ರ ಗ್ರಂಥದ ಪ್ರಾಶಸ್ತ್ಯವನ್ನು ಪ್ರಾಚೀನರಂತೆ ಅರ್ವಾಚೀನ ವಿದ್ವಾಂಸರೂ ಕೊಡುತ್ತಾರೆ. ಶಂಕರ ಭಗವತ್ಪಾದರ ಶಾರೀರಕ ಭಾಷ್ಯಕ್ಕೆ ಕಡಿಮೆಯಿಲ್ಲದ ಮಹತ್ವ ಧ್ವನಿತತ್ತ್ವದ ಈ ವಿವರಣೆಗೆ ಗುಣ ಗೌರವದಿಂದಲೇ ಸಂಪ್ರಾಪ್ತವಾಗಿದೆ.

ಆದರೆ ಒಂದೇ ಕೊರತೆಯೆಂದರೆ ಇದರ ಉಪಲಬ್ಧ ಹಸ್ತಪ್ರತಿಗಳ ಸಂಖ್ಯೆ ಸಣ್ಣದಾಗಿದ್ದು ಪಾಠಗಳಲ್ಲಿ ಬಹಳಷ್ಟು ಅಶುದ್ಧಿಯುಳಿದಿರುವುದು. ಮೂರು ನಾಲ್ಕು ಸಂಸ್ಕರಣಗಳು ಬಂದರೂ, ಇನ್ನೂ ಪೂರ್ಣವಾಗಿ ಶುದ್ಧ ಲೋಚನ ಪಾಠ ಸಿಕ್ಕಿದೆಯೆನ್ನುವಂತಿಲ್ಲ. ಪ್ರಾಚೀನ ಪಠನ–ಪಾಠನ ಪರಂಪರೆಯೂ ಈ ಉದ್ಗ್ರಂಥಕ್ಕೆ ಅನುಸ್ಯೂತವಾಗಿ ಈವರೆಗೆ ಉಳಿದಂತಿಲ್ಲ. ಪ್ರಸ್ತುತ ಲೋಚನಸಾರದಲ್ಲಿ ಮೊದಲನೆಯ ಉದ್ದ್ಯೋತಕ್ಕೆ ಮದ್ರಾಸಿನ ಕುಪ್ಪುಸ್ವಾಮಿಶಾಸ್ತ್ರಿ ರಿಸರ್ಚ್ ಇನ್‌ಸ್ಟಿಟ್ಯೂಟ್ ಸಂಸ್ಕರಣದ ಪಾಠವನ್ನೂ—ಇದರಲ್ಲಿ ಲೋಚನಕ್ಕೆ ಉತ್ತುಂಗೋದಯ ರಾಜನು ಬರೆದಿರುವ ಉತ್ತಮ ವ್ಯಾಖ್ಯಾನವೂ (ಕೌಮುದೀ) ಉಂಟು–ಉಳಿದ ಕಡೆ ಚೌಖಾಂಬಾ ಸಂಸ್ಕೃತ ಗ್ರಂಥಮಾಲೆಯ ಬಾಲಪ್ರಿಯಾ ವ್ಯಾಖ್ಯಾಯುತ ಸಂಸ್ಕರಣದ ಪಾಠವನ್ನೂ ಹೆಚ್ಚಾಗಿ ಅನುಸರಿಸಿದೆ; ಎಲ್ಲೆಡೆಯಲ್ಲಿಯೂ ನಿರ್ಣಯಸಾಗರದ ಸಂಸ್ಕರಣದ ಪಾಠಗಳೊಡನೆ ಹೋಲಿಸಿ ನೋಡಲಾಗಿದೆ.

ಲೋಚನವನ್ನೋದಿ ಪ್ರಭಾವಿತರಾದವರ ಸಂಖ್ಯೆ ಸಣ್ಣದಲ್ಲ. ಮಮ್ಮಟನಂತಹ ವಾಗ್ದೇವತಾವತಾರನಿರಲಿ, ಯಾರನ್ನೂ ಲೆಕ್ಕಿಸದೆ

ಕಿಂ ಸ್ಮರ್ಯತೇ ಸುಮನಸಾಂ ಮನಸಾಪಿ ಗಂಧಃ
ಕಸ್ತೂರಿಕಾಜನನಶಕ್ತಿಭೃತಾ ಮೃಗೇಣ

ಎನ್ನುವ ಗರ್ವಪರ್ವತಪ್ರಾಯನಾದ ಜಗನ್ನಾಥನಿರಲಿ, ಎಲ್ಲರಿಗೂ ಅಭಿನವಗುಪ್ತರ ಮಾತೆಂದರೆ ವೇದವಾಕ್ಯದಷ್ಟು ಪ್ರಮಾಣ. ಕಾವೇರೀತೀರದಲ್ಲಿ 'ಮಹಾರ್ಥಮಂಜರಿ' ಯನ್ನು—ಇದೊಂದು ಪ್ರತ್ಯಭಿಜ್ಞಾಶಾಸ್ತ್ರದ ಗ್ರಂಥ—ಬರೆದ ಮಹೇಶ್ವರಾನಂದನು ಈ ಗ್ರಂಥಕ್ಕೆ ಸಲ್ಲಿಸುವ ಕಾಣಿಕೆಯಿದು —

ಸಾಹಿತ್ಯಾಬ್ಧೌ ಕರ್ಣಧಾರೋಽಹಮಾಸಂ
ಕಾವ್ಯಾಲೋಕಂ ಲೋಚನಂ ಚಾನುಶೀಲ್ಯ ।

"ಕಾವ್ಯಾಲೋಕ, ಲೋಚನ, ಈ ಗ್ರಂಥಗಳ ಅನುಶೀಲನದಿಂದ ನಾನು ಸಾಹಿತ್ಯ ಸಾಗರದಲ್ಲಿ ಕರ್ಣಧಾರನಾದೆ !"

ಈ ಮಾತನ್ನು ಇಂದೂ ನಿಜವೆನಿಸುತ್ತಿರುವ ಸಹೃದಯರು ನಮ್ಮ ನಾಡಿನಲ್ಲಿದ್ದಾರೆ. ಅವರ ಸಂಖ್ಯೆ ಹೆಚ್ಚಲು ಪ್ರಸ್ತುತ ಗ್ರಂಥದಿಂದ ಸ್ವಲ್ಪವಾದರೂ ನೆರವಾದೀತೆಂದು ನಂಬಿದೆ.

ಮತ್ತೊಬ್ಬ ಅಜ್ಞಾತ ಕವಿ-ಪಂಡಿತನು ಅಭಿನವಗುಪ್ತಪಾದರ ಪ್ರಶಸ್ತಿಗಾಗಿ ಅರವತ್ತು ಎಪ್ಪತ್ತು ಪದ್ಯಗಳ ಒಂದು ಕಾವ್ಯವನ್ನೇ ರಚಿಸಿದ್ದಾನೆ. 'ಗುರುನಾಥ ಪರಾಮರ್ಶ' ಎಂಬ ಈ ಕಾವ್ಯವನ್ನು ಡಾ. ರಾಘವನ್ ಅವರು ಮುದ್ರಿಸಿದ್ದಾರೆ.* ಅದರಿಂದ ಎರಡು ಪದ್ಯಗಳನ್ನು ಇಲ್ಲಿ ಎತ್ತಿ ಬರೆದು ಈ ಪೀಠಿಕೆಯನ್ನು ಮುಗಿಸುತ್ತೇವೆ :—

ಯತ್ ಸಾರಸ್ವತರಸಸಿದ್ಧ ಏವ ಶುದ್ಧಃ
ಸರ್ವೋಽದ್ಧಾ ವಿಲಪತಿ ವಾಚ್ಯವಾಚಕಾತ್ಮಾ ।
ಕಾಶ್ಮೀರೀ ಜಯತಿ ಜಗದ್ಧಿತಾವತಾರಃ
ಸ ಶ್ರೀಮಾನಭಿನವಗುಪ್ತದೇಶಿಕೇಂದ್ರಃ ॥

ಅಭಿನವಗುರುಸಾರಸ್ವತ ಪರಮರಸಾಸ್ವಾದ ಮೋದಮಾನಾನಾಮ್ ।
ಅಮೃತಮಪಿ ದತ್ತಮಮರೈರರುಚಿಕೃದಸ್ಮಾಕಮಾರನಾಲಮಿವ ॥

---

* Bulletin of the Govt. Oriental Mss. Library, Madras Vol. II. No. 1., p. 23.

ಅಭಿನವಗುಪ್ತನಾಥಲಿಖಿತಂ ಲಿಖಿತಂ ಹೃದಯೇ
ತದಿತರ ಶಾಸ್ತ್ರಕಾರ ಲಿಖಿತಂ ಲಿಖಿತಂ ಸಲಿಲೇ....

ಇದಕ್ಕೆ ವಿವರಣೆಯ ಅಗತ್ಯವಿಲ್ಲ. 'ಅವರ ಸಾರಸ್ವತರಸದಿಂದ ಸಿದ್ಧರಾಗದವರಿಲ್ಲ; ಶುದ್ಧರಾಗದವರಿಲ್ಲ. ಆ ರಸದ ಪರಮಾಮೃತವನ್ನು ಸವಿದವರಿಗೆ ದೇವಲೋಕದ ಅಮೃತ ಕಹಿಯೆನಿಸೀತು! ಅಭಿನವಗುಪ್ತರ ಬರೆವಣಿಗೆ ಹೃದಯದಲ್ಲಿ ಕೊರೆದಿಟ್ಟಂತೆ; ಉಳಿದವರ ಬರೆವಣಿಗೆಯೆಲ್ಲ ಜಲಲಿಪಿ!"

ಈ ಅತಿಶಯೋಕ್ತಿಗಳ ಸಾರಾಸಾರ ವಿವೇಚನೆ ಓದುಗರ ಪಾಲಿಗೆ ಬಿಟ್ಟಿರುವ ಕೆಲಸ.

---

# ವಿಷಯಾನುಕ್ರಮಣಿಕೆ

# ಮೊದಲನೆಯ ಉದ್ಯೋತ[1]

ಸ್ವೇಚ್ಛಾಕೇಸರಿಣಃ ಸ್ವಚ್ಛಸ್ವಚ್ಛಾಯಾಯಾಸಿತೇನ್ದವಃ ।
ತ್ರಾಯನ್ತಾಂ ವೋ ಮಧುರಿಪೋಃ ಪ್ರಪನ್ನಾರ್ತಿಚ್ಛಿದೋ ನಖಾಃ ॥[2]

ತೊಳಗುವ ತಿಳಿವೆಳಗಿಂ ಶಶಿ-
ಕಳೆಯನಿಱಕೆಗೈದು ಭಕ್ತರೆಲ್ಲರ ಮಿಡುಕಂ ।
ಕಳೆಯಲ್ ಸಲೆ ನೆಱಿವ ನಖಾ-
ವಳಿಯೆಮ್ಮಂ ಪೊರೆಗುದಾತ್ತನರಕೇಸರಿಯಾ ॥

---

1 ಈ ಉದ್ಯೋತದ ಅನುವಾದದಲ್ಲಿ ಮದರಾಸಿನ ಕುಪ್ಪುಸ್ವಾಮಿಶಾಸ್ತ್ರಿ ರಿಸರ್ಚ್ ಇನ್‌ಸ್ಟಿಟ್ಯೂಟಿನಿಂದ ೧೯೪೪ ನೆ ಇಸವಿಯಲ್ಲಿ ಪ್ರಕಾಶಿತವಾಗಿರುವ ಧ್ವನ್ಯಾಲೋಕದ ಪಾಠವನ್ನು ಅನುಸರಿಸಲಾಗಿದೆ.

ಲೋಚನದ ಮಂಗಳ ಶ್ಲೋಕ

ಅಪೂರ್ವಂ ಯದ್ವಸ್ತು ಪ್ರಥಯತಿ ವಿನಾ ಕಾರಣಕಲಾಂ
ಜಗದ್ ಗ್ರಾವಪ್ರಖ್ಯಂ ನಿಜರಸಭರಾತ್ ಸಾರಯತಿ ಚ ।
ಕ್ರಮಾತ್ ಪ್ರಖ್ಯೋಪಾಖ್ಯಾಪ್ರಸರಸುಭಗಂ ಭಾಸಯತಿ ತತ್
ಸರಸ್ವತ್ಯಾಸ್ತತ್ತ್ವಂ ಕವಿಸಹೃದಯಾಖ್ಯಂ ವಿಜಯತೇ ॥

ಆವುದಪೂರ್ವವಸ್ತುಚಯಮಂ ಪ್ರಕಟಿಪ್ಪುದು ನಿರ್ನಿಮಿತ್ತಮಂ-
ತಾವುದರಿಂದೆ ಕಲ್ಲ ದೊರೆಯೀ ಜಗಮುಂ ರಸಪೂರ್ಣಮಪ್ಪುದೋ ।
ಭಾವಿಸಲಾಖ್ಯೆ ಮತ್ತೆ ಪುನರಾಖ್ಯೆಗಳೀ ಕ್ರಮದಿಂದೆ ಭಾಸಿಪಾ
ಜೀವಮೆ ವಾಗ್ರಹಸ್ಯಮೆಸೆಗುಂ 'ಕವಿ'-'ಭಾವುಕ' ನಾಮಧಾರಕಂ ॥

2 ಇದು ವೃತ್ತಿಕಾರನ ಮಂಗಳಶ್ಲೋಕ. 'ತಮ್ಮ ತೊಳಗುವ ಬೆಳಕಿನಿಂದ ಶಶಿಯನ್ನು ಆಯಾಸಗೊಳಿಸಿದ' ಎಂಬ ನರಸಿಂಹನ ನಖಾವಳಿಯ ವಿಶೇಷಣವು ಬಾಲಚಂದ್ರನಲ್ಲಿ ಅಂತಹ ವಕ್ರತೆಯಾಗಲಿ ರಮಣೀಯತೆಯಾಗಲಿ ಇಲ್ಲವೆಂಬುದನ್ನೂ, ಬಾಲಚಂದ್ರನಿಗೆ ಈ ತನ್ನ ಕುಂದನ್ನು ನೆನೆದು ವ್ಯಥೆಯುಂಟಾಗಿರುವುದನ್ನೂ ಸೂಚಿಸುವಂತಿದೆ. ಇದು 'ವಸ್ತುಧ್ವನಿ'. ಬಾಲಚಂದ್ರನನ್ನು ಹೀಗೆ ನರಹರಿಯ ನಖಾವಳಿ ಮೀರಿಸಿದೆಯೆನ್ನುವಾಗ ವ್ಯತಿರೇಕಾಲಂಕಾರದ ಛಾಯೆ ತೋರುತ್ತದೆ. ಇದು 'ಅಲಂಕಾರ ಧ್ವನಿ'. 'ಮುಂಚೆ, ರಮಣೀಯತೆಗೆ, ತಾಪನಿವಾರಣೆಗೆ, ನಾನೊಬ್ಬನೇ ಮೀಸಲಾಗಿದ್ದೆ; ಈಗ ಈ ಗುಣಗಳಲ್ಲಿ ನನ್ನನ್ನು ಹಿಂದೆ ಹಾಕುವ ಹತ್ತು ಸೆಳ್ಳುಗುರುಗಳು

ಕಾರಿಕೆ

ಕಾವ್ಯಸ್ಯಾತ್ಮಾ ಧ್ವನಿರಿತಿ ಬುಧೈರ್ಯಃ ಸಮಾಮ್ನಾತಪೂರ್ವ-
ಸ್ತಸ್ಯಾಭಾವಂ ಜಗದುರಪರೇ ಭಾಕ್ತಮಾಹುಸ್ತಮನ್ಯೇ ।
ಕೇಚಿದ್ವಾಚಾಂ ಸ್ಥಿತಮವಿಷಯೇ ತತ್ತ್ವಮೂಚುಸ್ತದೀಯಂ
ತೇನ ಬ್ರೂಮಃ ಸಹೃದಯಮನಃಪ್ರೀತಯೇ ತತ್ಸ್ವರೂಪಮ್ ॥೧॥

‘ಧ್ವನಿ’ಯೆಂದು ಕಾವ್ಯದ ಆತ್ಮವನ್ನು ವಿದ್ವಾಂಸರು ಹಿಂದೆಯೇ ಹೇಳಿದ್ದರಷ್ಟೆ; ಕೆಲವರು ಅದನ್ನು ಇಲ್ಲವೆಂದರು; ಮತ್ತೆ ಕೆಲವರು ಅದನ್ನು ‘ಭಾಕ್ತ’(=ಲಾಕ್ಷಣಿಕ)ವೆಂದರು; ಇನ್ನೂ ಕೆಲವರು ಅದರ ತತ್ತ್ವವು ಮಾತುಗಳಿಗೆ ಮೀರಿದ್ದೆಂದರು; ಆದ್ದರಿಂದ ಸಹೃದಯರ ಮನಸ್ಸಿಗೆ ಸಂತೋಷವಾಗಲೆಂದು ಅದರ ಸ್ವರೂಪವನ್ನು ವಿವರಿಸುತ್ತೇವೆ.[3]

ವೃತ್ತಿ

‘ವಿದ್ವಾಂಸರು’ ಎಂದರೆ ಇಲ್ಲಿ ‘ಕಾವ್ಯತತ್ತ್ವವನ್ನು[4] ತಿಳಿದವರು’ ಎಂದರ್ಥ. ಅವಿಚ್ಛಿನ್ನವಾದ ಸಂಪ್ರದಾಯಪರಂಪರೆಯ ಮೂಲಕ, ಇವರು ‘ಧ್ವನಿ’ಯೆಂಬ ಕಾವ್ಯಾತ್ಮವನ್ನು ‘ಧ್ವನಿ’ಯೆಂದು ಹೆಸರಿಸಿ ಈಗಾಗಲೇ ಸಮಗ್ರವಾಗಿ ಪ್ರತಿಪಾದಿಸಿರುವರು.[5] ಸಹೃದಯರಾದವರ ಮನಸ್ಸಿನಲ್ಲಿ ಇಂದಿಗೂ ಅದು ಪ್ರಕಾಶಿಸುತ್ತಲೇ ಇದೆ.

---

ಬಂದವೇ?’ ಎಂಬ ಚಂದ್ರನ ಆತಂಕದಲ್ಲಿ ‘ಉತ್ಪ್ರೇಕ್ಷೆ’ ಹಾಗು ‘ಅಪಹ್ನುತಿ’ ಅಲಂಕಾರಗಳ ಧ್ವನಿಯೂ ಉಂಟು. ಇಡಿಯ ಶ್ಲೋಕವೇ ಭಗವದ್ವಿಷಯಕವಾದ ಕವಿಯ ಭಕ್ತಿಯನ್ನು ಅಭಿವ್ಯಕ್ತಗೊಳಿಸುವುದರಿಂದ ‘ರಸಾದಿ ಧ್ವನಿ’ಯಿದೆ. ಹೀಗೆ ಮಂಗಳ ಪದ್ಯದಲ್ಲಿ ಮೂರು ಬಗೆಯ ‘ಧ್ವನಿ’ ಪ್ರಕಾರಗಳಿರುವುದನ್ನು “ನಮ್ಮ ಗುರುಗಳು ವಿವರಿಸಿದ್ದಾರೆ” ಎಂದು ಅಭಿನವಗುಪ್ತರ ಹೇಳಿಕೆ.

3 ಈ ಕಾರಿಕೆಯು ಗ್ರಂಥದ ಪ್ರತಿಪಾದ್ಯ ವಿಷಯ, ಮತ್ತು ಪ್ರಯೋಜನಗಳನ್ನು ಪ್ರಕಟಿಸುತ್ತದೆ—**ಲೋಚನ.**

4 ‘ಕಾವ್ಯ ತತ್ತ್ವವನ್ನು’ ಎಂಬುದು ‘ಕಾವ್ಯದ ಆತ್ಮವನ್ನು’ ಎಂಬುದರ ವಿವರಣೆ—ಲೋ.

5 ‘ಧ್ವನಿ’ಯೆಂಬ ಹೆಸರೇ ಮುಖ್ಯವಲ್ಲ; ಅದು ಬೋಧಿಸುವ ‘ಅರ್ಥ’ ಯಾವದುಂಟೋ ಅದೇ ಕಾವ್ಯದ ‘ಆತ್ಮ’ವೆಂದು ಬುಧರು ಭಾವಿಸುತ್ತಾರೆಂಬ ವ್ಯಾಖ್ಯಾನ ‘ಯುಕ್ತತರ’; ಇಲ್ಲದಿದ್ದರೆ ‘ವೃತ್ತಿ’ಯ ಮಾತುಗಳಿಗೆ ಸಾಮಂಜಸ್ಯ ಬರುವುದಿಲ್ಲ—ಲೋ.

ಕಾರಿಕೆಯಲ್ಲಿ ಶಬ್ದಗಳ ಅನ್ವಯ ಸ್ವಲ್ಪ ತೊಡಕಾಗಿದೆ. ಇದನ್ನು ‘ವ್ಯಕ್ತಿವಿವೇಕ’ದಲ್ಲಿ ಮಹಿಮಭಟ್ಟನು ಎತ್ತಿ ಆಡಿದ್ದಾನೆ; ದೋಷ ತಪ್ಪುವಂತೆ ತಿದ್ದಿ ಬರೆದಿದ್ದಾನೆ. (T S S. ಪುಟ ೧೦೯ ಮತ್ತು ೧೧೩)

I. ಹೀಗಿದ್ದರೂ ಕೂಡ ಅದನ್ನು ಕೆಲವರು ಇಲ್ಲವೆಂದಿರುವರು. ಹೀಗೆ ಇಲ್ಲವೆನ್ನುವವರ ವಾದದಲ್ಲಿ ಊಹಿಸಬಹುದಾದ[6] ಪ್ರಕಾರಗಳು ಇವು[7]—

---

'ಒಬ್ಬ ವಿದ್ವಾಂಸ ತಪ್ಪಬಹುದು, ಬಹುಜನ ವಿದ್ವಾಂಸರು ತಪ್ಪಲಾರರು' ಎಂಬುದನ್ನು ಬಹುವಚನ ('ಬುಧೈಃ') ಸೂಚಿಸುತ್ತದೆ—ಲೋ.

ಪುಸ್ತಕಗಳಲ್ಲಿ ಬರೆದಿಡದಿದ್ದರೂ, ವಿದ್ವಾಂಸರ ಪರಂಪರಾಗತ ಸಂಪ್ರದಾಯ ಅವಿಚ್ಛಿನ್ನವಾಗಿದೆಯೆಂಬ ಅಭಿಪ್ರಾಯ ವಾಕ್ಯದ ಆದಿಯಲ್ಲಿ ವ್ಯಕ್ತವಾಗಿದೆ—ಲೋ

'ಈಗಾಗಲೇ' ಎಂಬುದರಿಂದ ಇದು ಈ ಗ್ರಂಥಕಾರನ ಹೊಸ ಸಿದ್ಧಾಂತವಲ್ಲವೆಂದು ಸೂಚಿತವಾಗುತ್ತದೆ—ಲೋ.

6 'ಧ್ವನಿಯೇ ಇಲ್ಲ' ಎನ್ನುವ ವಾದ ಗ್ರಂಥಕಾರನ ಕಿವಿಗೆ ಬಿದ್ದೇ ಇದ್ದಿರಬೇಕೆಂದೇನೂ ಇಲ್ಲ, ಅವನು ಊಹಿಸಿ ಅದರ ವಿವಿಧ ಪ್ರಕಾರಗಳನ್ನು ವಿವರಿಸುತ್ತಿದ್ದಾನೆ—ಲೋ

7 i) ಶಬ್ದದಿಂದ ಅರ್ಥಪ್ರತೀತಿಗೆ 'ಸಂಕೇತ' (= convention)ವೇ ಕಾರಣ, ಆದ್ದರಿಂದ ವಾಚ್ಯಕ್ಕಿಂತ ಬೇರೆಯಾದ ವ್ಯಂಗ್ಯಾರ್ಥವೆಂಬುದು—ಅಸಂಕೇತಿತವಾದ ಪ್ರಯುಕ್ತ—ಅಶಕ್ಯ.

ii) ಒಂದು ವೇಳೆ ಇರುವುದಾದರೆ 'ಅಭಿಧಾವೃತ್ತಿ' (= denotation)ಯಿಂದಲೇ ಅದು ಸೂಚಿತವಾಗಬೇಕಾದ್ದರಿಂದ 'ಭಾಕ್ತ' (= ಗೌಣ)ವೆನಿಸುವುದು.

iii) ಅಭಿಧಾವೃತ್ತಿಯಿಂದ ಸೂಚ್ಯವೂ ಅಲ್ಲದ ಅರ್ಥವನ್ನು ವಿವರಿಸಲು ಬಾರದು—ಅವಿವಾಹಿತ ಕನ್ಯೆ ಪತಿಸುಖವನ್ನು ಹೇಗೆ ವಿವರಿಸಲಾರಳೋ ಹಾಗೆ ಈ ಮೂರೂ ಮುಖ್ಯ ಆಕ್ಷೇಪಣೆಗಳು ಇವುಗಳಲ್ಲಿ ಮೊದಲನೆಯದು ಮತ್ತೆ ಮೂರು ವಿಧವಾಗಬಹುದು— (೧) ಶಬ್ದಾರ್ಥಗಳಿಗೆ ಶೋಭೆಯುಂಟಾಗುವುದು ಶಬ್ದಾರ್ಥಾಲಂಕಾರಗಳಿಂದಲೇ 'ಕಾವ್ಯ'ವನ್ನು 'ಲೋಕ' ಮತ್ತು 'ಶಾಸ್ತ್ರ'ಗಳಿಂದ ಪ್ರತ್ಯೇಕಿಸುವ ಅಸಾಧಾರಣ ಅಂಶವೆಂದರೆ ಈ ಶೋಭೆಯೇ ಸರಿ ಎಂದ ಮೇಲೆ ನಾವು ಪರಿಗಣಿಸದೆ ಬಿಟ್ಟಿರುವುದೇನೂ ಇಲ್ಲ, (೨) ಒಂದು ವೇಳೆ ನಾವು ಕೈಬಿಟ್ಟಿರುವುದೇನಾದರೂ ಇದ್ದರೆ ಅದು ಶೋಭಾಕಾರಿಯೇ ಅಲ್ಲ, (೩) ಶೋಭಾಕಾರಿಯಾದುದೇ ನಿದ್ದರೂ 'ಗುಣ'ದಲ್ಲಿ ಇಲ್ಲವೆ 'ಅಲಂಕಾರ'ದಲ್ಲಿ ಅಂತರ್ಗತವಾಗುತ್ತದೆ. ಸುಮ್ಮನೆ ಹೊಸ ಹೆಸರನ್ನು ಹೇಳುವ ಪಾಂಡಿತ್ಯ ನಿಮ್ಮದಾಗಬಹುದು! ಯಾವುದೋ ಒಂದು ಸಣ್ಣ ಅಂಶಕ್ಕೆ ದೊಡ್ಡದಾಗಿ ಹೊಸ ಹೆಸರಿಡುವುದರಿಂದ ಏನಾಯಿತು? ಅಲಂಕಾರಗಳ ಸಂಖ್ಯೆ ಅನಂತ, ಇದನ್ನೂ ಒಂದೆಂದು ಸೇರಿಸಿಕೊಳ್ಳುತ್ತೇವೆ. ಹೇಗೂ 'ಗುಣ,' 'ಅಲಂಕಾರ'ಗಳಿಗಿಂತ ಅದು ಬೇರೆಯೆನಿಸದು. ಭರತಾದಿ ಪ್ರಾಚೀನ ಲಾಕ್ಷಣಿಕರು ಯಮಕ, ಉಪಮೆ ಮುಂತಾದ ಕೆಲವೇ ಅಲಂಕಾರಗಳನ್ನು ಹೇಳಿದ್ದರು, ನಿಜ; ಮುಂದಿನವರು ಅವುಗಳನ್ನು ಎಷ್ಟೋ ವಿಸ್ತರಿಸಲಿಲ್ಲವೆ? ಅದರಿಂದ ಹೇಳಿಕೊಳ್ಳುವಂತಹ ಹೊಸ ಸಾಧನೆಯೇನಾದಂತಾಯಿತು?

ಹೀಗೆ ಈ ಮೂರು ಮತ್ತು ii, iii, ಎಲ್ಲವೂ ಕೂಡಿ 'ಐದು' ವಿಕಲ್ಪಗಳಾಗುತ್ತವೆ—ಲೋ.

೧. ಕೆಲವರು ಹೀಗೆ ಹೇಳಬಹುದು — ಕಾವ್ಯವೆಂದರೆ ಶಬ್ದ, ಅರ್ಥ— ಇವೇ ಶರೀರವಾಗುಳ್ಳದೆಂದು ಅರ್ಥವಷ್ಟೆ![8] 'ಶಬ್ದ'ದಲ್ಲಿದ್ದುಕೊಂಡು ಕಾವ್ಯಕ್ಕೆ ಸೊಗಸನ್ನು ತರುವ 'ಅನುಪ್ರಾಸ'ವೇ ಮೊದಲಾದ ಅಲಂಕಾರಗಳೂ, 'ಅರ್ಥ'ದಲ್ಲಿದ್ದುಕೊಂಡು ಕಾವ್ಯದ ಸೌಂದರ್ಯಕ್ಕೆ ಕಾರಣಗಳಾಗುವ 'ಉಪಮೆ'ಯೇ ಮೊದಲಾದ ಅಲಂಕಾರಗಳೂ ಪ್ರಸಿದ್ಧವಾಗಿಯೇ ಇವೆ. ಇವಲ್ಲದೆ 'ಸಂಘಟನೆ'ಯ ಧರ್ಮಗಳಾದ 'ಮಾಧುರ್ಯ'ವೇ ಮೊದಲಾದ ಗುಣಗಳೂ ನಮಗೆ ಗೊತ್ತುಂಟು.[9] ವಸ್ತುತಃ 'ವೃತ್ತಿ'ಗಳು ಇವುಗಳಿಗಿಂತ ಬೇರೆಯಲ್ಲ. ಆದರೂ 'ಉಪನಾಗರಿಕಾ' ಮೊದಲಾದ ಹೆಸರುಗಳಿಂದ ಕೆಲವರು ನಿರೂಪಿಸಿರುವ ವೃತ್ತಿಗಳು ನಮ್ಮ ಕಿವಿಗೆ ಬಿದ್ದಿವೆ.[10] ಇವೆಲ್ಲಕ್ಕಿಂತಲೂ ಬೇರೆಯಾದ ಈ 'ಧ್ವನಿ'ಯೆಂಬುದು ಯಾವುದು? ಎಂದು.[11]

---

8 ಇಲ್ಲಿ ಭಿನ್ನಾಭಿಪ್ರಾಯಕ್ಕೆ ಎಡೆಯಿಲ್ಲವೆಂದು ಭಾವ—ಲೋ.

9 ಶಬ್ದಾರ್ಥಗಳಂತೂ 'ಧ್ವನಿ'ಯಲ್ಲ. ಅವುಗಳ ಸೌಂದರ್ಯಕ್ಕೆ ಕಾರಣ ಯಾವುದೋ ಅದು ಧ್ವನಿಯೆನ್ನಬಹುದು. ಆದರೆ ಸೌಂದರ್ಯ ಎರಡು ತೆರ—i) ಸ್ವರೂಪಸಿದ್ಧ, ii) ಸಂಘಟನಾಕೃತ. 'ಶಬ್ದ'ಗಳಲ್ಲಿ ಈ ಇಬ್ಬಗೆಯ ಸೌಂದರ್ಯವನ್ನು ಕ್ರಮವಾಗಿ 'ಶಬ್ದಾಲಂಕಾರ', 'ಶಬ್ದಗುಣ'ಗಳೇ ವಿವರಿಸುತ್ತವೆ. 'ಅರ್ಥ'ಗಳಲ್ಲಿಯ ಸೌಂದರ್ಯವನ್ನು ಅನುಕ್ರಮವಾಗಿ 'ಉಪಮಾದಿ ಅಲಂಕಾರಗಳು' ಮತ್ತು 'ಅರ್ಥಗುಣ'ಗಳು ವಿವರಿಸುತ್ತವೆ. ಇವೆರಡನ್ನೂ ಮೀರಿದ 'ಧ್ವನಿ'ಗೆಲ್ಲಿ ಸ್ಥಾನ?—ಲೋ.

10 'ವೃತ್ತಿ' ಹಾಗೂ 'ರೀತಿ'ಗಳು ಗುಣಾಲಂಕಾರ ಭಿನ್ನವಾಗಿದ್ದೂ ಕಾವ್ಯ ಸೌಂದರ್ಯಕ್ಕೆ ಕಾರಣಗಳಾಗುವಂತೆ 'ಧ್ವನಿ'ಯಾದರೂ ಆಗಬಹುದಲ್ಲಾ, ಎಂಬ ಆಶಂಕೆಯನ್ನು ಈ ಮಾತು ನಿವಾರಿಸುತ್ತದೆ. 'ವೃತ್ತಿ'ಗಳು—'ಪರುಷಾ', 'ಉಪನಾಗರಿಕಾ' ಮತ್ತು 'ಕೋಮಲಾ'—'ಅನುಪ್ರಾಸ'ವೆಂಬ ಶಬ್ದಾಲಂಕಾರದ ಮೂರು ಪ್ರಕಾರಗಳೇ ಹೊರತು ಬೇರೆಯಲ್ಲ [ಇವುಗಳ ನಿರ್ದೇಶ ಉದ್ಭಟನ ಕಾವ್ಯಾಲಂಕಾರ ಸಂಗ್ರಹದಲ್ಲಿ ಬಂದಿದೆ] 'ರೀತಿ'ಗಳು—ವೈದರ್ಭೀ, ಗೌಡೀ, ಪಾಂಚಾಲೀ—ಮಾಧುರ್ಯಾದಿ 'ಗುಣ'ಗಳ ಸಮ್ಮಿಶ್ರಣವೇ ಹೊರತು ಬೇರೆಯಲ್ಲ. [ಇವುಗಳ ನಿರ್ದೇಶ ವಾಮನನ 'ಕಾವ್ಯಾಲಂಕಾರ ಸೂತ್ರವೃತ್ತಿ'ಯಲ್ಲಿ ಸ್ಪಷ್ಟ]—ಲೋ.

11 ವಸ್ತುತಃ, ವಿಭಾಗಿಸದೆ ಅಖಂಡ ಬುದ್ಧಿಯಿಂದ ಆಸ್ವಾದಿಸಬೇಕಾದ ವಸ್ತು ಕಾವ್ಯ. ವಿಮರ್ಶೆಗಾಗಿ ಎಷ್ಟೆಷ್ಟು ವಿಭಾಗಿಸಿದರೂ, ಅಲ್ಲಿ ಗುಣಾಲಂಕಾರಗಳಿಂದ ಬೇರೆಯಾದ ಅಂಶ ದುರ್ಲಭ—ಲೋ.

೨. ಇತರರು ಹೀಗೆನ್ನಬಹುದು[12] — 'ಧ್ವನಿ'ಯು ಇಲ್ಲವೇ ಇಲ್ಲ.[13] ಸುಪ್ರಸಿದ್ಧವಾದ ಸಿದ್ಧಾಂತಗಳಿಗೆಲ್ಲ[14] ವಿರುದ್ಧವಾದ ಒಂದು ಕಾವ್ಯಪ್ರಕಾರಕ್ಕೆ ಕಾವ್ಯತ್ವವೇ ಇಲ್ಲವಾಗುತ್ತದೆ. ಏಕೆಂದರೆ, ಸಹೃದಯರ ಮನಸ್ಸಿಗೆ ಆನಂದವನ್ನು ತರಬಲ್ಲ ಶಬ್ದಾರ್ಥಗಳನ್ನುಳ್ಳದ್ದೇ ಕಾವ್ಯವೆಂಬುದು ಕಾವ್ಯಕ್ಕೆ ಸರಿಯಾದ ಲಕ್ಷಣ. ಪ್ರಸಿದ್ಧವಾದ ಕಾವ್ಯಮಾರ್ಗಗಳಿಗೆಲ್ಲ ವಿರುದ್ಧವಾದ ಮಾರ್ಗವು[15] ಈ ಲಕ್ಷಣಕ್ಕೆ ಒಳಪಡುವುದು ಸಾಧ್ಯವಿಲ್ಲ. ಅಥವಾ ಯಾರಾದರೂ ತಮ್ಮ ತಮ್ಮೊಳಗೆ ಯಾವುದೋ ಸಂಕೇತ ಮಾಡಿಕೊಂಡು, ತಾವೇ ಸಹೃದಯರೆಂದುಕೊಳ್ಳುತ್ತಾ, ತಮ್ಮಲ್ಲಿ ಪ್ರಸಿದ್ಧವಾಗಿರುವುದೆಂಬ ಬಲದ ಮೇಲೆ 'ಧ್ವನಿ'ಗೆ ಕಾವ್ಯವೆಂಬ ನಾಮಕರಣ ಮಾಡಿದರೂ ಕೂಡ, ಅದು ಎಲ್ಲ ವಿದ್ವಾಂಸರ ಮೆಚ್ಚುಗೆಯನ್ನು ಎಂದಿಗೂ ಪಡೆಯಲಾರದು.[16]

೩. ಮತ್ತೆ ಕೆಲವರು ಧ್ವನಿಯ ಅಭಾವವನ್ನು ಬೇರೆ ರೀತಿಯಿಂದಲೂ ಹೇಳಬಹುದು[17]:—'ಧ್ವನಿ'ಯೆಂಬ ಅಪೂರ್ವವಾದ ವಸ್ತುವೇ ಅಸಂಭವ. ಏಕೆಂದರೆ ಕಾವ್ಯ

---

12 "ಶಬ್ದಾರ್ಥಸ್ವಭಾವವಲ್ಲದಿದ್ದರೆ ಹೋಗಲಿ, ಸೌಂದರ್ಯಕಾರಣವೆನ್ನದಿದ್ದರೂ ಅಡ್ಡಿಯಿಲ್ಲ, 'ಗುಣಾಲಂಕಾರ'ಗಳಿಗಿಂತ ಬೇರೆಯಾಗಿ 'ಧ್ವನಿ'ಯೊಂದುಂಟೆಂದು ಸಾಧಿಸುತ್ತೇವೆ" ಎಂಬ ಆಶಂಕೆಯನ್ನು ಇಲ್ಲಿ ಖಂಡಿಸಲಾಗುತ್ತಿದೆ—ಲೋ.

13 ಆದರೂ ನೀನು ಬಯಸುವ 'ಧ್ವನಿ'ಗೆ ಅವಕಾಶವಿಲ್ಲ. ಕಾವ್ಯಕ್ಕೆ ಸಂಬಂಧಿಸಿದಂತೆ ತಾನೆ ನಿನ್ನ 'ಧ್ವನಿ'ಯಿರಬೇಕು? ಗೀತ, ನೃತ್ಯ, ವಾದ್ಯಗಳು ಬೇರೆಯಾಗಿವೆ ನಿಜ; ಅವು 'ಕಾವ್ಯ'ವೂ ಅಲ್ಲ. ಅವುಗಳಂತೆ ಬೇರೆಯಾಗಿ 'ಧ್ವನಿ'ಯಿದ್ದರೇನಾಯಿತು? ಅದು 'ಕಾವ್ಯ'ಕಕ್ಷ್ಯೆಯಲ್ಲಿ ಸೇರದು —ಲೋ.

14 ಶಬ್ದಾರ್ಥಗಳು, ಅವುಗಳ 'ಅಲಂಕಾರ'ಗಳು, ಎಂದರ್ಥ—ಲೋ.

15 ನೃತ್ಯ, ಗೀತ, ಮುಂತಾದುದಕ್ಕೆ ಸಮಾನವಾದುದು—ಲೋ.

16 ಕತ್ತಿಯ ಲಕ್ಷಣವನ್ನು ಹೇಳುವುದಕ್ಕೆ ಹೊರಟವನು—"ಉದ್ದ ಅಗಲಗಳಿರುತ್ತವೆ; ಆವರಿಸುವುದು ಅದರ ಸ್ವರೂಪ; ಸಕಲ ಶರೀರವನ್ನೂ ಮುಚ್ಚುತ್ತದೆ; ಒಳ್ಳೆಯ ನವಿರಾದ ಎಲೆಗಳಿಂದ ಮೂಡಿರುತ್ತದೆ, ಸುತ್ತಿ ಬಿಡಿಸಲು ಬರುತ್ತದೆ, ಕಡಿಯಲಾರದು, ಅಂತಹ ತುಂಡೇ ಉತ್ತಮ ಕತ್ತಿ" ಎಂದು ಹೇಳಿದನೆಂದುಕೊಳ್ಳೋಣ. "ಅಯ್ಯಾ, ಬಟ್ಟೆ ಹೀಗಿರುತ್ತದೆ, ಕತ್ತಿಯಲ್ಲ"ವೆಂದು ಮತ್ತೊಬ್ಬನು ನುಡಿದಾನು. ಆಗ ಮೊದಲನೆಯವನು "ನಾನು ಒಪ್ಪುವ ಕತ್ತಿ ನಾನೆಂದಂತೆಯೇ ಸರಿ" ಎಂದರೆ ಹೇಗೋ ಹಾಗೆಯೇ ಈ 'ಧ್ವನಿ'ಯ ಕಥೆಯಾದರೂ. ಇದು ಹುಚ್ಚಾಟವೆನಿಸೀತೆ ಹೊರತು ಸಕಲ ವಿದ್ವಾಂಸರ ಒಪ್ಪಿಗೆಯನ್ನೆಂದೂ ಪಡೆಯದು—ಲೋ.

17 'ಅದು ಸೌಂದರ್ಯಕಾರಣವೂ ಆಗಲಿ ಗುಣಾಲಂಕಾರಗಳಲ್ಲಿ ಅಂತರ್ಗತವೂ ಆಗಲಿ, 'ಧ್ವನಿ'ಯೆಂಬ ಹೆಸರಿನಿಂದ ಕಾವ್ಯದ 'ಜೀವ' ಎಂಬುದಾಗಿ ಯಾರಿಂದಲೂ ಇದುವರೆಗೆ ಹೇಳಲ್ಪಟ್ಟಿಲ್ಲವಷ್ಟೆ', ಎಂಬ ಆಶಂಕೆಗೆ ಉತ್ತರ, ಅಭಾವವಾದದ ಈ ಮೂರನೆಯ ಪ್ರಕಾರ— ಲೋ.

ದಲ್ಲಿ ಸೌಂದರ್ಯಕಾರಣವೆಂದು ಅದನ್ನು ಒಪ್ಪಿದೊಡನೆಯೇ, ನಾವು ಮೊದಲೇ ಸೂಚಿಸಿದ ಕಾವ್ಯಸೌಂದರ್ಯಕಾರಕಗಳಲ್ಲಿ[18] ಅದು ಅಂತರ್ಭಾವ ಹೊಂದಿಬಿಡುತ್ತದೆ. ಅವುಗಳಲ್ಲೇ ಯಾವುದಾದರೊಂದಕ್ಕೆ ಹೊಸದಾಗಿ ಅಪೂರ್ವ ನಾಮಕರಣ ಮಾಡುವುದರಿಂದ ಏನೋ ಒಂದು ಹೇಳಿದಂತಾಗುತ್ತದೆ, ಅಷ್ಟೆ. ಅದೂ ಅಲ್ಲದೆ, ಮಾತಿನ ಬಗೆಗಳು ಅನಂತವಾಗಿರುವುದರಿಂದ, ಕದಾಚಿತ್ ಹಿಂದಿನ ಕಾವ್ಯಲಕ್ಷಣಕಾರರು ತೋರಿಸದೆ ಬಿಟ್ಟಿರುವ ಯಾವುದೋ ಒಂದು ಕಾವ್ಯದ ಪ್ರಕಾರ-ಲೇಶವು ಸಿಕ್ಕಿದರೂ ಸಿಕ್ಕಬಹುದಾದರೂ, ಅದನ್ನು 'ಧ್ವನಿ', 'ಧ್ವನಿ'ಯೆನ್ನುತ್ತಾ,[19] ತಾವೇ ಸಹೃದಯರೆಂಬ ಭ್ರಾಂತಿಯಿಂದ[20] ಕಣ್ಣು ಮುಚ್ಚಿಕೊಂಡು ಏಕೆ ಕುಣಿಯಬೇಕೋ ನಮಗೆ ಗೊತ್ತಿಲ್ಲ. ಕಾವ್ಯದಲ್ಲಿ ಹೊಸ ಸೊಗಸನ್ನು ಕಂಡವರು ಇವರೊಬ್ಬರೇ ಅಲ್ಲ. ಇನ್ನೂ ಮಹಾತ್ಮರನೇಕರು ಇಂತಹ ಸಾವಿರಗಟ್ಟಲೆ ಹೊಸ ಹೊಸ ಅಲಂಕಾರ-ಪ್ರಕಾರಗಳನ್ನು ಹಿಂದೆ ತೋರಿಸಿದ್ದಾರೆ; ಈಗಲೂ ತೋರಿಸುತ್ತಿದ್ದಾರೆ; ಆದರೆ ಅವರು ಯಾರೂ ಹೀಗೆ ಆಡಿದುದನ್ನು ಕೇಳಿಲ್ಲ. ಕೂಲಂಕಷವಾದ ವಿಮರ್ಶೆಯನ್ನು ಸಹಿಸುವಂತಹ ಯಾವುದೇ ತತ್ತ್ವವನ್ನೂ 'ಧ್ವನಿ'ಯಲ್ಲಿ ತೋರಿಸುವುದು ಅಶಕ್ಯ.[21] ಇದನ್ನು ಈಗಾಗಲೇ ಒಬ್ಬನು[22] ಶ್ಲೋಕರೂಪದಿಂದಲೇ ಹೇಳಿರುವನು :—

"ಯಸ್ಮಿನ್ನಸ್ತಿ ನ ವಸ್ತು ಕಿಂಚನ ಮನಃಪ್ರಹ್ಲಾದಿ ಸಾಲಂಕೃತಿ
ವ್ಯುತ್ಪನ್ನೈ ರಚಿತಂ ಚ ನೈವ ವಚನೈರ್ವಕ್ರೋಕ್ತಿಶೂನ್ಯಂ ಚ ಯತ್ ।
ತತ್ಕಾವ್ಯಂ ಧ್ವನಿನಾ ಸಮನ್ವಿತಮಿತಿ ಪ್ರೀತ್ಯಾ ಪ್ರಶಂಸನ್ ಜಡೋ
ನೋ ವಿದ್ಮೋಽಭಿದಧಾತಿ ಕಿಂ ಸುಮತಿನಾ ಪೃಷ್ಟಃ ಸ್ವರೂಪಂ ಧ್ವನೇಃ ॥[23]

---

18 ಎಂದರೆ ಗುಣಾಲಂಕಾರಗಳಲ್ಲಿ. ಹೋಲಿಸಿ—'ಕಾವ್ಯಶೋಭಾಯಾಃ ಕರ್ತಾರೋ ಧರ್ಮಾ ಗುಣಾಃ, ತದತಿಶಯಹೇತವಸ್ತ್ವಲಂಕಾರಾಃ'—ವಾಮನ. 'ವಕ್ರಾಭಿಧೇಯ ಶಬ್ದೋಕ್ತಿರಿಷ್ಟಾ ವಾಚಾಮಲಂಕೃತಿಃ'—ಭಾಮಹ.

19 ಈ ದ್ವಿರುಕ್ತಿ ಅನಾದರವನ್ನು ಸೂಚಿಸುತ್ತದೆ—ಲೋ.

20 ಧ್ವನಿಯ ಲಕ್ಷಣಕಾರರು, ಅವರ ಅನುಯಾಯಿಗಳಾದ ಕವಿಗಳು ಮತ್ತು ವಿಮರ್ಶಕರು, ಎಂದಭಿಪ್ರಾಯ—ಲೋ.

21 'ಧ್ವನಿ'ಯೆಂಬುದೊಂದು ಕೆಲವರ ಪ್ರವಾದ ಮಾತ್ರ, ಎಂದು ತಾತ್ಪರ್ಯ—ಲೋ.

22 ಗ್ರಂಥಕಾರನ ಸಮಕಾಲೀನನಾದ ಮನೋರಥನೆಂಬ ಕವಿ.

23 ಅರ್ಥಾಲಂಕಾರಗಳಿಲ್ಲದ ಕಾರಣ ಮನಸ್ಸಿಗೆ ಆಹ್ಲಾದವನ್ನು ತಾರವು. 'ವ್ಯುತ್ಪನ್ನವಚನ' ಅರ್ಥಾತ್ ಶಬ್ದಾಲಂಕಾರಗಳಿಗೆ ಎಡೆಯಿಲ್ಲ. ವಕ್ರೋಕ್ತಿ ಅಥವಾ ಉತ್ಕೃಷ್ಟ ಸಂಘಟನೆಯಿಲ್ಲದ ಮೇಲೆ ಶಬ್ದಾರ್ಥ ಗುಣಗಳಿಲ್ಲವೆಂದಂತಾಯಿತು; (ಸರ್ವಾಲಂಕಾರ ಬೀಜವಾದ ಅತಿ

ಮನಕಾಹ್ಲಾದನಕಾರಿಯಪ್ಪ ವಿಷಯಂ ತಾನೊಂದುಮಲ್ಲಿಲ್ಲ ಮೇಣ್
ವಿನುತಾಲಂಕೃತಿಗಳ್ ಸುಶಬ್ದತತಿಗಳ್ ವಕ್ರೋಕ್ತಿ ತಾವಿಲ್ಲಮೆಂ |
ದೆನೆ ಕಾವ್ಯಂ ಧ್ವನಿಯುಕ್ತಮೆಂದು ಮುದದಿಂ ಕೊಂಡಾಡುತಿರ್ಪಾ ಜಡಂ
'ಧ್ವನಿ' ಶಬ್ದಾರ್ಥವ ಪೇಟ್ವುದೆಂದು ವಿಬುಧಂ ಕೇಳ್ದಾಗಳೇವೇಟ್ವನೋ ||

II. ಬೇರೆ ಜನರು 'ಧ್ವನಿ'ಯೆಂಬ ಕಾವ್ಯಾತ್ಮವನ್ನು 'ಗುಣವೃತ್ತಿ'ಯೆಂದರು.[24] ಯದ್ಯಪಿ, ಕಾವ್ಯಲಕ್ಷಣಕಾರರು ಯಾರೂ 'ಧ್ವನಿ'ಯೆಂಬ ಹೆಸರನ್ನು ಕಂಠೋಕ್ತವಾಗಿ ಹೇಳಿ 'ಗುಣವೃತ್ತಿ' ಇಲ್ಲವೇ ಬೇರೆ ಪ್ರಕಾರಗಳಾವುವನ್ನೂ ನಿರೂಪಿಸಿಲ್ಲ; ಆದರೂ ಅವರು ಗುಣವೃತ್ತಿಯ ವ್ಯವಹಾರವನ್ನು ಕಾವ್ಯದಲ್ಲಿ ಪ್ರದರ್ಶಿಸಿರುವುದರಿಂದಲೇ[25] ಧ್ವನಿಮಾರ್ಗವನ್ನು ಕೊಂಚಮಟ್ಟಿಗೆ ಮುಟ್ಟಿದಂತಾಯಿತೆಂದು ಕಲ್ಪಿಸಿಕೊಂಡು[26] ಕಾರಿಕೆಯಲ್ಲಿ—"ಮತ್ತೆ ಕೆಲವರು ಅದನ್ನು 'ಭಾಕ್ತ'ವೆಂದರು" ಎಂದಿದೆ.

---

ಶಯೋಕ್ತಿಯಿಲ್ಲವೆಂದರ್ಥ ಇಲ್ಲಿ ಕೊಡುವುದಿಲ್ಲ; ಏಕೆಂದರೆ ಪುನರುಕ್ತದೋಷ ಬರುತ್ತದೆ). ಇನ್ನು 'ಧ್ವನಿಯೆಂದರೇನು?' ಎಂದು ವಿವೇಕಿಯೊಬ್ಬನು ಕೇಳಿದರೆ, ಏನು ತಾನೆ ಉತ್ತರ ಬರಬಹುದು?

ಈ ಎಲ್ಲ ವಿಕಲ್ಪಗಳೂ ಊಹಿಸಿ ಬರೆದುವು—ಲೋ.

24 'ಭಾಕ್ತವಾದ' ಮಾತ್ರ ಪುಸ್ತಕಗಳಲ್ಲಿಯೇ ಪ್ರಸಿದ್ಧವಾದುದು. ಆದಕ್ಕಾಗಿ ಕ್ರಿಯಾಪದ ರೂಪದಲ್ಲಿ 'ಸಂಭಾವನೆ'ಯಿಲ್ಲ. 'ಭಾಕ್ತ' ಎಂದರೆ ಗೌಣ ಅಥವಾ ಲಾಕ್ಷಣಿಕ ಎಂದರ್ಥ.

ಯದ್ಯಪಿ 'ಅವಿವಕ್ಷಿತವಾಚ್ಯಧ್ವನಿ'ಯಲ್ಲಿ (ಉದಾ—'ನಿಃಶ್ವಾಸಾಂಧ ಇವಾದರ್ಶಃ') ಸಾದೃಶ್ಯ ಮೂಲವಾದ 'ಉಪಚಾರ' ಅಥವಾ ಆರೋಪವಿದೆಯಾದರೂ 'ಧ್ವನಿ'ಯ ಕ್ಷೇತ್ರ ಅಷ್ಟಕ್ಕೇ ಸೀಮಿತ ವಲ್ಲ; ಇನ್ನೂ ವಿಸ್ತಾರವಾದುದು—(ಇದರ ವಿವರಣೆ ಈ ಉದ್ಯೋತದ ಕಡೆಗೆ ಕಾರಿಕೆಯಲ್ಲೇ ಬರುತ್ತದೆ)—ಲೋ.

'ಧ್ವನಿ'ಯೆಂದರೆ 'ಧ್ವನತಿ' = ವ್ಯಂಜಕ ಶಬ್ದ, 'ಧ್ವನ್ಯತೆ' = ವ್ಯಂಗ್ಯ ಅರ್ಥ, 'ಧ್ವನನಂ' = ವ್ಯಂಜನಾವ್ಯಾಪಾರ, ಮೂರೂ ಆಗಬಹುದು. ಮೂರೂ ಉಪಚರಿತ-ಶಬ್ದಾರ್ಥ-ವ್ಯಾಪಾರ ಗಳಿಗಿಂತ (='ಭಕ್ತಿ'ಗಿಂತ) ಭಿನ್ನವಲ್ಲವೆಂಬುದು 'ಭಾಕ್ತವಾದ'—ಲೋ.

25 ಉದ್ಭಟ, ವಾಮನಾದಿಗಳು. "ಶಬ್ದಗಳಿಗೆ 'ಅಭಿಧೆ'ಯೆಂಬ ಮುಖ್ಯ ವ್ಯಾಪಾರವೂ 'ಗುಣವೃತ್ತಿ'ಯೆಂಬ ಅಮುಖ್ಯ ವ್ಯಾಪಾರವೂ ಉಂಟು"-ಉದ್ಭಟನ ಭಾಮಹವಿಹರಣ; "ಸಾದೃಶ್ಯ ಮೂಲವಾದ ಲಕ್ಷಣೆಯೇ ವಕ್ರೋಕ್ತಿ" (ವಾಮನ)—ಲೋ.

26 'ಧ್ವನಿ'ಯ ಹತ್ತಿರ ಹತ್ತಿರ ಅವರು ಬಂದಂತಾದರೂ ತತ್ತ್ವವನ್ನು ಗ್ರಹಿಸಲಿಲ್ಲ —ಲೋ.

III. ಲಕ್ಷಣಪ್ರಯಾಸಕ್ಕೆ ಅಂಜಿ ಹಿಂತೆಗೆದ ಅಲ್ಪಮತಿಗಳು ಕೆಲವರು ಧ್ವನಿಯ ತತ್ತ್ವವು ಮಾತುಗಳಿಗೆ ನಿಲುಕುವಂತಹುದಲ್ಲವೆಂದೂ, ಕೇವಲ ಸಹೃದಯರ ಹೃದಯಕ್ಕೆ ಮಾತ್ರ ವೇದ್ಯವೆಂದೂ ನುಡಿದರು.[27]

ಹೀಗೆ ವಿಧವಿಧವಾದ ಭಿನ್ನಾಭಿಪ್ರಾಯಗಳಿರುವ ಕಾರಣ, ಸಹೃದಯರ ಮನಸ್ಸಿಗೆ ಆನಂದವಾಗಲೆಂದು ಧ್ವನಿಯ ಸ್ವರೂಪವನ್ನು ವಿವರಿಸುವುದೇ ನಮ್ಮ ಉದ್ದೇಶ.[28] ಆ ಧ್ವನಿಯ ಸ್ವರೂಪವು ಎಲ್ಲ ಸತ್ಕವಿಗಳ ಕಾವ್ಯದಲ್ಲೂ ಉಪನಿಷತ್ಪ್ರಾಯವಾದುದು (ಅಥವಾ ಅತ್ಯಂತ ಮಹತ್ವಪೂರ್ಣವಾದುದು);[29] ಅಷ್ಟೇ ಅಲ್ಲ,ಅತೀವ ರಮಣೀಯವೂ ಆದುದು;[30] ಪ್ರಾಚೀನ ಲಕ್ಷಣಕಾರರ ಸೂಕ್ಷ್ಮತಮ ಬುದ್ಧಿಗಳಿಗೂ ಅದು ಹೊಳೆಯದೆ ಹೋದುದರಿಂದ,[31] **ರಾಮಾಯಣ, ಮಹಾಭಾರತ,** ಇವೇ ಮೊದಲಾದ ಲಕ್ಷ್ಯಗಳಲ್ಲಿ ಎಲ್ಲೆಲ್ಲೂ ಅದರ ವಿಲಾಸವನ್ನು ಸ್ಫುಟವಾಗಿ ಕಾಣುವ[32] ಸಹೃದಯರ[33] ಮನಸ್ಸಿನಲ್ಲಿ ಆನಂದ[34] ಸ್ಥಿರವಾಗಿ ನೆಲೆಸಲಿ, ಎಂದು ಧ್ವನಿಸ್ವರೂಪವನ್ನು ಪ್ರತಿಪಾದಿಸುತ್ತೇವೆ.

---

27 ಈ ಮೂರು ಅಭಾವವಾದಿಗಳಲ್ಲಿ ಮೊದಲನೆಯವರು ವಿಪರ್ಯಸ್ತ ಬುದ್ಧಿಗಳು; ಮಧ್ಯಮರು ಸಂದೇಹಗ್ರಸ್ತರು, ಕಡೆಯವರು ಅರಿತರೂ ಲಕ್ಷಣ ಹೇಳಿ ತೋರಿಸುವ ಶಕ್ತಿಯಿಲ್ಲದವರು —ಹೀಗೆ ಉತ್ತರೋತ್ತರರು ಮೇಲಿನ ದರ್ಜೆಯವರೆನ್ನಬಹುದು—ಲೋ.

28 ಹೀಗೆ, 'ಧ್ವನಿಸ್ವರೂಪ' ಗ್ರಂಥದ ವಿಷಯ; ಗ್ರಂಥಕಾರ-ಶ್ರೋತೃಗಳಿಗೆ ಗುರು-ಶಿಷ್ಯ ಸಂಬಂಧ; ವಿಮತಿನಿವಾರಣೆಯ ಮೂಲಕ ಸ್ವರೂಪ ವಿವೇಚನೆ ಗ್ರಂಥದ ಧ್ಯೇಯ; ಪ್ರಯೋಜನ-ಸಹೃದಯರ ಆನಂದ. ಇದೇ 'ಅನುಬಂಧ ಚತುಷ್ಟಯ'—ಲೋ.

29 'ಯಾವುದೋ ಒಂದು ಸಣ್ಣ ಅಂಶ'ವೆಂಬ ಟೀಕೆಗಿದು ಉತ್ತರ.

30 'ಭಾಕ್ತವಾದ'ಕ್ಕಿದು ಮಾರುತ್ತರ

31 ಇದರಿಂದ ಧ್ವನಿ 'ಗುಣಾಲಂಕಾರ'ಗಳಲ್ಲೇ ಅಂತರ್ಗತವಲ್ಲವೆಂಬುದು ತಾತ್ಪರ್ಯ.

32 ಯಾರೋ ಮನಸ್ಸಿಗೆ ಬಂದಂತೆ ಕೆಲವರು ಕಟ್ಟಿಕೊಂಡ ಕೂಟದ 'ಪ್ರವಾದ'ವಲ್ಲವೆಂಬುದು ಇದರಿಂದ ಸ್ಪಷ್ಟ.

33 ನಿರಂತರವಾಗಿ ಕಾವ್ಯದ ಅನುಶೀಲನೆಯಿಂದ ಮಾನಸದರ್ಪಣವು ನಿರ್ಮಲವಾಗಿರಬೇಕು; ವರ್ಣನೀಯ ವಿಷಯದಲ್ಲಿ ತನ್ಮಯೀಭಾವ ಆಗುವಂತಹ ಯೋಗ್ಯತೆಯಿರಬೇಕು, ಹೃದಯ ಸಂವಾದ ಸಹಜವಾಗಿರಬೇಕು—ಹೀಗೆ ಯಾರಿರುವರೋ ಅವರೇ ಸಹೃದಯರು

34 ರಸಾಸ್ವಾದವೇ ಆನಂದ. ಇದರಿಂದ 'ರಸಧ್ವನಿ'ಯೇ ಎಲ್ಲಕ್ಕಿಂತ ಪ್ರಧಾನವೆಂದೂ, ಮುಖ್ಯವಾಗಿ ಕಾವ್ಯದ 'ಆತ್ಮ'ವೆಂದೂ ಸೂಚಿತವಾಗುತ್ತದೆ. ಆದುದರಿಂದ 'ಹೃದಯದರ್ಪಣ'ದಲ್ಲಿ ಭಟ್ಟನಾಯಕನು ಬರೆದ ಕೆಳಗಿನ ದೂಷಣೆ ನಿರ್ಮೂಲವಾಗುತ್ತದೆ:—"ಕಾವ್ಯದಲ್ಲಿ 'ಅಭಿಧಾ', 'ಭಾವನಾ', 'ಚರ್ವಣಾ' ಎಂಬ ಮೂರು ವ್ಯಾಪಾರಗಳುಂಟು. ಒಂದು ವೇಳೆ "ಧ್ವನಿ"ಯೆಂಬ "ವ್ಯಂಜನಾ" ವ್ಯಾಪಾರವೂ ಒಂದುಂಟೆಂದು ಒಪ್ಪಿದರೂ ಕೂಡ, ಅದು ಕಾವ್ಯದ ವ್ಯಾಪಾರ

ಹೀಗೆ ಧ್ವನಿಯ ಲಕ್ಷಣವನ್ನು ಹೇಳಬೇಕೆಂದೇ ಹೊರಟಿರುವುದರಿಂದ, ಮೊದಲು ಅದಕ್ಕೆ ಪೀಠಿಕಾರೂಪವಾಗಿ[35] ಕೆಳಗಿನ ಕಾರಿಕೆಯನ್ನು ಹೇಳಿದೆ:—

ಕಾರಿಕೆ

ಅರ್ಥಃ ಸಹೃದಯಶ್ಲಾಘ್ಯಃ ಕಾವ್ಯಾತ್ಮಾ ಯೋ ವ್ಯವಸ್ಥಿತಃ ।
ವಾಚ್ಯಪ್ರತೀಯಮಾನಾಖ್ಯೌ ತಸ್ಯ ಭೇದಾವುಭೌ ಸ್ಮೃತೌ ॥ ೨ ॥

ಸಹೃದಯರು ಶ್ಲಾಘಿಸುವ ಯಾವ ಅರ್ಥವನ್ನು ಕಾವ್ಯದ ಆತ್ಮವೆಂದು ನಿಶ್ಚಯಿಸಲಾಗಿದೆಯೋ, ಅದರ ಎರಡು ಭೇದಗಳೇ 'ವಾಚ್ಯ' (=ನೇರವಾದ ಮುಖ್ಯಾರ್ಥ) ಮತ್ತು 'ಪ್ರತೀಯಮಾನ' (=ವಿಮರ್ಶೆ ಮಾಡುವಾಗ ಸ್ಫುರಿಸುವ ಗಮ್ಯಾರ್ಥ) ಎಂಬುವು.[36]

---

ಗಳಲ್ಲೊಂದೆನಿಸೀತೇ ಹೊರತು, ಕಾವ್ಯದ ಐಕ್ಯೈಕ ಸ್ವರೂಪವೆನಿಸದು" 'ರಸಚರ್ವಣೆಯೇ ಕಾವ್ಯಜೀವಿತ'ವೆಂಬ ಸಿದ್ಧಾಂತ ಭಟ್ಟನಾಯಕನಿಗೂ ಗ್ರಾಹ್ಯವೇ ಆದ ಕಾರಣ, ಇಲ್ಲಿ ನಾಮಮಾತ್ರೇ ವಿವಾದವೆನ್ನಬಹುದು.

ಕಾವ್ಯಪ್ರಯೋಜನಗಳಲ್ಲಿ ಸ್ವರ್ಗೀಯವಾದ 'ಕೀರ್ತಿ', ಮುಂತಾದುವಕ್ಕಿಂತ, ಕವಿಗೆ ಐಹಿಕ 'ಆನಂದ'ವೇ ಹೆಚ್ಚಿನ ಪ್ರಯೋಜನ. ಸಹೃದಯನಿಗಾದರೂ 'ವೇದ', 'ಇತಿಹಾಸ' ಇವುಗಳಿಗಿಂತ ಬೇರೆಯಾದ "ಕಾಂತಾಸಮ್ಮಿತ" ಎನಿಸುವ ರೀತಿಯಲ್ಲಿ ನೀತಿ ಬೋಧೆಯೇ ಮುಖ್ಯ ಪ್ರಯೋಜನ. ಇಲ್ಲಿಯ ಎಲ್ಲಗೆ ಸರಿದೊರೆಯಾದ ಕಾವ್ಯದ ಈ ವೈಶಿಷ್ಟ್ಯವೆಂದರೆ ಆನಂದವೇ.

'ಆನಂದ'ವೆಂಬ ಶಬ್ದ ಗ್ರಂಥಕಾರನಾದ ಆನಂದವರ್ಧನನ ಸ್ಮಾರಕವೂ ಆಗಿದೆ. ಸಹೃದಯರ ಹೃದಯ ಪೀಠದಲ್ಲಿ ಆತನ ಪ್ರತಿಷ್ಠೆ ಶಾಶ್ವತವಾಗಲೆಂಬ ಹಾರೈಕೆ ಗಮ್ಯ—ಲೋ.

35 'ಧ್ವನಿ'= ವ್ಯಂಗ್ಯಾರ್ಥ; ಅದಕ್ಕೆ ಆಶ್ರಯ ಅಥವಾ 'ಪೀಠಿಕೆ'ಯೆಂದರೆ ನಿರ್ವಿವಾದವಾದ ವಾಚ್ಯಾರ್ಥ. ವಾಚ್ಯಾರ್ಥದಷ್ಟೇ ವ್ಯಂಗ್ಯಾರ್ಥವೂ ಅನಿರಾಕರಣೀಯ ಎಂದಾಶಯ—ಲೋ.

36 ಕಾವ್ಯದ ಶರೀರ ಶಬ್ದಾರ್ಥಗಳೆಂದು ನೀವೇ ಒಪ್ಪುವಿರಿ. ಶರೀರಕ್ಕೆ ಜೀವವೊಂದು ಇರಬೇಕಲ್ಲವೆ? ಶಬ್ದವಂತೂ ಶರೀರ ಭಾಗಕ್ಕೆ ಸೇರತಕ್ಕದ್ದು—ಸ್ಥೂಲ, ಕೃಶ, ಇತ್ಯಾದಿ ಶರೀರ ಸ್ವರೂಪದಂತೆ ಸರ್ವರಿಗೂ ಸ್ಪಷ್ಟವೇದ್ಯವಾದ್ದರಿಂದ. ಕೇವಲ ವಾಚ್ಯಾರ್ಥವಾದರೂ ಅಷ್ಟೆ. ಸರ್ವಜನಸಂವೇದ್ಯವಲ್ಲದ, ಎಂದರೆ ಸಹೃದಯರಿಗೆ ಮಾತ್ರ ಗೋಚರವಾದ, ಲೋಕವೇದಾದಿ ವಾಕ್ಯಗಳಲ್ಲಿಲ್ಲದ, ಯಾವ ಅರ್ಥಾಂಶವುಂಟೋ ಅದು ಮಾತ್ರ ಕಾವ್ಯದ 'ಆತ್ಮ'. ವಸ್ತುತಃ ಅಖಂಡವಾದ 'ಅರ್ಥ'ವನ್ನೇ ವಿವರಣೆಯ ಸೌಕರ್ಯಕ್ಕಾಗಿ ಎರಡೆಂದು ವಿಭಾಗಿಸಿದೆ. ಹೀಗೆ 'ವಿಶೇಷ' ವಿರುವುದು ಕಾವ್ಯದ ವ್ಯಂಗ್ಯಾಂಶದಲ್ಲೇ ಹೊರತು ವಾಚ್ಯಾಂಶದಲ್ಲಲ್ಲ. ವಾಚ್ಯದ ಸಂಪರ್ಕದಿಂದ ಭ್ರಾಂತರಾದವರು ಮಾತ್ರ ದೇಹಾತ್ಮವಾದಿಗಳಾದ ಚಾರ್ವಾಕರಂತೆ ಕಾವ್ಯದ ಆತ್ಮವೇ ಇಲ್ಲ; ಕಾವ್ಯ ಶರೀರವೇ ಎಲ್ಲ, ಎಂದುಕೊಳ್ಳುತ್ತಾರೆ. ವಾಚ್ಯ ವ್ಯಂಗ್ಯಗಳೆರಡೂ ಕಾವ್ಯದ ಆತ್ಮಗಳಲ್ಲ; ಸಹೃದಯಶ್ಲಾಘ್ಯವಾದ ಅರ್ಥದಲ್ಲಿ ಎರಡು 'ಅಂಶ'ಗಳುಂಟೆಂದು ಮಾತ್ರ ತಾತ್ಪರ್ಯ—ಲೋ.

ವೃತ್ತಿ

ಲಲಿತವೂ[37] ಉಚಿತವೂ[38] ಆದ ಅವಯವಗಳ ಜೋಡಣೆಯಿಂದ ಮನೋಹರವೆನಿಸುವ ಕಾವ್ಯದಲ್ಲಿ—ಶರೀರದಲ್ಲಿ ಆತ್ಮವು ಹೇಗೋ ಹಾಗೆ—ಸಾರರೂಪವಾಗಿದ್ದುಕೊಂಡು ಸಹೃದಯರೆಲ್ಲರ ಪ್ರಶಂಸೆಗೆ ಪಾತ್ರವಾಗತಕ್ಕ ಯಾವ ಅರ್ಥವುಂಟೋ, ಅದರ[39] ಎರಡು ಭೇದಗಳನ್ನೇ ಇಲ್ಲಿ 'ವಾಚ್ಯ' ಮತ್ತು 'ಪ್ರತೀಯಮಾನ' ಎಂಬ ಹೆಸರುಗಳಿಂದ ಕರೆಯಲಾಗಿದೆ.

ಕಾರಿಕೆ

**ತತ್ರ ವಾಚ್ಯಃ ಪ್ರಸಿದ್ಧೋ ಯಃ ಪ್ರಕಾರೈರುಪಮಾದಿಭಿಃ ।**
**ಬಹುಧಾ ವ್ಯಾಕೃತಃ ಸೋऽನ್ಯೈಃ ತತೋ ನೇಹ ಪ್ರತನ್ಯತೇ ॥ ೩ ॥**

ಅವುಗಳಲ್ಲಿ 'ವಾಚ್ಯ'ವೆನಿಸುವ ಅಂಶವು ಸುಪ್ರಸಿದ್ಧ;[40] ಈಗಾಗಲೇ ಅನೇಕರು 'ಉಪಮಾ' ಮೊದಲಾದ ನಾನಾ ಪ್ರಕಾರಗಳಿಂದ ಅದನ್ನು ವಿವಿಧವಾಗಿ ವಿವರಿಸಿದ್ದಾರೆ. ಆದ್ದರಿಂದ ಇಲ್ಲಿ ಅದನ್ನು ವಿಸ್ತರಿಸುವುದಿಲ್ಲ.

ವೃತ್ತಿ

ಇಲ್ಲಿ 'ಅನೇಕರು' ಎಂದರೆ ಉದ್ಭಟಭಟ್ಟನೇ ಮೊದಲಾದ ಕಾವ್ಯಲಕ್ಷಣಕಾರರೆಂದರ್ಥ. 'ಅದನ್ನು ವಿಸ್ತರಿಸುವುದಿಲ್ಲ' ಎಂದರೆ ಸಂದರ್ಭೋಚಿತವಾಗಿ ಬೇಕಾದಷ್ಟನ್ನು ಮಾತ್ರ ಅನುವಾದ ಮಾಡಿಕೊಳ್ಳುತ್ತೇವೆಂದರ್ಥ.

ಕಾರಿಕೆ

**ಪ್ರತೀಯಮಾನಂ ಪುನರನ್ಯದೇವ**
**ವಸ್ತ್ವಸ್ತಿ ವಾಣೀಷು ಮಹಾಕವೀನಾಮ್ ।**
**ಯತ್ತತ್ಪ್ರಸಿದ್ಧಾವಯವಾತಿರಿಕ್ತಂ**
**ವಿಭಾತಿ ಲಾವಣ್ಯಮಿವಾಙ್ಗನಾಸು ॥ ೪ ॥**

---

37 ಲಲಿತ = ಗುಣಾಲಂಕಾರಗಳಿಂದ ಸಂಪನ್ನ—ಲೋ.

38 ಉಚಿತ = ರಸೌಚಿತ್ಯಸುಂದರ. ಇದರಿಂದ ರಸಧ್ವನಿಯೇ ಕಾವ್ಯದ ಜೀವಾಳವೆಂದು ಸೂಚಿತವಾಗುತ್ತದೆ—ಲೋ.

39 ಧ್ವನಿಯು ಗುಣಾಲಂಕಾರಗಳಂತೆ ಕಾವ್ಯದ ಚಾರುತ್ವನಿಮಿತ್ತವೆನ್ನಬರುವುದಿಲ್ಲ. ವಾಚ್ಯಾರ್ಥ 'ಅಲಂಕಾರ'ವಾದರೆ, ವ್ಯಂಗ್ಯಾರ್ಥ 'ಅಲಂಕಾರ್ಯ'; ಹಾಗೆಯೇ ಮಾಧುರ್ಯಾದಿ 'ಗುಣ'ಗಳು ಬೇರೆ, 'ಗುಣಿ' ಬೇರೆ—ಲೋ.

40 ಪ್ರೇಯಸೀಮುಖ, ಉದ್ಯಾನ, ಚಂದ್ರೋದಯಾದಿ ಲೌಕಿಕ ವಸ್ತುಗಳು; ಇವೇ ಕಾವ್ಯದಲ್ಲಿ ವರ್ಣಿತವಾಗುವ 'ವಾಚ್ಯಾರ್ಥ'ಗಳು. ಇವುಗಳ ಅಲಂಕಾರಗಳೇ ಉಪಮಾದಿಗಳು—ಲೋ.

ಕೇವಲ ಪ್ರತೀಯಮಾನವೇ ಆದ ಮತ್ತೊಂದು ವಸ್ತುವು ಮಹಾಕವಿಗಳ[41] ವಾಣಿಗಳಲ್ಲಿರುತ್ತದೆ; ಅದು ಅಂಗನೆಯರ ಲಾವಣ್ಯದಂತೆ ಪ್ರಸಿದ್ಧವಾದ ಅವಯವಗಳ ಚೆಲುವಿಗಿಂತ ಬೇರೆಯಾಗಿಯೇ ಪ್ರಕಾಶಿಸುತ್ತದೆ.

ವೃತ್ತಿ

'ಮತ್ತೊಂದು' ಎಂದರೆ 'ವಾಚ್ಯ'ವಾದುದಕ್ಕಿಂತಲೂ ಬೇರೆಯಾದ 'ಪ್ರತೀಯಮಾನ'ವೆನಿಸುವ ವಸ್ತುವು ಮಹಾಕವಿಗಳ ವಾಣಿಗಳಲ್ಲಿ ಉಂಟು. ಅದು ಸಹೃದಯರ ಹೃದಯಗಳಿಗೆ ಸುಪ್ರಸಿದ್ಧವಾದುದು. 'ಪ್ರಸಿದ್ಧವಾದ' ಎಂದರೆ 'ಅಲಂಕಾರಗಳಿಂದ ಕೂಡಿದ' ಮತ್ತು 'ಪ್ರತ್ಯಕ್ಷ ಗೋಚರವಾದ' ಎಂಬ ಎರಡರ್ಥಗಳನ್ನೂ ಮಾಡಿಕೊಳ್ಳಬಹುದು. ಇಂತಹ ಅವಯವಗಳಿಗಿಂತಲೂ ವ್ಯತಿರಿಕ್ತವಾಗಿ ಎದ್ದು ಕಾಣುತ್ತದೆ ಎಂದರ್ಥ. 'ಅಂಗನೆಯರಲ್ಲಿರುವ ಲಾವಣ್ಯದಂತೆ' ಎಂಬುದು ಉಪಮಾನ, ಅಂಗನೆಯರಲ್ಲಿ ಲಾವಣ್ಯವೆಂದರೆ, ಬೇರೆ ಬೇರೆಯಾಗಿ ಕಾಣಬಹುದಾದ ಎಲ್ಲ ಅವಯವಗಳ ಸೌಷ್ಠವಕ್ಕಿಂತಲೂ ಬೇರೆಯಾಗಿ, ಸಹೃದಯರ ಲೋಚನಾಮೃತವೆನಿಸುವ ಹೊಸದೊಂದು ಸೊಬಗಿರುವಂತೆಯೇ,[42] 'ಪ್ರತೀಯಮಾನ'ವಾದ ವಿಷಯದಲ್ಲಿಯೂ. ಅದು ವಾಚ್ಯಸಾಮರ್ಥ್ಯದಿಂದ ವ್ಯಂಗ್ಯವಾದ 'ವಸ್ತು,' 'ಅಲಂಕಾರಗಳು' ಮತ್ತು 'ರಸಾದಿಗಳು' ಎಂಬಿವೇ ಮೊದಲಾದ ಅನೇಕ ಪ್ರಭೇದಗಳನ್ನೊಳಗೊಂಡಿರುವುದೆಂಬುದನ್ನು[43]

---

41 ವಿವರಿಸಲಿರುವ ವ್ಯಂಗ್ಯಾರ್ಥದಿಂದ ಸಜೀವವೆನಿಸುವ ಕಾವ್ಯವನ್ನು 'ನಿರ್ಮಿಸಬಲ್ಲ ಪ್ರತಿಭಾ ಕೌಶಲ್ಯವುಳ್ಳವರೇ ಮಹಾಕವಿಗಳೆಂದು ಭಾವ. ಪ್ರತೀತವಾಗುವುದರಿಂದಲೇ ಅಸ್ತಿತ್ವವುಂಟೆಂದು ಸಾಧಿತವಾಗುತ್ತದೆ—ಲೋ.

42 ಅವಯವಗಳಲ್ಲಿ ಕುರುಡೇ ಮೊದಲಾದ ದೋಷವೊಂದೂ ಇಲ್ಲದಿದ್ದರೂ, ಆಭರಣಗಳಿಂದ ಭೂಷಿತೆಯೇ ಆಗಿದ್ದರೂ, ಸ್ತ್ರೀಯಿವಳು 'ಲಾವಣ್ಯ ಹೀನೆ'ಯೆಂದು ರಸಿಕರು ಹೇಳುವುದುಂಟು ಹಾಗಿರದ ಮತ್ತೊಬ್ಬಳು ಅವರಿಗೆ 'ಲಾವಣ್ಯಾಮೃತ ಚಂದ್ರಿಕೆ'ಯೆನಿಸಬಹುದು.

43 ವ್ಯಂಗ್ಯವು ಎರಡು ಬಗೆ— i. ಲೌಕಿಕ, ii. ಕಾವ್ಯ-ವ್ಯಾಪಾರ-ಗೋಚರ. ಮೊದಲನೆಯದು ವಾಚ್ಯವೂ ಆಗಬಹುದಾದ ವಿಧಿ, ನಿಷೇಧ, ಇತ್ಯಾದಿ "ವಸ್ತು"-ಧ್ವನಿ. 'ಲೌಕಿಕ'ದ್ದೇ ಇನ್ನೊಂದು ಬಗೆಯೆಂದರೆ "ಅಲಂಕಾರ-ಧ್ವನಿ". ಪೂರ್ವದಲ್ಲಿ ಯಾವುದು ವಾಕ್ಯಾರ್ಥದ 'ಅಲಂಕಾರ'ವಾಗಿತ್ತೋ, ವಾಚ್ಯವಾಗಿತ್ತೋ, ಅದೇ ಈಗ ಪ್ರಧಾನ ವ್ಯಂಗ್ಯವಾದಾಗ ಅಲಂಕಾರತ್ವ(= ಉಪಕರಣತ್ವ)ವನ್ನು ಕಳೆದುಕೊಂಡಿದ್ದರೂ, ಪೂರ್ವ ಸ್ಮರಣೆಯ ಮೂಲಕ 'ಅಲಂಕಾರಧ್ವನಿ'ಯೆಂದು ಕರೆಯಲ್ಪಡುತ್ತದೆ. ಆದರೆ ಕನಸಿನಲ್ಲಿಯೂ ಶಬ್ದವಾಚ್ಯವೆನಿಸದ, ಎಂದೆಂದೂ ಲೌಕಿಕ ವ್ಯವಹಾರದಲ್ಲಿ ಸ್ಫುರಿಸದ, ಕಾವ್ಯವ್ಯಾಪಾರಮಾತ್ರಗಮ್ಯವಾದ ವ್ಯಂಗ್ಯಾರ್ಥವೇ 'ರಸ'. ಇದಕ್ಕೆ ಸಾಮಗ್ರಿಯೆಂದರೆ ಶಬ್ದಸೂಚಿತವೂ ಹೃದಯಸಂವಾದಸುಂದರವೂ ಆದ ವಿಭಾವಾದಿಗಳು. ಈ ವಿಭಾವಾದಿಗಳು ವಾಸನಾರೂಪವಾಗಿ ಸಹೃದಯರಲ್ಲಿರುವ ರತ್ಯಾದಿಗಳನ್ನು

ಮುಂದೆ ತೋರಿಸಲಾಗುತ್ತದೆ. ಆ ಎಲ್ಲ ಪ್ರಕಾರಗಳಲ್ಲಿಯೂ ಅದು ವಾಚ್ಯಕ್ಕಿಂತ ಬೇರೆಯಾಗಿಯೇ ಇರುತ್ತದೆ. ಹೇಗೆಂದರೆ—ಮೊದಲನೆಯ ಪ್ರಭೇದವೇ ವಾಚ್ಯಕ್ಕಿಂತ ಬಹಳ ಹೆಚ್ಚು ಅಂತರವುಳ್ಳದು. 'ವಾಚ್ಯ'ವು ವಿಧಿಯನ್ನು ಹೇಳುತ್ತಿದ್ದರೆ 'ಪ್ರತೀಯ ಮಾನ'ವಾದ ವಸ್ತುವು ಪ್ರತಿಷೇಧವನ್ನು ಸೂಚಿಸುತ್ತದೆ.[44] ಉದಾಹರಣೆ:—

೧. "ಭಮ ಧಮ್ಮಿಅ ವೀಸತ್ಥೋ ಸೋ ಸುಣಓ ಅಜ್ಜ ಮಾರಿಓ ದೇಣ।
ಗೋಲಾಣಈಕಚ್ಛಕುಡಙ್ಗವಾಸಿಣಾ ದರಿಅಸೀಹೇಣ॥"

ನಡೆದಾಡು ಧಾರ್ಮಿಕನೆ ನಿಶ್ಶಂಕೆಯಿಂದಿನ್ನು,
ಹತಮಾದುದಾ ನೀಚ ಶುನಕ ತಾನಿಂದು।
ಗೋದಾವರೀ ನದಿಯ ತಡಿಯೆಡೆಯ ಹೊದರಿನಲಿ
ಕೊಬ್ಬಿ ಬೊಬ್ಬಿರಿಯುತಿಹ ಮಾಸಿಂಗದಿಂದ[45] ||

ಕೆಲವೆಡೆಗಳಲ್ಲಿ 'ವಾಚ್ಯವು' ನಿಷೇಧರೂಪವಾಗಿದ್ದರೂ 'ಪ್ರತೀಯಮಾನ' ವಸ್ತುವು ವಿಧಿರೂಪವಾಗಿರುತ್ತದೆ. ಉದಾಹರಣೆ :—

೨. "ಅತ್ತಾ ಏತ್ಥ ಣಿಮಜ್ಜಇ ಏತ್ಥ ಅಹಂ ದಿಅಸಹಂ ಪಲೋಏಹಿ।
ಮಾ ಪಹಿಅ ರತ್ತಿಅಂಧಅ ಸೆಜ್ಜಾಏ ಮಹಣ ಮಜ್ಜಹಿಸಿ॥"

ಅತ್ತೆಯಿಲ್ಲಿ ನಿದ್ದೆಗೈವಳಿಲ್ಲಿ ನಾನು ಎಂಬುದನ್ನು
ಹಗಲಿನಲ್ಲೆ ಕಣ್ಣ ತುಂಬ ಪಾಂಥ! ನೋಡಿರು।

---

ಉದ್ಬೋಧಗೊಳಿಸಿ ಆತ್ಮಾನಂದದ ಆಸ್ವಾದವನ್ನು ತಂದುಕೊಡುವವು. 'ರಸ'ವು ಹೀಗೆ ಕಾವ್ಯ ಮಾತ್ರಕೃತವಾದ್ದರಿಂದ "ರಸಧ್ವನಿ"; ಅದು 'ಧ್ವನಿ'ಯೇ ಹೊರತು ವಾಚ್ಯವಲ್ಲ, ಆದುದರಿಂದಲೇ ಮುಖ್ಯವಾಗಿ ಕಾವ್ಯದ ಆತ್ಮ—ಲೋ.

44 ವಿಧಿ-ನಿಷೇಧಗಳು ('ಮಾಡು'—'ಬೇಡ' ಇತ್ಯಾದಿಗಳು) ಪರಸ್ಪರ ವಿರುದ್ಧವೆಂಬುದು ನಿರ್ವಿವಾದ—ಲೋ.

45 ತನ್ನ ಸಂಕೇತ ಸ್ಥಾನದಲ್ಲಿ ಬಂದು ತೊಂದರೆ ಕೊಡುತ್ತಿರುವ, ಹೂಗಳನ್ನು ಕೊಯ್ದು ಅಲ್ಲಿ ಅಂದಗೆಡಿಸುತ್ತಿರುವ, ಧಾರ್ಮಿಕನನ್ನು ತೊಲಗಿಸಲೆಂದು ಅಭಿಸಾರಿಕೆಯೊಬ್ಬಳು ಹೇಳುವ ಮಾತಿದು:—'ನಿನ್ನ ಸಂಚಾರಕ್ಕೆ ಅಡ್ಡಿಯಾಗಿದ್ದ ಆ ಕುನ್ನಿಯನ್ನು ಸಿಂಹ ಕೊಂದಿದೆ. ಆದ್ದರಿಂದ ಬೇಕಾದಂತೆ ಸುಳಿದಾಡಬಹುದು', ಎಂಬುದು ವಾಚ್ಯಾರ್ಥ. ಆದರೆ ಸಿಂಹದ ಹೊದರು ಹತ್ತಿರ ವಿರುವಾಗ ಆ ಲತಾಗೃಹದ ದಿಕ್ಕಿಗೂ ನೋಡದೆ (ಅಂಜುಬುರುಕ) ಧಾರ್ಮಿಕನು ಓಡಬೇಕೆಂದು ವ್ಯಂಗ್ಯಾರ್ಥ. ಇಲ್ಲಿ ವಾಚ್ಯಾರ್ಥ 'ಸುಳಿದಾಡು'; ವ್ಯಂಗ್ಯಾರ್ಥ 'ಸುಳಿದೀಯೆ!'

ಕತ್ತಲಲ್ಲಿ ಕುರುಡ ನೀನು, ನಮ್ಮ ಸೆಜ್ಜೆಗಳಲಿ ಬಂದು
ಬಿದ್ದು ಬಿಡುವ ಭಂಗ ನಿನಗೆ ಬಾರದಂತಿರು[46] ||

ಕೆಲವೆಡೆಗಳಲ್ಲಿ 'ವಾಚ್ಯ'ವು ಸ್ಪಷ್ಟವಾಗಿ ವಿಧಿಯನ್ನು ಹೇಳುತ್ತಿದ್ದರೂ 'ಪ್ರತೀಯಮಾನ'ವು ವಿಧಿ-ನಿಷೇಧಗಳಲ್ಲೊಂದನ್ನೂ ಹೇಳುವುದಿಲ್ಲ. ಉದಾಹರಣೆ :—

೩. "ವಚ್ಚ ಮಹ ವ್ವಿಅ ಏಕ್ಕೇಇ ಹೋನ್ತು ಣೀಸಾಸರೋಇಅವ್ವಾಇಂ।
ಮಾ ತುಜ್ಝ ವಿ ತೀಅ ವಿಣಾ ದಕ್ಖಿಣ್ಣಹಅಸ್ಸ ಜಾಅನ್ತು"॥

ಹೋಗು! ನನಗೊಬ್ಬಳಿಗೆ ನಿಟ್ಟುಸಿರು ಕಣ್ಣೀರು
ಸಾಕು; ಬೇಡವು, ಬೇಡ! ನಿನಗವಳನಗಲಿ |
ದಾಕ್ಷಿಣ್ಯಬಂಧನಕೆ ಮೈಯೊಡ್ಡಿ ಸುಮ್ಮನೆಯೆ
ವಿರಹವೇದನೆ ಮತ್ತೆ ನಿನಗಾಗದಿರಲಿ ||[47]

ಇನ್ನೂ ಕೆಲವು ವೇಳೆ 'ವಾಚ್ಯ'ವು ಪ್ರತಿಷೇಧ ಬೋಧಕವಾಗಿದ್ದರೂ 'ಪ್ರತೀಯಮಾನ'ವು ವಿಧಿ-ನಿಷೇಧಗಳಲ್ಲೊಂದನ್ನೂ ಹೇಳುವುದಿಲ್ಲ. ಉದಾಹರಣೆ :—

೪. "ದೇ ಆ ಪಸಿಅ ಣಿವತ್ತಸು ಮುಹಸಸಿಜೋಹ್ನಾವಿಲುತ್ತತಮಣಿವಹೇ|
ಅಹಿಸಾರಿಆಣ ವಿಗ್ಘಂ ಕರೋಸಿ ಅಣ್ಣಾಣ ವಿ ಹಆಸೇ॥"

ಬೇಡುವೆನು, ಮುಳಿಸನುಳಿ, ನೀನೊಡನೆ ಹಿಂದಿರುಗು,
ಮುಖಶಶಿಯ ಜೊನ್ನದಿಂ ಸಂತಮಸನಾಶಿನಿಯೆ |
ವಿಘ್ನವನೆ ಮಾಡುತಿಹೆ ನಿನ್ನಂತೆ ಹೊರಟಿರುವ
ಅಭಿಸಾರಿಕಾಜನಕೆ ಮುಗುದೆ ನೀನರಿಯದೆಯೆ ||[48]

---

46 ಗಂಡ ಪ್ರವಾಸ ಹೋಗಿರುವ ಹೆಣ್ಣಿಲ್ಲಿ ಮಾತಾಡುವವಳು. ದಾರಿಕಾರನೊಬ್ಬನು ಅವಳನ್ನು ಕಂಡು ನುಡಿಸಿದಾಗ ಆಕೆಯು 'ಬೇಡ' ಎನ್ನುವ ಭಂಗಿಯಿಂದ ಅವನ ಪ್ರಾರ್ಥನೆಯನ್ನು ಅಂಗೀಕರಿಸುತ್ತಾಳೆ; ತಾನೇ ಅವನನ್ನು ಮೇಲ್ವಾಯ್ದು ಆಮಂತ್ರಿಸುತ್ತಿದ್ದಾಳೆಂದು ಭಾವಿಸಲಾಗದು; ಅದು ತರುಣೀ ಸ್ವಭಾವ ವಿರುದ್ಧವಾದ್ದರಿಂದ—ಲೋ.

47 ಇದು 'ಖಂಡಿತಾ' ನಾಯಿಕೆಯ ವಾಕ್ಯ. ಅನ್ಯಸ್ತ್ರೀರತನಾದ ಗಂಡನನ್ನು ಹೆಂಡತಿ ಧಿಕ್ಕರಿಸುತ್ತಿದ್ದಾಳೆ. ಅವಳಲ್ಲಿ ನಿನ್ನ ವ್ಯಾಮೋಹ ಅಸದಳವಾಗಿದೆ; ಸುಮ್ಮನೆ ತೋರಿಕೆಯ 'ದಾಕ್ಷಿಣ್ಯ'ಕ್ಕಾಗಿ ನನ್ನೊಡನೆ ಏಕಿರಬೇಕು? ನೀನು ಸರ್ವಥಾ ಶಠ,' ಎಂಬುದು ತಾತ್ಪರ್ಯ. 'ಹೋಗು', ಅಥವಾ 'ಹೋಗಬೇಡ' ಎಂದು ಯಾವುದನ್ನೂ ಇಲ್ಲಿ ಸ್ಪಷ್ಟಪಡಿಸಿಲ್ಲ—ಲೋ.

ಮತ್ತೂ ಕೆಲವೆಡೆಗಳಲ್ಲಿ 'ವಾಚ್ಯ'ಕ್ಕಿಂತಲೂ ಅತ್ಯಂತ ಭಿನ್ನವಾದ ವಿಷಯ—ವ್ಯಾಪ್ತಿಯೇ[49] 'ಪ್ರತೀಯಮಾನ'ಕ್ಕಿರುತ್ತದೆ. ಉದಾಹರಣೆ:—

೫. "ಕಸ್ಸ ವಾ ಣ ಹೋಇ ರೋಸೋ ದಟ್ಠೂಣ ಪಿಆಏ ಸವ್ವಣಂ ಅಹರಂ।
ಸಭಮರಪಉಮಗ್ಘಾಇಣಿ ವಾರಿಅವಾಮೇ ಸಹಸ್ಸು ಏಹ್ಣಿಂ"॥

ನಲ್ಲೆಯ ಚೆಂದುಟಿ ಗಾಸಿಯದಾಗಿರೆ
ನೋಡುವ ಕಾಂತಗೆ ಕಡುಮುಳಿಸು
ಬಾರದೆ ಪೋಪುದೆ? ಯಾರೇನೆನ್ನಲಿ
ಒಂದಸು ಒಮ್ಮೆಯು ಕೇಳದೆಯೆ,
ದುಂಬಿಯು ಕೂಡಿದ ಪೂವನೆ ಮೂಸಿದೆ;
ಫಲವನ್ನೀಗಲೆ ನೀ ಸಹಿಸು.[50]

---

48 i) ಮನೆಗೆ ಬಂದ ನಾಯಿಕೆ ನಾಯಕನ ಗೋತ್ರಸ್ಖಲಿತ (= ಅನ್ಯಸ್ತ್ರೀನಾಮೋಚ್ಚಾರಣ)ದಿಂದ ಕುಪಿತಳಾಗಿ ಅಲ್ಲಿಂದ ಹೊರಟುಬಿಟ್ಟಾಗ, ನಾಯಕನಾಡುವ ಅನುನಯ ವಾಕ್ಯ ಇದು. 'ನನಗೂ ನಿನಗೂ ವಿಘ್ನವಷ್ಟೇ ಅಲ್ಲ; ಇತರರಿಗೂ ನಿನ್ನ ಗಮನದಿಂದ ವಿಘ್ನವಾಗುತ್ತದೆ; ಯಾರಿಗೂ ಸುಖವಿಲ್ಲ!' ಇಲ್ಲಿ ಕೋಪ ಪ್ರಸಾದನಪರವಾದ 'ಚಾಟು' ವ್ಯಂಗ್ಯ ಎನ್ನಬಹುದು, ii) ಅಥವಾ ಸಖಿಯ ಮಾತನ್ನು ಕೇಳದೆ ಹೋಗುತ್ತಿರುವ ಅಭಿಸಾರಿಕೆಗೆ ಸಖಿ ಹೇಳುವ ಮಾತೆಂದು ವಿವರಿಸಬಹುದು ಆಗ ಸಖಿಯ ಅಭಿಪ್ರಾಯ ವ್ಯಂಗ್ಯ. ಆದರೆ ಈ ಎರಡೂ ವಿವರಣೆಗಳಲ್ಲಿ ವ್ಯಂಗ್ಯಾರ್ಥಕ್ಕೆ ಪ್ರಾಧಾನ್ಯ ಅಥವಾ ವಿಶ್ರಾಂತಿ ಬರುವುದಿಲ್ಲ; ವಾಚ್ಯಾರ್ಥಕ್ಕೆ ವಿಶ್ರಾಂತಿ. ಆದ್ದರಿಂದ ಮುಂದಿನ ವಿವರಣೆ ಸರಿ—iii) ಪ್ರಿಯತಮನನ್ನು ಸಂಧಿಸಲು ದಾರಿಯಲ್ಲಿ ಹೊರಟ ಅಭಿಸಾರಿಕೆಗೆ ದಾರಿಯಲ್ಲೇ ಪ್ರಿಯತಮನ ದರ್ಶನವಾಗುತ್ತದೆ ಆತನು ಆಕೆಯನ್ನು ಅರಿತೂ ಅರಿಯದಂತೆ ತನ್ನ ಗುರುತು ಕೊಡುವುದಕ್ಕಾಗಿ ಹೇಳುವ ಮಾತಿದು 'ನಮ್ಮ ಮನೆಗಾಗಲಿ, ನಿಮ್ಮ ಮನೆಗಾಗಲಿ ಹೋಗೋಣ'ವೆಂದು ಇಲ್ಲಿ ಸ್ಪಷ್ಟವಿಲ್ಲ. ನಾಯಕನ 'ಚಾಟು'ವೇ ವ್ಯಂಗ್ಯ —ಲೋ.

49 ಮೇಲಿನ ಉದಾಹರಣೆಗಳಲ್ಲೆಲ್ಲ ವಾಚ್ಯ-ವ್ಯಂಗ್ಯಗಳೆರಡಕ್ಕೂ ವಿಷಯ (= ಆಲಂಬನ) ಒಂದೇ. ೧ ರಲ್ಲಿ ಧಾರ್ಮಿಕ, ೨ ರಲ್ಲಿ ಪಥಿಕ, ೩ ರಲ್ಲಿ ಪ್ರಿಯತಮ, ೪ ರಲ್ಲಿ ಅಭಿಸಾರಿಕೆ ಮುಂದಿನ ಉದಾಹರಣೆಯಲ್ಲಿ ಹಾಗಿಲ್ಲ. ವಾಚ್ಯದ ವಿಷಯವೂ ವ್ಯಂಗ್ಯದ ವಿಷಯವೂ ಬೇರೆಯಾಗಿದೆ —ಲೋ.

50 ಅವಿನೀತೆಯೊಬ್ಬಳು ಉಪಪತಿಯೊಡನೆ ರಮಿಸಿ ತುಟಿಯ ಗಾಯವಿನ್ನೂ ಹೊಸದಾಗಿರುವಾಗಲೇ ಹತ್ತಿರಕ್ಕೆ ಗಂಡ ಬರುತ್ತಿರುವುದನ್ನು ಕಂಡ ಸಖಿ ಅವನ ಸಂಶಯವನ್ನು ತಪ್ಪಿಸಲು ಚಾತುರ್ಯದಿಂದ ಹೇಳುವ ಮಾತು. ಹೆಂಡತಿಯದೇನೂ ತಪ್ಪಿಲ್ಲವೆಂದು ಗಂಡನಿಗೆ

'ವಾಚ್ಯ'ಕ್ಕಿಂತಲೂ ಬೇರೆಯಾದ ಇಂತಹ 'ಪ್ರತೀಯಮಾನ ವಸ್ತು'ವಿನ ಪ್ರಕಾರಗಳು ಇನ್ನೂ ಎಷ್ಟೋ ಇವೆ. ನಾವು ಮೇಲೆ ತೋರಿಸಿರುವುದು ಕೇವಲ ಅವುಗಳ ದಿಕ್ಸೂಚನೆ.

ಹೀಗೆಯೇ 'ಪ್ರತೀಯಮಾನ'ದ ಎರಡನೆಯ ಪ್ರಭೇದವಾದ 'ಅಲಂಕಾರ'ಗಳೂ 'ವಾಚ್ಯ'ಕ್ಕಿಂತ ಭಿನ್ನವೆಂಬುದನ್ನು ಮುಂದೆ[51] ವಿಸ್ತಾರವಾಗಿ ತೋರಿಸಲಾಗುತ್ತದೆ.

ಮೂರನೆಯ ಪ್ರಭೇದವಾದ ರಸಾದಿಗಳೂ[52] ಕೂಡ 'ವಾಚ್ಯ'-ಸಾಮರ್ಥ್ಯದ ಫಲವಾಗಿ ಗಮ್ಯವಾಗುವುವೇ ಹೊರತು ನೇರವಾಗಿ ಶಬ್ದವ್ಯಾಪಾರಕ್ಕೆ ವಿಷಯಗಳೇ ಅಲ್ಲವಾದ ಕಾರಣ, ಅವು 'ವಾಚ್ಯ'ಕ್ಕಿಂತ ಸರ್ವಥಾ ಬೇರೆಯೇ. ಒಂದು ವೇಳೆ ರಸಾದಿಗಳು 'ವಾಚ್ಯ'ವೆಂದು ಯಾರಾದರೂ ಹೇಳಬೇಕಾದರೆ, ಅವು (ಬೇರೆ ಬೇರೆ ರಸಗಳನ್ನು ಬೋಧಿಸುವ) 'ಶೃಂಗಾರ' ಮುಂತಾದ ಹೆಸರುಗಳಿಂದ ವಾಚ್ಯವೆನ್ನಬೇಕು; ಇಲ್ಲವೆ 'ವಿಭಾವ'—ಮೊದಲಾದ ರಸಸಾಮಗ್ರಿಗಳ ಪ್ರತಿಪಾದನೆಯಿಂದ ಮಾತ್ರ[53] ರಸಪ್ರತೀತಿಯುಂಟಾಗುವುದೆಂದೊಪ್ಪಬೇಕು. ಮೊದಲನೆಯ ಪಕ್ಷದ ಪ್ರಕಾರ ಎಲ್ಲೆಲ್ಲಿ ರಸದ ಹೆಸರುಗಳು ಇರುವುದಿಲ್ಲವೋ, ಅಲ್ಲೆಲ್ಲ ರಸಪ್ರತೀತಿಯಿಲ್ಲದೆಯೇ ಹೋಗಬೇಕಾ

---

ತಿಳಿಸುವುದು ವ್ಯಂಗ್ಯ. ಗಂಡನ ಬೈಗುಳನ್ನು ಕೇಳಿ ನಾಯಿಕಾಚಾರಿತ್ರ್ಯದ ಬಗೆಗೆ ಸಂಶಯ ತಾಳದಂತೆ ನೆರೆಹೊರೆಯವರನ್ನು ಕುರಿತು ಅವಳ ತಪ್ಪನ್ನು ಮುಚ್ಚುವುದೂ ವ್ಯಂಗ್ಯ 'ಈಕೆಯೇ ಗಂಡನಿಗೆ ಮೆಚ್ಚಿನವಳು' ಎಂಬುದು 'ಪ್ರಿಯಾಯಾಃ' ಎಂಬ ಶಬ್ದದಿಂದ ಸವತಿ ಗ್ರಹಿಸುವ ವ್ಯಂಗ್ಯ 'ದುಃಖಿಸಬೇಡ; ಇದು ನಿನ್ನ ಸೌಭಾಗ್ಯದ ಮಹತ್ತ್ವವೇ ಸರಿ' ಎಂಬುದು ನಾಯಿಕೆಯನ್ನು ಕುರಿತ ವ್ಯಂಗ್ಯ. 'ಇಂದೇನೋ ಉಪಾಯದಿಂದ ಪಾರಾಗಿಸಿದ್ದೇನೆ; ಮುಂದೆಂದೂ ಹೀಗೆ ತುಟಿಯನ್ನು ಗಾಸಿಮಾಡಲಾಗದು' ಎಂಬುದು ಉಪಪತಿಯನ್ನು ಕುರಿತ ವ್ಯಂಗ್ಯ ಸಖಿಯ ಸ್ವಚಾತುರ್ಯ ಪ್ರಕಾಶನವು ತಟಸ್ಥರಿಗೆ ವ್ಯಂಗ್ಯ ಹೀಗೆ ವ್ಯಂಗ್ಯಾರ್ಥವು ಒಬ್ಬೊಬ್ಬರಿಗೆ ಒಂದೊಂದು ರೀತಿಯಾಗಿ ಸ್ಫುರಿಸುತ್ತದೆ—ಲೋ

51 ಎರಡನೆಯ ಉದ್ದ್ಯೋತದಲ್ಲಿ.

52 ರಸಾದಿ = ರಸ, ಭಾವ, ರಸಾಭಾಸ, ಭಾವಾಭಾಸ ಭಾವಶಾಂತಿ. ಇವು ಎಂದೂ 'ವಾಚ್ಯ'ವೇ ಅಲ್ಲ ಔಚಿತ್ಯದಿಂದ ಪ್ರವೃತ್ತವಾದ ಚಿತ್ತವೃತ್ತಿಗಳಲ್ಲಿ 'ಸ್ಥಾಯಿ'ಗಳು ಆಸ್ವಾದ್ಯವಾದರೆ 'ರಸ', ವ್ಯಭಿಚಾರಿಗಳು ಆಸ್ವಾದ್ಯವಾದರೆ 'ಭಾವ.' ಅನೌಚಿತ್ಯದಿಂದ ಅವೇ ಪ್ರವೃತ್ತವಾದಾಗ 'ರಸಾಭಾಸ' (ಸೀತೆಯ ಮೇಲೆ ರಾವಣನ ಮೋಹದಂತೆ) ಮತ್ತು 'ಭಾವಾಭಾಸ.' ಚಿತ್ತವೃತ್ತಿಯ ಪ್ರಶಮವೇ 'ಭಾವಶಾಂತಿ'. 'ನಿನಗೆ ಗಂಡುಮಗ ಹುಟ್ಟಿದನು' ಎಂಬ ಸುದ್ದಿ ಕೇಳಿದಾಗ ಬರುವ ಲೌಕಿಕಹರ್ಷ 'ರಸ'ವಲ್ಲ; ರಸ ಎಲ್ಲ ವಸ್ತುಸಿದ್ಧ 'ಸುಖ'ಗಳಿಗಿಂತಲೂ ವಿಲಕ್ಷಣ. ಕೇವಲ ಅಂತಶ್ಚಮತ್ಕಾರಸಾರ; ಆತ್ಮಾನಂದ ವಿಶ್ರಾಂತ—ಲೋ

53 ತಾತ್ಪರ್ಯಶಕ್ತಿಯಿಂದ ಎಂದು ಅಭಿಪ್ರಾಯ—ಲೋ.

ದೀತು. ವಸ್ತುತಃ ಎಲ್ಲಿಡೆಗಳಲ್ಲಿಯೂ ರಸಗಳು ಸ್ವಶಬ್ದಗಳಿಂದಲೇ ಪ್ರತೀತವಾಗುವುದಿಲ್ಲ. ಸ್ವಶಬ್ದಗಳ ಪ್ರಯೋಗವು ಕಂಡುಬರುವಂತಹ ವಿರಲ ಸಂದರ್ಭಗಳಲ್ಲಿಯೂ ಕೂಡ, ರಸಾದಿಗಳ ಪ್ರತೀತಿಯು ಕೆಲವು ನಿರ್ದಿಷ್ಟ ವಿಭಾವಾದಿಗಳ ಪ್ರತಿಪಾದನದ ಮೂಲಕ ಉಂಟಾಗುತ್ತಿರುವುದೇ ಹೊರತು, ಸ್ವಶಬ್ದಗಳ ಮಹಿಮೆಯಿಂದಲ್ಲ. ಬೇರೆ ರೀತಿಯಾಗಿ ಆಗಲೇ ನಿಷ್ಪನ್ನವಾಗಿರುವ ರಸವನ್ನು ಆ ಶಬ್ದಗಳು ಹೆಸರಿಸುತ್ತವೆಯೇ ಹೊರತು, ರಸಪ್ರತೀತಿಯೇ ಆ ಶಬ್ದಗಳಿಂದ ಹುಟ್ಟಿತೆನ್ನಲಾಗದು. ಮಿಕ್ಕ ಸ್ಥಳಗಳಲ್ಲಿಯೂ ಸಹ ವಿಭಾವಾದಿಪ್ರತಿಪಾದನೆಯಿಲ್ಲದಿರುವಾಗ, ಸ್ವಶಬ್ದಗಳ ಪ್ರಯೋಗವಿದ್ದರೂ ಕೂಡ ರಸಪ್ರತೀತಿಯುಂಟಾಗುವುದಿಲ್ಲ. 'ಶೃಂಗಾರ' ಮೊದಲಾದ ಶಬ್ದಗಳು ಇರುವ ಮಾತ್ರದಿಂದಲೇ, ವಿಭಾವಾದಿ ವರ್ಣನೆಯಿಲ್ಲದ ಕಾವ್ಯದಲ್ಲಿ, ರಸವಿದೆಯೆಂಬ ಅನುಭವ ಸ್ವಲ್ಪವೂ ಬರುವುದಿಲ್ಲ. ಹೀಗೆ ತಮ್ಮ ಹೆಸರುಗಳನ್ನು ಸಾಕ್ಷಾತ್ತಾಗಿ ಹೇಳಿರಲಿ, ಹೇಳದೆ ಇರಲಿ, ವಿಶಿಷ್ಟವಾದ ವಿಭಾವಾದಿಗಳ ಮೂಲಕವೇ ರಸಾದಿಗಳ ಪ್ರತೀತಿಯುಂಟಾಗುವುದರಿಂದಲೂ, ಕೇವಲ ಹೆಸರು ಹೇಳಿದ ಮಾತ್ರದಿಂದಲೇ ರಸಾದಿಗಳು ಪ್ರತೀತವಾಗದೆ ಇರುವುದರಿಂದಲೂ—ಅನ್ವಯವ್ಯತಿರೇಕಗಳೆರಡರಿಂದಲೂ ಎಂದಭಿಪ್ರಾಯ—ರಸಾದಿಗಳು ವಾಚ್ಯಸಾಮರ್ಥ್ಯದ ಫಲವಾಗಿ ಪ್ರಕಟವಾಗುವುವೇ ಹೊರತು ಹೇಗೂ ವಾಚ್ಯವಾಗಲಾರವು. ಆದುದರಿಂದಲೇ 'ಪ್ರತೀಯಮಾನ'ದ ಮೂರನೆಯ ಪ್ರಭೇದವೂ 'ವಾಚ್ಯ'ಕ್ಕಿಂತ ಬೇರೆಯೆಂಬುದು ಸ್ಥಿರಪಟ್ಟಂತಾಯಿತು.

'ವಾಚ್ಯ'ದ ಜತೆಯಲ್ಲಿಯೇ ರಸಾದಿಗಳ ಪ್ರತೀತಿ ಉಂಟಾಗುವುದೆಂದು ಮುಂದೆ ವಿವರಿಸಿದೆ—[54]

ಕಾರಿಕೆ

ಕಾವ್ಯಸ್ಯಾತ್ಮಾ ಸ ಏವಾರ್ಥಸ್ತಥಾ ಚಾದಿಕವೇಃ ಪುರಾ ।
ಕ್ರೌಂಚದ್ವಂದ್ವವಿಯೋಗೋತ್ಥಃ ಶೋಕಃ ಶ್ಲೋಕತ್ವಮಾಗತಃ ॥ ೫ ॥[55]

ಆ ಅರ್ಥವೇ ಕಾವ್ಯದ ಆತ್ಮ.[56] ಆದ್ದರಿಂದಲೇ ಹಿಂದೆ ಕ್ರೌಂಚಮಿಥುನದ

---

54 ಎರಡನೆಯ ಉದ್ಯೋತದಲ್ಲಿ—ಲೋ.

55 ಹಿಂದೆ ಧ್ವನಿಸ್ವರೂಪವನ್ನು ಹೇಳಲಾಯಿತು. ಈಗ ಅದೇ ಕಾವ್ಯದ ಆತ್ಮವೆಂಬುದನ್ನು 'ಇತಿಹಾಸ'ದ ಮೂಲಕ ತೋರಿಸಲಾಗುತ್ತದೆ—ಲೋ.

56 'ವ್ಯಂಗ್ಯ'ದಲ್ಲಿ ಮೂರನೆಯದಾದ ರಸಧ್ವನಿಯೇ ಆತ್ಮವೆಂದು ತಿಳಿಯಬೇಕು; ಇಲ್ಲಿಯ ಇತಿಹಾಸ ಹಾಗೂ ಹಿಂದಿನ ವೃತ್ತಿಗ್ರಂಥ ಎರಡೂ ರಸಧ್ವನಿಯೇ ಕಾವ್ಯದ ಆತ್ಮವೆಂಬುದನ್ನು ಸೂಚಿಸುತ್ತವೆ ವಸ್ತುತಃ ರಸವೇ ಆತ್ಮವಾದರೂ, ವಸ್ತುಧ್ವನಿ ಅಲಂಕಾರಧ್ವನಿಗಳು ಕೂಡ ಕಡೆಗೆ ರಸದಲ್ಲಿಯೇ ಪರ್ಯವಸಾನಗೊಳ್ಳುವ ಕಾರಣ, ಸ್ಥೂಲವಾಗಿ 'ಧ್ವನಿ'ಯು ಕಾವ್ಯದ ಆತ್ಮವೆನ್ನಲಾಗಿದೆ.

ವಿಯೋಗದಿಂದ 57 ಉಂಟಾದ ಶೋಕವು ಆದಿಕವಿಯ ಬಾಯಲ್ಲಿ ಶ್ಲೋಕತ್ವವನ್ನು ಪಡೆಯಿತು.

ವೃತ್ತಿ

ಇಲ್ಲಿ 'ಕಾವ್ಯ'ವೆಂದರೆ ವಿವಿಧ ಮತ್ತು ವಿಶಿಷ್ಟವಾದ ಅರ್ಥ, ಶಬ್ದ ರಚನೆ— ಇವುಗಳಿಂದ ಸುಂದರವಾದ58 ಕವಿಕರ್ಮವೆಂದರ್ಥ. ಅಂತಹ ಕಾವ್ಯದಲ್ಲಿ ಆ ಅರ್ಥವೇ ಸಾರಭೂತವಾದುದು. ಬೇಡನಿಂದ ಸಹಚರಿಯು ಹತಳಾಗಲು, ವಿರಹವ್ಯಥೆಯನ್ನು ತಾಳಲಾರದೆ ಕೂಗಿಡುತ್ತಿದ್ದ ಕ್ರೌಂಚಪಕ್ಷಿಯ ಆಕ್ರಂದವನ್ನು ಕೇಳಿ, ಆದಿಕವಿಗುಂಟಾದ ಶೋಕವೇ ಹೀಗೆ ಶ್ಲೋಕರೂಪವಾಗಿ ಪರಿಣಾಮಗೊಂಡಿತು.*

'ಶೋಕ'ವು 'ಕರುಣ'ರಸಕ್ಕೆ59 'ಸ್ಥಾಯಿಭಾವ.' ಅದು ವ್ಯಂಗ್ಯವೇ ಹೊರತು 'ವಾಚ್ಯ'ವಲ್ಲವೆಂದು ಈ ಮೊದಲೇ ಹೇಳಿದೆ.

---

57 ಕ್ರೌಂಚಮಿಥುನದ ವಿಯೋಗದಿಂದ= ಒಂದರ ಸಾವಿನ ಮೂಲಕ ಒದಗಿದ ವಿರಹದಿಂದ, ಇನ್ನೊಂದಕ್ಕೆ ಉಂಟಾದ ಶೋಕವೇ ಸ್ಥಾಯಿಭಾವ, ಆತ್ಯಂತಿಕ ವಿಯೋಗದ ಪ್ರಯುಕ್ತ ವಿಪ್ರಲಂಭ ಶೃಂಗಾರದ ಸ್ಥಾಯಿಯಾದ 'ರತಿ'ಯಲ್ಲ ಉಳಿದ ಹಕ್ಕಿಯೇ ವಿಭಾವ, ಅದರ ಆಕ್ರಂದವೇ ಅನುಭಾವ ಅವುಗಳ ಚರ್ವಣೆಯಿಂದ ಆಸ್ವಾದ್ಯವಾದುದೇ ಅಲೌಕಿಕ ಕರುಣರಸ, ಇದು ಸ್ವಾಂತಃಕರಣದ ದ್ರುತಿಯೇ ಸರಿ, ಲೌಕಿಕವಾದ ಶೋಕದಂತಲ್ಲ. ರಸದಿಂದ ತುಂಬಿದ ಗಡಿಗೆ ತುಳುಕುವಂತೆ, ಚಿತ್ತವೃತ್ತಿಯು ಉಕ್ಕಿ ಹೊರಮೂಡುವ ಮಾತುಗಳಂತೆ, ಬುದ್ಧಿಪೂರ್ವಕವಾಗಿ ಯಾವ ನಿಯಮಗಳನ್ನೂ ಅನುಸರಿಸದೆ ಸಹಜವಾಗಿಯೇ, ಅದು ಸಮುಚಿತ ಛಂದೋರೂಪವನ್ನು ತಳೆದು ಹೊರಹೊಮ್ಮಿತೆಂದರ್ಥ, 'ಮಾ ನಿಷಾದ ' ಎಂಬುದೇ ಆ ಶ್ಲೋಕ ಇಲ್ಲಿ ವಾಲ್ಮೀಕಿ ಋಷಿಗಳಿಗೆ ಲೌಕಿಕ ಶೋಕವೆಂದು ತಿಳಿಯಲಾಗದು ಹಾಗಿದ್ದ ಪಕ್ಷಕ್ಕೆ ಹಕ್ಕಿಯ ದುಃಖದಿಂದ ಅವರೂ ದುಃಖಿತರಾಗುತ್ತಿದ್ದರು, 'ರಸ'ವು ಕಾವ್ಯದ 'ಆತ್ಮ'ವೆನ್ನುವುದಕ್ಕೆ ಅವಕಾಶವೇ ಇರುವುದಿಲ್ಲ ದುಃಖಸಂತಪ್ತರ ಸ್ಥಿತಿ ಹೀಗೆ ಇರುವುದಿಲ್ಲ ಎಂದ ಮೇಲೆ ಕವಿಯಲ್ಲಿ 'ರಸ' ತುಂಬಿ ತುಳುಕಿ ಹೊರಸೂಸಿದಾಗಲೇ ಕಾವ್ಯರಚನೆಯಾಗುವುದೆಂದು ತಿಳಿಯಬೇಕು ಇದನ್ನು ಭಟ್ಟನಾಯಕನೂ ಹೇಳಿದ್ದಾನೆ 'ತನ್ನಲ್ಲಿ ಇದು (= ರಸ) ತುಂಬಿಕೊಂಡ ಹೊರತು ಕವಿ ಇದನ್ನು ಕಾವ್ಯದ ಮೂಲಕ ಹೊರಸೂಸಲಾರನು'—ಲೋ

58 ಎಂದರೆ ರಸಾನುಗುಣ್ಯವುಳ್ಳ, ಮತ್ತು ಶಬ್ದಾರ್ಥಾಲಂಕಾರ ಹಾಗು ಗುಣಗಳಿಂದ ಸಮೃದ್ಧವಾದ, ವಾಚ್ಯ—ವಾಚಕ—ರಚನೆಗಳೆಂದಭಿಪ್ರಾಯ—ಲೋ.

* ಕೆಲವು ಪ್ರತಿಗಳಲ್ಲಿ ಇದಾದೊಡನೆ 'ಮಾ ನಿಷಾದ ಪ್ರತಿಷ್ಠಾಂ ತ್ವಂ' ಎಂಬ ಶ್ಲೋಕ ಮೂಲದಲ್ಲಿ ಬರುತ್ತದೆ. ಅದು ಪ್ರಕ್ಷಿಪ್ತವಿರಬೇಕೆಂದು ಕುಪ್ಪುಸ್ವಾಮಿಶಾಸ್ತ್ರಿಗಳ ಅಭಿಪ್ರಾಯ

59 'ಕರುಣರಸ'ವು ಕೇವಲ ಚರ್ವಣಾಗೋಚರ ಚರ್ವಣಾ ವಿಷಯವಾದಾಗ 'ಶೋಕ'ವೆಂಬ ಸ್ಥಾಯಿಭಾವವೇ ರಸತ್ವವನ್ನು ಪಡೆಯುತ್ತದೆ. ಆದುದರಿಂದ ರಸ ವಿಭಾವಗಳಿಂದ 'ವ್ಯಂಗ್ಯ'ವೇ ಸರಿ—ಲೋ

'ಪ್ರತೀಯಮಾನ'ದ ಪ್ರಭೇದಗಳು ಇನ್ನೂ ಬೇರೆ ಇರುವುವಾದರೂ[60] ರಸ, ಭಾವಗಳೇ ಅತ್ಯಂತ ಪ್ರಧಾನವಾದುದರಿಂದ,[61] ಮಿಕ್ಕ ಪ್ರಭೇದಗಳಿಗೂ ಇವೇ 'ಉಪಲಕ್ಷಣ' ಅಥವಾ ಸೂಚಕವೆಂದು ತಿಳಿಯಬೇಕು.

ಕಾರಿಕೆ

ಸರಸ್ವತೀ ಸ್ವಾದು ತದರ್ಥವಸ್ತು
ನಿಃಷ್ಯನ್ದಮಾನಾ ಮಹತಾಂ ಕವೀನಾಮ್ ।
ಅಲೋಕಸಾಮಾನ್ಯಮಭಿವ್ಯನಕ್ತಿ
ಪರಿಸ್ಫುರನ್ತಂ ಪ್ರತಿಭಾವಿಶೇಷಮ್[62] ॥ ೬ ॥

ಆ ಮಧುರವಾದ ಅರ್ಥವಸ್ತುವನ್ನು ಸ್ರವಿಸುವ ಮಹಾಕವಿಗಳ ವಾಣಿಯೇ[63] ಅವರ ಲೋಕೋತ್ತರ ಮತ್ತು ಉಜ್ಜ್ವಲವಾದ ಪ್ರತಿಭಾವಿಶೇಷವನ್ನು[64] ತಿಳಿಯಪಡಿಸುತ್ತದೆ.

ವೃತ್ತಿ

ಆ ಅರ್ಥವಸ್ತು ಎಂದರೆ ವಸ್ತುತತ್ತ್ವವನ್ನು ಸೂಸುವ ಮಹಾಕವಿಗಳ ವಾಣಿಯೇ ಲೋಕಾತೀತವಾದ ಮತ್ತು ಸಂತತವೂ ಸ್ಫುರಿಸುತ್ತಿರುವ ಅವರ ಪ್ರತಿಭೆಯ ವೈಶಿಷ್ಟ್ಯದ

---

60 'ವಸ್ತುಧ್ವನಿ' ಮತ್ತು 'ಅಲಂಕಾರ ಧ್ವನಿ'—ಲೋ.

61 ರಸದಲ್ಲಿ ಪರ್ಯವಸಾನಗೊಳ್ಳುವ ಕಾರಣ—ಲೋ.

62 ಇದು ಸ್ವಾನುಭವಸಿದ್ಧವೆಂಬುದನ್ನು ಈ ಕಾರಿಕೆ ಹೇಳುತ್ತದೆ.

63 ವಾಗ್ರೂಪಿಣಿಯಾದ ಭಗವತಿ ದಿವ್ಯ ಆನಂದರಸವನ್ನು ತಾನಾಗಿಯೇ ಕಾಮಧೇನುವಿನಂತೆ ಕರೆಯುವಳೆಂದರ್ಥ. ಭಟ್ಟನಾಯಕನು ಹೇಳುವಂತೆ 'ವಾಕ್ಕೆಂಬ ಧೇನು ಕರುಗಳ (= ಕವಿಗಳ) ಮೇಲಿನ ಮಮತೆಯಿಂದ ಕರೆಯುವ (ಕ್ಷೀರ)ರಸವು ಅಸಾಧಾರಣವಾದುದು; ಯೋಗಿಗಳು ಕರೆಯುವ ರಸ ಕೂಡ ಅದಕ್ಕೆ ಸಮವಾಗದು' ಯೋಗಿಗಳು ಕಠೋರ ನಿಯಮಗಳಿಂದ ಅದನ್ನು ಕರೆದರೆ, ಕವಿಗಳಿಗೆ ತಾನಾಗಿಯೇ, ಅದು ಪ್ರಯತ್ನವಿಲ್ಲದೆಯೇ ಲಭಿಸುವುದು, ಹೋಲಿಸಿ- 'ಯಂ ಸರ್ವಶೈಲಾಃ ಪರಿಕಲ್ಪ್ಯ ವತ್ಸಂ . ' ಕುಮಾರ ಸಂಭವ I —ಲೋ.

64. ಪ್ರತಿಭೆ ಕೇವಲ ಅನುಮಾನ ಸಿದ್ಧವಲ್ಲ ; ಅನುಭವಸಿದ್ಧ 'ನಮ್ಮ ಗುರು' ಭಟ್ಟ ತೌತ ಹೇಳುವಂತೆ-"ನಾಯಕ, ಕವಿ, ಸಹೃದಯ-ಮೂವರ ಅನುಭವವೂ ಸಮಾನ" ಪ್ರತಿಭೆಯೆಂದರೆ ಅಪೂರ್ವವಸ್ತುವನ್ನು ನಿರ್ಮಿಸಬಲ್ಲ ಪ್ರಜ್ಞೆ. ಅದರ ವಿಶೇಷವೆಂದರೆ ರಸಾವೇಶದ ವೈಶದ್ಯದ ಪರಿಣಾಮವಾಗಿ ಸೌಂದರ್ಯಮಯವಾದ ಕಾವ್ಯದ ನಿರ್ಮಾಣಕೌಶಲ ಇದನ್ನೇ ಭರತನೂ ಹೇಳಿದ್ದಾನೆ-'ಕವಿಯ ಅಂತರ್ಗತ ಭಾವವನ್ನು .' ಇತ್ಯಾದಿ ವಾಕ್ಯದಲ್ಲಿ (ನಾಟ್ಯಶಾಸ್ತ್ರ, VII. ೩)—ಲೋ.

ಕುರುಹಾಗಿರುವುದು. ಆದುದರಿಂದಲೇ ಈ ಪ್ರಪಂಚದಲ್ಲಿ ಎಷ್ಟೋ ಬಗೆಯ ಕವಿಗಳ ಪರಂಪರೆಯು ಬಂದು ಹೋಗುತ್ತಿರುವುದಾದರೂ ಕಾಳಿದಾಸನೇ ಮೊದಲಾದ ಮಹಾಕವಿಗಳನ್ನು ಮಾತ್ರ ಎರಡು ಮೂರು ಅಥವಾ ಐದಾರೆಂದು ಎಣಿಸುತ್ತೇವೆ.

ಪ್ರತೀಯಮಾನಾರ್ಥದ ಅಸ್ತಿತ್ವವನ್ನು ಸಾಧಿಸಲು ಇನ್ನೂ ಒಂದು ಆಧಾರವುಂಟು.[65] ಅದೇನೆಂದರೆ :—

ಕಾರಿಕೆ

ಶಬ್ದಾರ್ಥಶಾಸನಜ್ಞಾನಮಾತ್ರೇಣೈವ ನ ವೇದ್ಯತೇ ।
ವೇದ್ಯತೇ ಸ ತು ಕಾವ್ಯಾರ್ಥತತ್ತ್ವಜ್ಞೈರೇವ ಕೇವಲಮ್ ॥ ೭ ॥

ಕೇವಲ ವ್ಯಾಕರಣಗಳ ಮತ್ತು ನಿಘಂಟುಗಳ ಸಹಾಯದಿಂದಲೇ ಅದು ಯಾರಿಗೂ ತಿಳಿಯುವುದಿಲ್ಲ, ಕಾವ್ಯಾರ್ಥದ ತತ್ತ್ವಜ್ಞರಿಗೆ ಮಾತ್ರ ಅದರ ಅರಿವಾಗುತ್ತದೆ.

ವೃತ್ತಿ

ಕೇವಲ ವ್ಯಾಕರಣಗಳ ಮತ್ತು ಕೋಶಗಳ ಜ್ಞಾನಮಾತ್ರದಿಂದಲೇ ಆ ಅರ್ಥವು ಪೂರ್ಣವಾಗಿ ತಿಳಿಯುವುದಿಲ್ಲ; ಕಾವ್ಯಾರ್ಥದ ತತ್ತ್ವವನ್ನು ಬಲ್ಲವರು ಮಾತ್ರ ಅದನ್ನು ಗ್ರಹಿಸಲು ಸಮರ್ಥರೆಂಬುದೇ ಕಾರಣ. ಒಂದು ವೇಳೆ ಆ ಅರ್ಥವು 'ವಾಚ್ಯ'ವೇ ಆಗಿದ್ದ ಪಕ್ಷಕ್ಕೆ ವಾಚ್ಯವಾದ 'ಅರ್ಥ'ದ ಮತ್ತು ವಾಚಕವಾದ 'ಶಬ್ದ'ದ ಪರಿಜ್ಞಾನದಿಂದಲೇ ಅದರ ಗ್ರಹಣವೂ ಸಾಧ್ಯವಾಗಬೇಕಾಗಿದ್ದಿತು. ಆದರೆ ಶಬ್ದಾರ್ಥಗಳ ಸ್ವರೂಪವನ್ನು ವಿವರಿಸುವ ಶಾಸ್ತ್ರಗಳಲ್ಲಿ ಮಾತ್ರ ಅನುಭವವುಳ್ಳವರಿಗೆ, ಕಾವ್ಯದ ತತ್ತ್ವಾರ್ಥವನ್ನು ಆಸ್ವಾದಿಸುವ 'ಭಾವನೆ'ಯಿಲ್ಲದೆ[66] ಹೋದಾಗ, ಆ ಅರ್ಥವು ಅಗೋಚರವಾಗಿಯೇ ಉಳಿಯುತ್ತದೆ. 'ಸ್ವರ', 'ಶ್ರುತಿ'[67] ಮುಂತಾದ ಸಂಗೀತ ಶಾಸ್ತ್ರದ ಪ್ರಕ್ರಿಯೆಗಳನ್ನು ಮಾತ್ರ ಓದಿಕೊಂಡವರಿಗೆ ಹಾಡುಗಳ ವ್ಯಂಗ್ಯಾಂಶವು ತಿಳಿಯದೆಯೇ ಹೋಗುವಂತೆ (ಕಾವ್ಯದಲ್ಲಾದರೂ ಪ್ರತೀಯಮಾನಾಂಶವು ವಿಶಿಷ್ಟವಾದ ರಸಿಕತೆಯಿಲ್ಲದೆ ತಿಳಿಯಲಾರದು.)

'ವಾಚ್ಯ'ಕ್ಕಿಂತಲೂ ಬೇರೆಯಾದ 'ವ್ಯಂಗ್ಯ'ದ ಅಸ್ತಿತ್ವವನ್ನು ಇಲ್ಲಿಯವರೆಗೆ

---

65 ಆಗಲೇ ಹೇಳಲಾದ ಸ್ವರೂಪಭೇದ, ವಿಷಯಭೇದಗಳಲ್ಲದೆ 'ಭಿನ್ನಸಾಮಗ್ರೀವೇದ್ಯತ್ವ'ವೆಂಬ ಮೂರನೆಯ ಪ್ರಮಾಣವನ್ನಿಲ್ಲಿ ಸೂಚಿಸಲಾಗಿದೆ —ಲೋ.

66 'ಭಾವನೆ'= ವಾಚ್ಯಕ್ಕಿಂತ ಭಿನ್ನವಾದ ರಸದ ಚರ್ವಣೆ.—ಲೋ.

67 'ಶ್ರುತಿ'ಗಳು ಇಪ್ಪತ್ತೆರಡು 'ಸ್ವರ'ಗಳು ಏಳು. ಇವು 'ಸಂಗೀತ ಶಾಸ್ತ್ರ'ದಲ್ಲಿ ಉಕ್ತ. ಲೋ.

ನಿರೂಪಿಸಲಾಯಿತು. ಮುಂದಿನ ಕಾರಿಕೆಯಲ್ಲಿ ಅದಕ್ಕೇ ಪ್ರಾಧಾನ್ಯ ಎಂದು ಪ್ರತಿಪಾದಿಸಲಾಗುತ್ತದೆ—

ಕಾರಿಕೆ

ಸೋಽರ್ಥಸ್ತದ್ವ್ಯಕ್ತಿಸಾಮರ್ಥ್ಯಯೋಗೀ ಶಬ್ದಶ್ಚ ಕಶ್ಚನ ।
ಯತ್ನತಃ ಪ್ರತ್ಯಭಿಜ್ಞೇಯೌ ತೌ ಶಬ್ದಾರ್ಥೌ ಮಹಾಕವೇಃ ॥ ೮ ॥

ಆ ಅರ್ಥ ಮತ್ತು ಅದನ್ನು ವ್ಯಕ್ತಗೊಳಿಸಬಲ್ಲ ಅಪೂರ್ವ ಶಬ್ದ—ಈ ಶಬ್ದಾರ್ಥಗಳನ್ನು ಮಹಾಕವಿಯು[68] ಪ್ರಯತ್ನಪಟ್ಟು ಗುರುತಿಸಬೇಕು.

ವೃತ್ತಿ

ಆ ವ್ಯಂಗ್ಯಾರ್ಥ ಮತ್ತು ಅದನ್ನು ಪ್ರಕಾಶಿಸಲು ಸಾಮರ್ಥ್ಯವನ್ನುಳ್ಳ ಎಲ್ಲೋ ಒಂದೊಂದು ಶಬ್ದ—ಎಂದರೆ ಎಲ್ಲ ಶಬ್ದಗಳೂ ಅಲ್ಲ—ಇವು ಮಾತ್ರ ಮಹಾಕವಿಯ ಪ್ರಯತ್ನಪೂರ್ವಕವಾದ ಅನುಸಂಧಾನಕ್ಕೆ[69] ಯೋಗ್ಯವಾದ ಶಬ್ದಾರ್ಥಗಳು. ಸರಿಯಾಗಿ ಪ್ರಯೋಗಿಸಿದ ವ್ಯಂಗ್ಯಾರ್ಥ, ವ್ಯಂಜಕಶಬ್ದಗಳಿಂದಲೇ[70] ಮಹಾಕವಿಗಳಿಗೆ ಮಹಾಕವಿತ್ವವು ಸಿದ್ಧಿಸುವುದೇ ಹೊರತು, ಶಬ್ದ, ಅರ್ಥ, ಸಂಘಟನೆಗಳಿಂದ ಅದು ಸಿದ್ಧಿಸಲಾರದು.

ಹೀಗೆ ವ್ಯಂಗ್ಯವ್ಯಂಜಕಗಳು ಪ್ರಾಧಾನ್ಯವನ್ನು ಪಡೆದರೂ, ಕವಿಗಳು ವಾಚ್ಯವಾಚಕಗಳನ್ನೇ ಮುಂಚೆ ಪರಿಗ್ರಹಿಸುವುದು ಯುಕ್ತವೇ ಆಗಿದೆಯೆಂದು ಹೇಳುತ್ತಾನೆ[71]—

---

68 ಪ್ರತಿಭಾವಂತನಿಗೆ ಸಹಜವಾಗಿಯೇ ವ್ಯಂಗ್ಯಾರ್ಥ ಸ್ಫುರಿಸಬಹುದು, ನಿಜ. ಆದರೂ ಇದು ಹೀಗೆಂದು ಪರಾಮರ್ಶಿಸಿದರೆ ಪ್ರತಿಭೆಗೆ ಸಹಸ್ರಮುಖವಾದ ಚಾಲನೆ ಸಿಕ್ಕುತ್ತದೆ ತಿಳಿದ ವಸ್ತುವಿನ ಸೂಕ್ಷ್ಮತರ ಅನುಸಂಧಾನವೇ ಪ್ರತ್ಯಭಿಜ್ಞೆ ಸುಮ್ಮನೆ 'ಅದೇ ಇದು' ಎನ್ನುವ ಮನೋವ್ಯಾಪಾರವಲ್ಲ. ಈ ಸಂದರ್ಭದಲ್ಲಿ 'ಪ್ರತ್ಯಭಿಜ್ಞಾದರ್ಶನ'ದ ಸಿದ್ಧಾಂತಪರವಾದ ಒಂದು ಪದ್ಯವನ್ನು (ಉತ್ಪಲಪಾದರದು) ಲೋಚನದಲ್ಲಿ ಉದಾಹರಿಸಲಾಗಿದೆ-('ತೈಸ್ತೈರಪ್ಯುಪಯಾಚಿತೈಃ ')

69 ಯಾರು ಮಹಾಕವಿಯಾಗಬೇಕೆಂದು ಬಯಸುವನೋ ಅವನು ಎಂದರ್ಥ —ಲೋ.

70 ಹೀಗೆ ವ್ಯಂಗ್ಯಾರ್ಥ, ವ್ಯಂಜಕಶಬ್ದಗಳಿಗೆ ಕಂಠೋಕ್ತವಾಗಿ ಪ್ರಾಧಾನ್ಯವನ್ನು ಹೇಳಿರುವುದರಿಂದ ವ್ಯಂಜನಾವ್ಯಾಪಾರಕ್ಕೂ ಪ್ರಾಧಾನ್ಯ ತಾನೇ ಸ್ಪಷ್ಟ. ಹೀಗೆ 'ಧ್ವನಿ'ಯೆಂಬುದು ಈ ಮೂರಕ್ಕೂ ಅನ್ವಯಿಸುತ್ತದೆ.

71 ವಾಚ್ಯ-ವಾಚಕಗಳನ್ನೇ ಮೊದಲು ವಿಮರ್ಶಕರು ಪರಿಭಾವಿಸುವುದು ನಿಜ ಆದರೆ ಅಷ್ಟರಿಂದಲೇ ಅವಕ್ಕೆ ವ್ಯಂಗ್ಯಕ್ಕಿಂತ ಹೆಚ್ಚಿನ ಪ್ರಾಧಾನ್ಯ ಬಾರದೆಂದು ಈ ಕಾರಿಕೆ ತೋರಿಸುತ್ತದೆ. ಯಾವಾಗಲೂ ಉಪಾಯಗಳಿಗೆ ಗಮನ ಮೊದಲು; ಆದರೆ ಉಪೇಯದ ಲಾಭವೇ ಗುರಿ

ಕಾರಿಕೆ

ಆಲೋಕಾರ್ಥೀ[72] ಯಥಾ ದೀಪಶಿಖಾಯಾಂ ಯತ್ನವಾನ್ ಜನಃ |
ತದುಪಾಯತಯಾ ತದ್ವದರ್ಥೇ ವಾಚ್ಯೇ ತದಾದೃತಃ || ೯ ||

ನೋಡಬಯಸುವವನು (ಬೆಳಕು ಬೇಕಾದವನು ?) ಅದಕ್ಕೆ ಸಾಧಕವಾದ ದೀವಿಗೆಯನ್ನು ದೊರಕಿಸಲು ಪ್ರಯತ್ನ ಪಡುವಂತೆಯೇ, ವ್ಯಂಗ್ಯಾರ್ಥದಲ್ಲಿ ಆದರವುಳ್ಳವನಾದರೂ ವಾಚ್ಯಾರ್ಥವನ್ನು ಸಂಪಾದಿಸಲು (ಮೊದಲು) ಪ್ರಯತ್ನಿಸುತ್ತಾನೆ.

ವೃತ್ತಿ

ಒಬ್ಬನ ಮುಖ್ಯ ಉದ್ದೇಶವು ಪದಾರ್ಥಗಳನ್ನು ನೋಡಬೇಕೆಂಬುದೇ ಆಗಿದ್ದರೂ ಅವನ ಮೊದಲ ಪ್ರಯತ್ನವು ತನ್ನ ಉದ್ದೇಶಕ್ಕೆ ಸಾಧಕವಾದ ದೀವಿಗೆಯೊಂದನ್ನು ದೊರಕಿಸಿಕೊಳ್ಳುವುದರ ಕಡೆಗೇ ಇರುವಂತೆ—ಏಕೆಂದರೆ ದೀವಿಗೆ ದೊರೆತಲ್ಲದೆ ನೋಡುವುದೇ ಅಸಂಭವ—ವ್ಯಂಗ್ಯಾರ್ಥದಲ್ಲಿ ಆದರವುಳ್ಳವನಾದರೂ ವಾಚ್ಯಾರ್ಥದ ಸಂಪಾದನೆಗೇ ಮೊದಲು ಪ್ರಯತ್ನಿಸುತ್ತಾನೆ. ಹೀಗೆ ಹೇಳಿದುದರಿಂದ ಕಾವ್ಯರಚನೆಗೆ ಹೊರಟ ಕವಿಯ 'ವ್ಯಾಪಾರ' ಅಥವಾ ಪ್ರಯತ್ನವೆಲ್ಲ ವ್ಯಂಗ್ಯಾರ್ಥ ಸಾಧನೆಯ ಕಡೆಗೇ ಇರುವುದೆಂದು ತೋರಿಸಿದಂತಾಯಿತು.

ಸಹೃದಯನಿಗೂ ಇದೇ ಬಗೆಯ ಪ್ರಯತ್ನವಿರುವುದನ್ನು ತೋರಿಸಲು ಹೇಳುತ್ತಾನೆ—

ಕಾರಿಕೆ

ಯಥಾ ಪದಾರ್ಥದ್ವಾರೇಣ ವಾಕ್ಯಾರ್ಥಃ ಸಂಪ್ರತೀಯತೇ |
ವಾಚ್ಯಾರ್ಥಪೂರ್ವಿಕಾ ತದ್ವತ್ ಪ್ರತಿಪತ್ತಸ್ಯ[73] ವಸ್ತುನಃ || ೧೦ ||

---

ಆದ್ದರಿಂದ ಉಪಾಯಗಳು ಅಪ್ರಧಾನವೆಂದೇ ಆಗುತ್ತದೆ ಅವನ್ನು ಪ್ರಧಾನವೆನ್ನುವುದು 'ವಿರುದ್ಧ' ವೆಂಬ ಹೇತ್ವಾಭಾಸ (Fallacy)—ಲೋ.

72 'ಆಲೋಕ'ವೆಂದರೆ ಇಲ್ಲಿ 'ಆಲೋಕನ' ಎಂದರ್ಥ ಪ್ರೇಯಸಿಯ ಮುಖಕಮಲವನ್ನು ನೋಡುವ ಮುಖ್ಯ ಅಭೀಪ್ಸೆಯಿದ್ದರೂ ಅದಕ್ಕೆ ದೀವಿಗೆಯು ಸಾಧನವಾಗುವಂತೆ—ಲೋ.

73 ಪ್ರತಿಪತ್=ಪ್ರತೀತಿ (ಭಾವನಾಮ) ತಸ್ಯ ವಸ್ತುನಃ=ಆ ವ್ಯಂಗ್ಯವೆಂಬ ಸಾರರೂಪ ಅರ್ಥದ—ಲೋ. ಯಾರು ಪೂರ್ಣ ಸಹೃದಯನಲ್ಲವೋ ಅವನಿಗೆ ಮಾತ್ರ ವಾಚ್ಯಾರ್ಥ-ವ್ಯಂಗ್ಯಾರ್ಥಗಳ ನಡುವೆ ಕ್ರಮ ಅನುಭವಕ್ಕೆ ಬರುವುದು, ಪೂರ್ಣ ಭಾಷಾಜ್ಞಾನವಿಲ್ಲದ ಅಭ್ಯಾಸಿಗೆ ಪದಾರ್ಥ-ವಾಕ್ಯಾರ್ಥಗಳ ನಡುವೆ ಕ್ರಮ ಗೋಚರವಾಗುವಂತೆ. ಸಹೃದಯತೆಯ ಪರಾಕಾಷ್ಠೆ

ಪದಗಳ ಅರ್ಥದ ಮುಖಾಂತರವಾಗಿಯೇ ವಾಕ್ಯದ ಅರ್ಥವು ಹೇಗೆ ಗೊತ್ತಾಗುವುದೋ ಹಾಗೆ, ವಾಚ್ಯಾರ್ಥದ ಮೂಲಕವಾಗಿಯೇ ಆ ವ್ಯಂಗ್ಯಾರ್ಥವು ಗೊತ್ತಾಗುತ್ತದೆ.

ವೃತ್ತಿ

ಪದಗಳ ಅರ್ಥಜ್ಞಾನದ ಮೂಲಕವೇ ವಾಕ್ಯದ ತಾತ್ಪರ್ಯವು ಹೇಗೆ ತಿಳಿಯುವುದೋ, ಹಾಗೆಯೇ ವಾಚ್ಯವಾದ ಅರ್ಥದ ಅನುಸಂಧಾನಪೂರ್ವಕವಾಗಿಯೇ ವ್ಯಂಗ್ಯಾರ್ಥವು ಪ್ರತೀತವಾಗುವುದೆಂದು ಅಭಿಪ್ರಾಯ.

ಹೀಗೆ ವ್ಯಂಗ್ಯಾರ್ಥದ ಪ್ರತೀತಿಯು ವಾಚ್ಯಾರ್ಥಪ್ರತೀತಿಪೂರ್ವಕವೇ ಆಗಿದ್ದರೂ ಕೂಡ ವ್ಯಂಗ್ಯಾರ್ಥದ ಪ್ರಾಧಾನ್ಯವು ಸ್ವಲ್ಪವೂ ಕಡಿಮೆಯಾಗುವುದಿಲ್ಲ[74]ವೆಂದು ಕೆಳಗಿನ ಕಾರಿಕೆಯಲ್ಲಿ ತೋರಿಸುತ್ತಾನೆ—

ಕಾರಿಕೆ

ಸ್ವಸಾಮರ್ಥ್ಯವಶೇನೈವ ವಾಕ್ಯಾರ್ಥಂ ಪ್ರತಿಪಾದಯನ್ ।
ಯಥಾ ವ್ಯಾಪಾರನಿಷ್ಪತ್ತೌ ಪದಾರ್ಥೋ ನ ವಿಭಾವ್ಯತೇ ॥ ೧೧ ॥

ಪದಗಳ ಅರ್ಥವು ತನ್ನ ಸಾಮರ್ಥ್ಯದ[75] ಪ್ರಭಾವದಿಂದಲೇ ವಾಕ್ಯಾರ್ಥವನ್ನು ಬೋಧಿಸುತ್ತಿದ್ದರೂ, (ವಾಕ್ಯಾರ್ಥಬೋಧನವೆಂಬ) ತನ್ನ ಕೆಲಸವು ನೆರವೇರಿದ ಕಾಲದಲ್ಲಿ ಹೇಗೆ ತಾನು ಬೇರೆಯಾಗಿ ಗೋಚರವಾಗುವುದಿಲ್ಲವೋ—

ವೃತ್ತಿ

ತನ್ನ ಸಾಮರ್ಥ್ಯ ಬಲದಿಂದಲೇ ಪದಗಳ ಅರ್ಥವು ವಾಕ್ಯದ ಅರ್ಥವನ್ನು ಪ್ರಕಾಶಿಸುವುದಾದರೂ ವಾಕ್ಯದ ತಾತ್ಪರ್ಯವು ಪ್ರತೀತವಾಗುವ ಕಾಲದಲ್ಲಿ ಪದಗಳ ಅರ್ಥವು ಹೇಗೆ ಬೇರೆಯಾಗಿ ಲಕ್ಷ್ಯಕ್ಕೆ ಬರುವುದಿಲ್ಲವೋ—

---

ಯನ್ನು ಮುಟ್ಟಿದವನಿಗೆ ಅಭ್ಯಾಸಬಲದಿಂದ, ಅನುಮಾನ ಕಾಲದಲ್ಲಿ ವ್ಯಾಪ್ತಿಸ್ಮರಣೆ ಹೇಗೋ ಹಾಗೆ, ಅಥವಾ ಭಾಷಾ ಪಂಡಿತನಿಗೆ ಪದ-ವಾಕ್ಯಗಳ ತಾತ್ಪರ್ಯ ಏಕಕಾಲದಲ್ಲಿ ಸ್ಫುರಿಸುವ ಹಾಗೆ, ಕ್ರಮಪ್ರತೀತಿಯಿಲ್ಲದೆಯೇ ವ್ಯಂಗ್ಯಾರ್ಥದ ಅನುಭವವುಂಟಾಗುವುದು—ಲೋ.

74 ವ್ಯಂಗ್ಯಕ್ಕೆ ಪ್ರಾಧಾನ್ಯವಿರುವ ಕಾರಣದಿಂದಲೇ ಸಹೃದಯರಿಗೆ ಅದನ್ನು ಗ್ರಹಿಸುವ ಆತುರ, ಸಡಗರ. ನಡುವೆ ಎಲ್ಲೂ ಅವರ ಪ್ರವೃತ್ತಿಗೆ ವಿಶ್ರಾಂತಿಯಿರುವುದಿಲ್ಲ. ಹೀಗೆ ಕ್ರಮವಿದ್ದರೂ ಸಹ ಅದರ ಅರಿವಿಲ್ಲದಿರುವುದರಿಂದ ಪ್ರಾಧಾನ್ಯಕ್ಕೆ ಚ್ಯುತಿಯಿಲ್ಲ—ಲೋ

75 ಸಾಮರ್ಥ್ಯ= 'ಆಕಾಂಕ್ಷೆ,' 'ಯೋಗ್ಯತೆ' ಮತ್ತು 'ಸನ್ನಿಧಿ'ಗಳು. ವಾಕ್ಯಾರ್ಥಕ್ಕೆ ಅಗತ್ಯವಾದ ಸಾಮಗ್ರಿಯಲ್ಲಿ ಇವು ಸೇರುತ್ತವೆ.

ಕಾರಿಕೆ

ತದ್ವತ್ ಸಚೇತಸಾಂ ಸೋಽರ್ಥೋ ವಾಚ್ಯಾರ್ಥವಿಮುಖಾತ್ಮನಾಮ್ ।
ಬುದ್ಧೌ ತತ್ತ್ವಾರ್ಥದರ್ಶಿನ್ಯಾಂ ಝಟಿತ್ಯೇವಾವಭಾಸತೇ ॥ ೧೨ ॥

ಹಾಗೆಯೇ ವಾಚ್ಯಾರ್ಥದಲ್ಲಿ ವಿಮುಖರಾದ[76] ಸಹೃದಯರ ತತ್ತ್ವಾರ್ಥದರ್ಶಿಯಾದ ಬುದ್ಧಿಯಲ್ಲಿ, ಆ ವ್ಯಂಗ್ಯಾರ್ಥವು ಛಟ್ಟನೆ ಹೊಳೆಯುತ್ತದೆ.

ವೃತ್ತಿ

ಈ ರೀತಿ ವಾಚ್ಯಕ್ಕಿಂತ ಬೇರೆಯಾದ ವ್ಯಂಗ್ಯಾರ್ಥದ ಸದ್ಭಾವವನ್ನು[77] ಇಲ್ಲಿಯವರೆಗೂ ಸಾಧಿಸಲಾಯಿತು; ಈಗ ಪ್ರಕೃತಕ್ಕೆ[78] ಅದನ್ನು ಉಪಯೋಗಿಸಿಕೊಂಡು ಮುಂದಿನ ಕಾರಿಕೆಯನ್ನು ಹೇಳುತ್ತಾನೆ—

ಕಾರಿಕೆ

ಯತ್ರಾರ್ಥಃ ಶಬ್ದೋ ವಾ
ತಮರ್ಥಮುಪಸರ್ಜನೀಕೃತಸ್ವಾರ್ಥೌ ।
ವ್ಯಙ್ಕ್ತಃ[79] ಕಾವ್ಯವಿಶೇಷಃ
ಸ ಧ್ವನಿರಿತಿ ಸೂರಿಭಿಃ ಕಥಿತಃ ॥ ೧೩ ॥

---

76 ವಿಮುಖರಾದ=ವಿಶ್ರಾಂತಿಯನ್ನು ಪಡೆಯದ, ಪರಿತೋಷವನ್ನು ಪಡೆಯದ ಕಾರಿಕೆಯಲ್ಲಿ 'ಆತ್ಮಾ'=ಹೃದಯ ಇದು ಸಹೃದಯರ ಮಹಿಮೆಯೇ ಇರಬಹುದಲ್ಲ, ಕಾವ್ಯದ ವೈಶಿಷ್ಟ್ಯವೆಂದೇಕೆ ತಿಳಿಯಬೇಕೆಂದರೆ-ಛಟ್ಟನೆ ಹೊಳೆಯುತ್ತದೆನ್ನುವುದು ಉತ್ತರ ವ್ಯಂಗ್ಯಾರ್ಥವು ವಾಚ್ಯಾರ್ಥದೊಡನೆ ಕೂಡಿಯೇ ಅನುಭವಕ್ಕೆ ಬರುತ್ತದೆ. ಆದುದರಿಂದಲೇ ಮೂರನೆಯ ಉದ್ದ್ಯೋತದಲ್ಲಿ ಇವಕ್ಕೆ 'ಘಟ-ಪ್ರದೀಪ' ದೃಷ್ಟಾಂತ ಹೇಳಿ ವ್ಯಂಗ್ಯಪರಾಮರ್ಶಕಾಲದಲ್ಲಿ ವಾಚ್ಯಬುದ್ಧಿಯು ದೂರೀಭೂತವಾಗುವುದಿಲ್ಲವೆಂದಿರುವುದು ಸಮಂಜಸವಾಗುತ್ತದೆ. ಹೀಗೆ ಅರ್ಥಮಾಡಿಕೊಳ್ಳದಿದ್ದರೆ ಎರಡು ಹೇಳಿಕೆಗಳಿಗೂ ವಿರೋಧ ತಪ್ಪದು—ಲೋ

77 ಸದ್ಭಾವ=ಅಸ್ತಿತ್ವ, ಶೋಭನತ್ವ ಮತ್ತು ಪ್ರಾಧಾನ್ಯ ಕಡೆಯ ಎರಡರ್ಥಗಳೂ ಗ್ರಂಥಕಾರನಿಗೆ ಇಲ್ಲಿ ವಿವಕ್ಷಿತ

78 ಪ್ರಕೃತ=ಧ್ವನಿಯ ಲಕ್ಷಣ (Definition).

79 ದ್ವಿವಚನಕ್ಕೆ ಸಾರ್ಥಕ್ಯ ಹೀಗೆ-'ಅವಿವಕ್ಷಿತವಾಚ್ಯಧ್ವನಿ' (=ಲಕ್ಷಣಾಮೂಲ ಧ್ವನಿ) ಯಲ್ಲಿ 'ಶಬ್ದ' ವ್ಯಂಜಕವಾದರೂ 'ಅರ್ಥ'ಕ್ಕೆ ಸಹಕಾರಿತ್ವವುಂಟು. ಹಾಗೆಯೇ 'ವಿವಕ್ಷಿತಾನ್ಯಪರವಾಚ್ಯ' (=ಅಭಿಧಾಮೂಲ) ಧ್ವನಿಯಲ್ಲಿ ಅರ್ಥ ಮುಖ್ಯವಾಗಿ ವ್ಯಂಜಕವಾದರೂ ಶಬ್ದದ ಸಹಕಾರಿತ್ವ ತಪ್ಪದು. ಹೀಗೆ ಸರ್ವತ್ರ ಶಬ್ದಾರ್ಥಗಳೆರಡರಲ್ಲೂ ಧ್ವನನವ್ಯಾಪಾರವಿದ್ದೇ ಇರುತ್ತದೆ. ಭಟ್ಟನಾಯಕನು ದ್ವಿವಚನವನ್ನು ದೂಷಿಸಿರುವುದು ನಿರರ್ಥಕ—ಲೋ. ಮಹಿಮಭಟ್ಟನಿಗೆ ಅಭಿನವಗುಪ್ತರ ಈ ಉತ್ತರ ತೃಪ್ತಿಕರವೆನಿಸಿಲ್ಲ. (ವ್ಯಕ್ತಿವಿವೇಕ)

ಎಲ್ಲಿ 'ಅರ್ಥ'ವಾಗಲಿ ಅಥವಾ 'ಶಬ್ದ'ವಾಗಲಿ, (ಅನುಕ್ರಮವಾಗಿ) ತನ್ನನ್ನು ಅಥವಾ ತನ್ನ ಅರ್ಥವನ್ನು ಅಪ್ರಧಾನವಾಗಿಸಿಕೊಂಡು, ಆ ವ್ಯಂಗ್ಯಾರ್ಥವನ್ನು ಸೂಚಿಸುವುವೋ—ಆ ಕಾವ್ಯ ವಿಶೇಷವನ್ನು ಪಂಡಿತರು 'ಧ್ವನಿ'ಯೆಂದು ಕರೆದಿದ್ದಾರೆ.

ವೃತ್ತಿ

ಎಲ್ಲಿ 'ಅರ್ಥ' ಎಂದರೆ ವಿಶಿಷ್ಟವಾದ ವಾಚ್ಯವೂ 'ಶಬ್ದ' ಎಂದರೆ ವಿಶಿಷ್ಟವಾದ ವಾಚಕವೂ ಆ ವ್ಯಂಗ್ಯಾರ್ಥವನ್ನು ಸೂಚಿಸುತ್ತಿರುವುವೋ ಆ ಕಾವ್ಯವಿಶೇಷವೇ[80] ಧ್ವನಿಯೆಂದರ್ಥ. ಇದರಿಂದ ವಾಚ್ಯಾಂಶದ ಸೌಂದರ್ಯಕ್ಕೆ ಕಾರಣಗಳಾದ 'ಉಪಮಾ'ದಿಗಳಿಗೂ, ವಾಚಕಾಂಶದ ಸೌಂದರ್ಯಕ್ಕೆ ಕಾರಣಗಳಾದ 'ಅನುಪ್ರಾಸಾ'ದಿಗಳಿಗೂ, 'ಧ್ವನಿ'ಗೂ, ಸ್ಪಷ್ಟವಾದ ವಿಷಯಭೇದವಿದೆಯೆಂದು[81] ತೋರಿಸಿದಂತಾಯಿತು.

"ಧ್ವನಿಯು ಇಲ್ಲವೇ ಇಲ್ಲ; ಸುಪ್ರಸಿದ್ಧವಾದ ಸಿದ್ಧಾಂತಗಳಿಗೆಲ್ಲ ವಿರುದ್ಧವಾದ ಒಂದು ಕಾವ್ಯ ಪ್ರಕಾರಕ್ಕೆ ಕಾವ್ಯತ್ವವೇ ಇಲ್ಲವಾಗುತ್ತದೆ" ಎಂದು ಹಿಂದೆ ಪೂರ್ವಪಕ್ಷದವರು ಹೇಳಿರುವುದು ಅಯುಕ್ತ. ಏಕೆಂದರೆ, 'ಧ್ವನಿ'ಯು ಲಕ್ಷಣಕಾರರಿಗೆ

---

೮೦ ='ಕಾವ್ಯ [ಶರೀರವೂ] ಮತ್ತು ಅದರ ವಿಶೇಷವೂ ಸೇರಿದ್ದು' ಅಥವಾ 'ಕಾವ್ಯದ ವಿಶೇಷ' 'ವಿಶೇಷ'ವೆಂದರೆ ಇಲ್ಲಿ ಆತ್ಮವೆಂದಭಿಪ್ರಾಯ [ಕೌಮುದಿ] 'ಕಾವ್ಯ'ವೆಂದರೆ ಗುಣಾಲಂಕಾರಗಳಿಂದ ಶೋಭಿತವಾದ ಶಬ್ದಾರ್ಥ, ಅದರ 'ವಿಶೇಷ'ವೆಂದರೆ ಅಂತಹ ಶಬ್ದಾರ್ಥಗಳ ಬೆಂಬಳಿಯಲ್ಲಿರುವ 'ಧ್ವನಿ'ಯೆನಿಸುವ ಆತ್ಮ 'ಶ್ರುತಾರ್ಥಾಪತ್ತಿ' [ಉದಾ—'ದೇವದತ್ತ ದಪ್ಪವಾಗಿದ್ದಾನೆ, ಹಗಲು ಉಣ್ಣುವುದೇ ಇಲ್ಲ'; 'ಹಾಗಾದರೆ ರಾತ್ರಿ ರಸಗವಳವನ್ನು ಉಣ್ಣುತ್ತಾನೆ' ಎಂಬ ಊಹೆ] ಮುಂತಾದುವುಗಳಲ್ಲಿ ಈ ಸುಂದರ ಶರೀರ—ಆತ್ಮಗಳ ಬೆಸುಗೆಯಿಲ್ಲದಿರುವುದರಿಂದ 'ಧ್ವನಿ'ಯಿಲ್ಲ 'ಹಾಗಾದರೆ ಸೌಂದರ್ಯಪ್ರತೀತಿಯೇ ಕಾವ್ಯದ ಆತ್ಮವಾಗಬಹುದಲ್ಲ!' ಎಂದರೆ ಅದು ನಮಗೆ ಒಪ್ಪಿಗೆಯೇ. ಹೆಸರಿನಲ್ಲಿ ಮಾತ್ರ ವಿವಾದ ಹೊರತು, ಬೇರೆ ಇಲ್ಲ 'ಹಾಗಾದರೆ ಸುಂದರ ವಸ್ತುಗಳ ಪ್ರತ್ಯಕ್ಷಜ್ಞಾನದಿಂದಲೂ 'ಕಾವ್ಯಾತ್ಮ' ಸಿದ್ಧಿಸಬಹುದಲ್ಲವೆ?' ಎಂಬ ಪ್ರಶ್ನೆಯೇ ಅಪ್ರಾಸಂಗಿಕ. ಚರ್ಚೆ ಮಾಡುತ್ತಿರುವುದು ಕಣ್ಣಿಗೆ ಕಾಣುವ ಲೌಕಿಕ ಸೌಂದರ್ಯದ ಪ್ರತೀತಿಯನ್ನಲ್ಲ; ಶಬ್ದಾರ್ಥಮಯವಾದ ಕಾವ್ಯದ ಸೌಂದರ್ಯಬೋಧೆಯನ್ನು ಮಾತ್ರ, ಕಾರಿಕೆಯಲ್ಲಿ ವ್ಯಂಜಕ ಶಬ್ದ, ವ್ಯಂಜಕ ಅರ್ಥ, ವ್ಯಂಜನಾ-ವ್ಯಾಪಾರ ಇವುಗಳೆಲ್ಲವುಗಳ ಸಮುದಾಯರೂಪವಾದ 'ಕಾವ್ಯ'ವನ್ನೇ ಮುಖ್ಯವಾಗಿ "ಧ್ವನಿ"ಯೆನ್ನಲಾಗಿದೆ—ಲೋ.

೮೧ ಏಕೆಂದರೆ 'ಗುಣಾಲಂಕಾರ'ಗಳ ವ್ಯವಸ್ಥೆಗೆ ಮೂಲ—ವಾಚ್ಯವಾಚಕಭಾವ, 'ಧ್ವನಿ'ಯ ವ್ಯವಹಾರಕ್ಕೆ ಮೂಲವೆಂದರೆ ತದ್ಭಿನ್ನವಾದ ವ್ಯಂಗ್ಯ-ವ್ಯಂಜಕಭಾವ. ಹೀಗೆ, 'ಗುಣಾಲಂಕಾರ' ವ್ಯತಿರಿಕ್ತವಾದ 'ಧ್ವನಿ'ಯೆಂಬುದು ಯಾವದು? ಎಂಬ ಪಕ್ಷ ನಿರಾಕೃತವಾದಂತಾಯಿತು—ಲೋ.

ಮಾತ್ರ[82] ಅಪರಿಚಿತವೆನ್ನಬಹುದೇ ಹೊರತು, ಲಕ್ಷ್ಯವನ್ನು ಪರೀಕ್ಷೆ ಮಾಡಿದರೆ[83] ಅದೊಂದೇ ಸಹೃದಯರ ಹೃದಯಾಹ್ಲಾದಕಾರಿಯಾದ ಕಾವ್ಯತತ್ತ್ವವೆನ್ನುವುದು ಸ್ಪಷ್ಟವಾಗುತ್ತದೆ. ಮಿಕ್ಕುದೆಲ್ಲವೂ 'ಚಿತ್ರ'ವೆಂದೇ[84] ಮುಂದೆ[85] ಪ್ರತಿಪಾದಿಸಲಾಗುತ್ತದೆ.

"ಕಾವ್ಯದಲ್ಲಿ ಸೌಂದರ್ಯಕಾರಣವೆಂದು ಅದನ್ನು (='ಧ್ವನಿ'ಯನ್ನು) ಒಪ್ಪಿದೊಡನೆಯೇ, ಎಂದಿನಿಂದಲೂ ಪ್ರಸಿದ್ಧವಾಗಿರುವ ಅಲಂಕಾರವೇ ಮೊದಲಾದ ಪ್ರಕಾರಗಳಲ್ಲಿ ಅದು ಅಂತರ್ಭಾವ ಹೊಂದಿಬಿಡುತ್ತದೆ" ಎಂಬ ಪೂರ್ವಪಕ್ಷವೂ ಕೂಡ ಸರಿಯಾದುದಲ್ಲ. ಏಕೆಂದರೆ, ವಾಚ್ಯ–ವಾಚಕಗಳ ಸ್ವರೂಪವನ್ನು ಮಾತ್ರ ಕುರಿತು ಹೊರಟ ಪ್ರಸ್ಥಾನದಲ್ಲಿ, ವ್ಯಂಗ್ಯ–ವ್ಯಂಜಕಗಳನ್ನು ಆಶ್ರಯಿಸಿ ವ್ಯವಸ್ಥೆ ಮಾಡಲ್ಪಟ್ಟ 'ಧ್ವನಿ'ಯ ಅಂತರ್ಭಾವವನ್ನು ಹೇಳುವುದೆಂತು ? ವಾಚ್ಯ–ವಾಚಕಗಳ ಸೌಂದರ್ಯಕ್ಕೆ ಕಾರಣವಾದುವುಗಳೆಲ್ಲವೂ ಆ 'ಧ್ವನಿ'ಗೆ ಅಂಗಗಳೆಂದು ಭಾವಿಸಬೇಕು ; ಅವು ಮತ್ತು 'ಧ್ವನಿ'ಯು ಎಂದಿಗೂ ಒಂದೇ ಆಗಲಾರವು. ಈ ಅಂಶವನ್ನು ಮುಂದೆಯೂ ವಿವರಿಸಲಾಗುತ್ತದೆ.

ಇದನ್ನು ಸಂಗ್ರಹಿಸಿರುವ **ಪರಿಕರಶ್ಲೋಕ**[86] ಕೆಳಗಿನದು :—

**ವ್ಯಂಗ್ಯವ್ಯಂಜಕಸಂಬಂಧನಿಬಂಧನತಯಾ ಧ್ವನೇಃ ।**
**ವಾಚ್ಯವಾಚಕಚಾರುತ್ವಹೇತ್ವನ್ತಃಪಾತಿತಾ ಕುತಃ ॥**

---

೮೨ ಆದ್ದರಿಂದಲೇ ಪ್ರಯತ್ನಪೂರ್ವಕವಾಗಿಯಾದರೂ ಈಗ ಲಕ್ಷಣ ಹೇಳುವ ಕರ್ತವ್ಯವುಂಟೆಂದು ಹೇಳಿದಂತಾಯಿತು ಪೂರ್ವಪಕ್ಷಿಗಳ ವಾದದಲ್ಲಿ 'ವಿರುದ್ಧ'ವೆಂಬ ತರ್ಕ ದೋಷ ಬರುತ್ತದೆ—ಲೋ.

೮೩ ಲಕ್ಷ್ಯದಲ್ಲಿ ಅಪ್ರಸಿದ್ಧವೆಂಬ ವಾದದಲ್ಲಿ 'ಅಸಿದ್ಧ'ವೆಂಬ ತರ್ಕದೋಷ; ಧ್ವನಿ ಲಕ್ಷ್ಯಗಳಲ್ಲಿ ಸುಪ್ರಸಿದ್ಧವಾಗಿರುವುದರಿಂದ. ನೃತ್ಯ, ಗೀತ, ಹಾಸ್ಯ, ಮುಂತಾದುವೇನೂ ಕಾವ್ಯಕಕ್ಷ್ಯೆಯಲ್ಲಿ ಬಾರವು , ಆದ್ದರಿಂದ ಪೂರ್ವಪಕ್ಷಿಗಳ ಆರೋಪ ಅಪ್ರಸಕ್ತ—ಲೋ.

೮೪ ವಿಸ್ಮಯಕರವಾದ ವೃತ್ತಗಳು, [=ಪದ್ಮ, ಖಡ್ಗಾದಿ ಆಕೃತಿಯ ಚಿತ್ರಬಂಧಗಳು], ಇತ್ಯಾದಿಗಳಿಂದ ಚಮತ್ಕಾರವನ್ನು ಪಡೆದಿದ್ದರೂ, ಪ್ರಾಣಭೂತವಾದ, ಸಹೃದಯಪ್ರಿಯವಾದ ಚಮತ್ಕಾರಸಾರವೆನಿಸುವ ರಸನಿಷ್ಯಂದವಿಲ್ಲದಿರುವದು-"ಚಿತ್ರ" ಕಾವ್ಯ; ಚಿತ್ರಪಟವನ್ನು ಹೋಲುವುದರಿಂದ, ಅಥವಾ ಚಿತ್ರರೇಖಾ ನಿರ್ಮಿತವಾದ್ದರಿಂದ, ಅಥವಾ ಕಲಾಮಾತ್ರವಾದ್ದರಿಂದ 'ಚಿತ್ರ'ವೆಂಬ ಹೆಸರು ಅನ್ವರ್ಥಕ—ಲೋ.

೮೫ ಮೂರನೆಯ ಉದ್ಯೋತದಲ್ಲಿ.

೮೬ ಕಾರಿಕೆಯಲ್ಲಿ ಹೇಳಿದ ವಿಷಯಕ್ಕೆ ಹೆಚ್ಚಿನ ಪರಿಷ್ಕಾರವನ್ನೊದಗಿಸುವ ಶ್ಲೋಕವೇ ಪರಿಕರಶ್ಲೋಕ—ಲೋ.

ವ್ಯಂಗ್ಯ-ವ್ಯಂಜಕವೆಂಬ ಸಂಬಂಧವೊಂದನ್ನೇ ಆಧಾರವಾಗಿಟ್ಟುಕೊಂಡು ಹೊರಡುವ ಧ್ವನಿಗೆ ವಾಚ್ಯ-ವಾಚಕಗಳ ಸೌಂದರ್ಯಕಾರಣಗಳಲ್ಲಿ ಅಂತರ್ಭಾವವೆಲ್ಲಿಂದ ಬಂದೀತು ?

ಪೂರ್ವಪಕ್ಷಕಾರನು ಹೀಗೂ ವಾದಿಸಬಹುದು :—'ಎಲ್ಲಿ ಪ್ರತೀಯಮಾನವಾದ ಅರ್ಥವು ವಿಶದವಾಗಿ[87] ಪ್ರತೀತವಾಗುವುದಿಲ್ಲವೋ, ಆ ಲಕ್ಷ್ಯಗಳು ಮಾತ್ರ 'ಧ್ವನಿ'ಗೆ ವಿಷಯಗಳಲ್ಲವೆಂದು ಬೇಕಾದರೆ ಒಪ್ಪೋಣ. ಆದರೆ ಎಲ್ಲಿ ಪ್ರತೀಯಮಾನಾರ್ಥದ ಪ್ರತೀತಿಯಿದೆಯೋ—ಉದಾಹರಣೆಗೆ 'ಸಮಾಸೋಕ್ತಿ,' 'ಆಕ್ಷೇಪ,' 'ಅನುಕ್ತ-ನಿಮಿತ್ತ-ವಿಶೇಷೋಕ್ತಿ,' 'ಪರ್ಯಾಯೋಕ್ತ,' 'ಅಪಹ್ನುತಿ,' 'ದೀಪಕ,' 'ಸಂಕರ,' ಮೊದಲಾದ ಅಲಂಕಾರಗಳು—ಅಲ್ಲೆಲ್ಲ 'ಧ್ವನಿ'ಯು ಅಂತರ್ಭಾವ ಹೊಂದಿಯೇ ಹೊಂದುವುದು' ಎಂದು. ಇಂತಹ ಪೂರ್ವಪಕ್ಷಗಳನ್ನು ನಿರಾಕರಿಸುವುದಕ್ಕಾಗಿಯೇ ಕಾರಿಕೆಯಲ್ಲಿ 'ತನ್ನನ್ನು ಅಥವಾ ತನ್ನ ಅರ್ಥವನ್ನು ಅಪ್ರಧಾನವಾಗಿಸಿಕೊಂಡು' ಎಂಬ ವಿಶೇಷಣವನ್ನು ಸೇರಿಸಿದೆ.[88] ವಾಚ್ಯಾರ್ಥವು ತನ್ನನ್ನೇ ಅಪ್ರಧಾನ ಮಾಡಿಕೊಳ್ಳುತ್ತದೆ; ಶಬ್ದವು ತನ್ನ ವಾಚ್ಯಾರ್ಥವನ್ನು ಅಪ್ರಧಾನ ಮಾಡಿಕೊಳ್ಳುತ್ತದೆ. ಇಂತಹ ಶಬ್ದವಾಗಲಿ ಅಥವಾ ಅರ್ಥವಾಗಲಿ ಎಲ್ಲಿ ಹೊಸದೊಂದರ್ಥವನ್ನು ಅಭಿವ್ಯಕ್ತಗೊಳಿಸುವುವೋ ಅದು 'ಧ್ವನಿ'ಯೆಂದು ಅಭಿಪ್ರಾಯ. ಹೀಗಿರುವ 'ಧ್ವನಿ'ಯು ಮೇಲೆ ಹೇಳಲಾದ ಅಲಂಕಾರಗಳಲ್ಲಿ ಅಂತರ್ಭಾವ ಹೊಂದುವುದೆಂತು ? ವ್ಯಂಗ್ಯವು ಪ್ರಧಾನವಾಗಿದ್ದರಲ್ಲವೆ ನಾವು 'ಧ್ವನಿ'ಯೆನ್ನುವುದು ? 'ಸಮಾಸೋಕ್ತಿ' ಮೊದಲಾದುವುಗಳಲ್ಲಿ ಹೀಗಿಲ್ಲ (ಎಂದರೆ ವ್ಯಂಗ್ಯವು ಪ್ರಧಾನವಾಗಿಲ್ಲ).[89] **'ಸಮಾಸೋಕ್ತಿ'**[90]ಯಲ್ಲಾದರೋ—

---

[87] ಎಂದರೆ 'ಸ್ಫುಟವಾಗಿ'

[88] ೧೩ನೆಯ ಕಾರಿಕೆಯಲ್ಲಿ

[89] ಯದ್ಯಪಿ, ಮೊದಲು ಹೇಳಿದಂತೆ ಕಾವ್ಯಾನುಭೂತಿಯ ಕಾಲದಲ್ಲಿ ಅಖಂಡ ಚರ್ವಣೆಯೊಂದೇ ಇರುತ್ತದೆಯಾಗಿ ವ್ಯಂಗ್ಯಪ್ರಾಧಾನ್ಯ ಹಾಗೂ ವಾಚ್ಯದ ಅಪ್ರಾಧಾನ್ಯಗಳು ಸ್ಫುಟವಾಗಿ ತೋರುವುದಿಲ್ಲ. ಆದರೂ ವಿಮರ್ಶಕರು ಕಾವ್ಯದ ಜೀವಾಳವನ್ನು ವಿವೇಚಿಸುವಾಗ, ವ್ಯಂಗ್ಯಾರ್ಥವು ತಿರುಗಿಯೂ ವಾಚ್ಯಾರ್ಥವನ್ನೇ ಪೋಷಿಸುತ್ತಿರುವಂತೆ ಎಂದರೆ ಅದರ ಉಪಕರಣವಾಗಿ ಭಾಸವಾಗಬಹುದು. ಆಗ ವ್ಯಂಗ್ಯಾರ್ಥವು 'ಅಲಂಕಾರ'ವೆಂದೇ ಎನಿಸುವದು. ಏಕೆಂದರೆ ಅದರಿಂದ ಅಲಂಕೃತವಾದ ವಾಚ್ಯಾರ್ಥವೇ ಚಮತ್ಕಾರಪೂರ್ಣವಾಗಿ ತೋರುವದು. ಯದ್ಯಪಿ, ಪರ್ಯವಸಾನದಲ್ಲಿ ರಸಧ್ವನಿಯಿರುವುದೇ ಸಹಜ; ಆದರೂ ಮಧ್ಯಕಕ್ಷೆಯಲ್ಲಿ ನಿಲ್ಲುವ ಈ ವ್ಯಂಗ್ಯಾರ್ಥವು ಸ್ವತಂತ್ರವಾಗಿ ರಸೋನ್ಮುಖವಾಗದು; ವಾಚ್ಯಾರ್ಥವನ್ನು ಸುಂದರಗೊಳಿಸುವುದರ ಕಡೆಗೇ ಓಡುವುದು. ಆದ ಕಾರಣ ಇದನ್ನು 'ಗುಣೀಭೂತವ್ಯಂಗ್ಯ'ವೆನ್ನಲು ಬರುವದು.

[90] ಸಮಾಸೋಕ್ತಿ ಲಕ್ಷಣಕ್ಕೆ 'ಕನ್ನಡ ಕಾವ್ಯಾಲಂಕಾರ' ನೋಡಿ.

"ಉಪೋಢರಾಗೇಣ ವಿಲೋಲತಾರಕಂ
ತಥಾ ಗೃಹೀತಂ ಶಶಿನಾ ನಿಶಾಮುಖಂ।
ಯಥಾ ಸಮಸ್ತಂ ತಿಮಿರಾಂಶುಕಂ ತಯಾ
ಪುರೋಽಪಿ ರಾಗಾದ್ಗಲಿತಂ ನ ಲಕ್ಷಿತಂ॥ ೯೧

ರಜನೀಮುಖಮುಂ ಚಂದ್ರಂ
ನಿಜರಾಗಂ ಪೆರ್ಚೆ ಪಿಡಿಯೆ ಚಲತಾರಕಮಂ।
ಭುಜದಿಂ ತಿಮಿರಾಂಶುಕಮದು
ಜಗುಳ್ದಿರೆಯುಂ ಮುಂದೆ ರಜನಿ ಕಾಣದೆವೋದಳ್॥

ಎಂಬಿವೇ ಮೊದಲಾದ ಲಕ್ಷ್ಯಗಳನ್ನು ನೋಡಿದರೆ ವ್ಯಂಗ್ಯದಿಂದ ಪೋಷಿತವಾದ ವಾಚ್ಯವೇ ಪ್ರಾಧಾನ್ಯವನ್ನು ಹೊಂದಿದುವುದು ಗೊತ್ತಾಗುತ್ತದೆ. ನಾಯಿಕಾ–ನಾಯಕರ ವ್ಯವಹಾರವನ್ನು ಆರೋಪಿಸಲಾಗಿರುವ ರಜನೀ–ಚಂದ್ರರು ಇಲ್ಲಿ ಕವಿಯ ವರ್ಣನೆಗೆ ಪ್ರಸ್ತುತರಾಗಿರುವುದೇ ಅದಕ್ಕೆ ಕಾರಣ

---

೯೧ 'ರಾಗ'=ಸಂಧ್ಯಾರಾಗ ಮತ್ತು ಪ್ರೇಮ, 'ತಾರಕ'=ತಾರೆಗಳು ಮತ್ತು ಕಣ್ಣಿನಲ್ಲಿ ಹೊಳೆಯುವ ಭಾಗ 'ತಥಾ'=ತಟ್ಟನೆ ಮತ್ತು ಪ್ರೇಮರಭಸದಿಂದ. 'ಗೃಹೀತಂ'=ಬೆಳಗಿಸಲ್ಪಟ್ಟಿತು ಮತ್ತು ಚುಂಬಿಸಲ್ಪಟ್ಟಿತು 'ನಿಶಾಮುಖ'=ಸಂಜೆ ಮತ್ತು ಮುಖಕಮಲ 'ತಿಮಿರಾಂಶುಕ'=ಕತ್ತಲೆಯ ಮೊತ್ತ ಮತ್ತು ಕಪ್ಪುಸೀರೆ 'ರಾಗಾತ್'=ಕೆಂಬಣ್ಣದಿಂದ ಮತ್ತು ಪ್ರೇಮದ ದೆಸೆಯಿಂದ 'ಪುರೋಽಪಿ'=ಪೂರ್ವದಿಕ್ಕಿನಲ್ಲಿ ಮತ್ತು ಮುಂಗಡೆ. 'ಗಲಿತಂ'=ಹರಿದುದು ಮತ್ತು ಬಿದ್ದುದು

ನಾಯಕನು [ಅರ್ಥಾತ್ ಚಂದ್ರ] ಹಿಂದಿನಿಂದ ಬಂದು ಚುಂಬಿಸಿದಾಗ ನಾಯಕಿಯ [=ಅರ್ಥಾತ್ ರಾತ್ರಿಯ] ಮುಂದೆ ಕಪ್ಪುಸೀರೆ ಜಾರುತ್ತದೆ, ಎಂಬ ಅರ್ಥ ನಾಯಿಕೆಯ ಪಕ್ಷದಿಂದ ವಿಚಾರ ಮಾಡುವಾಗ ಹೊರಡುತ್ತದೆ. ರಾತ್ರಿ ಪರವಾದ ಅರ್ಥಮಾಡುವಾಗ 'ಪೂರ್ವದಿಕ್ಕಿನಲ್ಲಿ ರಾತ್ರಿಯ ಪ್ರಾರಂಭವಾದುದೇ [ಜನರಿಗೆ] ತಿಳಿಯಲಿಲ್ಲ, ಚಂದ್ರನ ಬೆಳಕಿನಿಂದ' ಎಂದಾಗುತ್ತದೆ ಇಲ್ಲಿ ವರ್ಣನೆಗೆ ವಿಷಯಗಳಾದ ಚಂದ್ರ-ರಾತ್ರಿಗಳಿಗೆ ನಾಯಿಕಾ-ನಾಯಕರ ವರ್ತನೆಯ ಆರೋಪ ಸ್ಪಷ್ಟ ಶೃಂಗಾರರಸಕ್ಕೆ ಆ ವರ್ತನೆ ವಿಭಾವವಾಗಬಹುದು; ಆದರೆ ಇಲ್ಲಿ ಅದು ಮುಖ್ಯವಲ್ಲ. ಮುಖ್ಯವಾದುದು ಪ್ರಕೃತವಾದ ಚಂದ್ರ-ರಾತ್ರಿಗಳೇ. ಹೀಗೆ ಇಲ್ಲಿ ವ್ಯಂಗ್ಯವಾದ ನಾಯಿಕಾ-ನಾಯಕರ ವ್ಯವಹಾರ [=Behaviour]ವು ಪ್ರಸ್ತುತಕ್ಕೆ (= ವಾಚ್ಯಾರ್ಥಕ್ಕೆ) ಪೋಷಕವಾಗಿರುವ ಕಾರಣ ಅಪ್ರಧಾನ; ಆದ್ದರಿಂದಲೇ ಇದು ಅಲಂಕಾರ. ವ್ಯಂಗ್ಯಾರ್ಥ ಪ್ರತೀತವಾಗುವ ಮೊದಲು ವಾಚ್ಯಾರ್ಥದಲ್ಲಿ ಶೃಂಗಾರರಸದ ವಿಭಾವತ್ವವಿಲ್ಲ. ವ್ಯಂಗ್ಯಾರ್ಥದ ಸಂಸ್ಕಾರದಿಂದ ವಾಚ್ಯಾರ್ಥಕ್ಕೆ ವಿಭಾವತ್ವ ಬಂದರೂ ಅದು ರಸನಿಷ್ಪತ್ತಿಗೆ ಸಾಲದು. [ಕೌಮುದಿ].

'ಆಕ್ಷೇಪ' ವೆಂಬ ಅಲಂಕಾರದಲ್ಲಿಯೂ೯೨ ಕೂಡ ವ್ಯಂಗ್ಯವಿಶೇಷವನ್ನು ಸೂಚಿಸುವಂತಹ 'ವಾಚ್ಯ'ವೇ ರಮಣೀಯವಾದುದು. 'ಆಕ್ಷೇಪ'ವೆಂಬ ಹೆಸರಿನ ಮೇಲಿಂದಲೇ ಅಲ್ಲಿ ವಾಚ್ಯಾರ್ಥ ಪ್ರಧಾನವೆಂಬುದು ತಿಳಿಯುತ್ತದೆ. ಅಲ್ಲಿ ವಿಶೇಷ ವನ್ನು ಸೂಚಿಸುವ ಇಚ್ಛೆಯಿಂದಲೇ ನಿಷೇಧರೂಪವಾದ ಅಂಶವು ಶಬ್ದತಃ ಹೇಳಲ್ಪ ಟ್ಟಿರುತ್ತದೆ; ಮತ್ತು ಅದೇ ಮುಖ್ಯವಾದ ಕಾವ್ಯಶರೀರ. ಅಥವಾ ಪ್ರಧಾನ ವಾಕ್ಯಾರ್ಥ. ಗೌಣವಾಗಿ ವ್ಯಂಗ್ಯವಿಶೇಷವು ಸೂಚಿತವಾಗುತ್ತದೆ, ಅಷ್ಟೆ. ವಾಚ್ಯ-ವ್ಯಂಗ್ಯಗಳಲ್ಲಿ ಯಾವುದು ಪ್ರಧಾನ, ಯಾವುದು ಅಪ್ರಧಾನ, ಎಂದು ನಿರ್ಣಯಿಸಬೇಕಾದರೆ ಯಾವುದರಲ್ಲಿ ರಮಣೀಯತೆಯ ಉತ್ಕರ್ಷವು ಹೆಚ್ಚಾಗಿದೆ ಎಂಬುದನ್ನೇ ಮೊದಲು ನಿರ್ಧರಿಸಬೇಕು. ಉದಾಹರಣೆ:—

ಅನುರಾಗವತೀ ಸಂಧ್ಯಾ ದಿವಸಸ್ತತ್ಪುರಸ್ಸರಃ।
ಅಹೋ ದೈವಗತಿಃ ಕೀದೃಕ್ತಥಾಪಿ ನ ಸಮಾಗಮಃ ॥"೯೩

ಸಂಧ್ಯೆಯನುರಾಗವತಿ, ದಿವಸ ತಾ ಮುಂಬರಿವ |
ದೈವಗತಿಯೆಂತಿಹುದು! ಸಂಗಮವೆ ಅವರ್ಗಿಲ್ಲ ||

ಇಲ್ಲಿ ವ್ಯಂಗ್ಯಪ್ರತೀತಿಯಿರುವುದಾದರೂ ರಮಣೀಯತೆಯ ಉತ್ಕರ್ಷವು ವಾಚ್ಯದಲ್ಲೇ ಆದಕಾರಣ, ವಾಚ್ಯವೇ ಪ್ರಧಾನವೆಂಬುದು ಕವಿಯ ವಿವಕ್ಷೆ.೯೪

೯೨ ಇದರ ವಿವರಣೆಗೆ 'ಕನ್ನಡ ಕಾವ್ಯಾಲಂಕಾರ'ವನ್ನು ನೋಡಿ

೯೩ ಆಪಾತತಃ ನೋಡಿದರೆ, ಇದು ಆಕ್ಷೇಪಾಲಂಕಾರಕ್ಕೆ ಉದಾಹರಣೆಯಿರಬೇಕೆನಿಸು ತ್ತದೆ ಆದರೆ ಇದು ಸಮಾಸೋಕ್ತಿಗೆ ಪ್ರಸಿದ್ಧ ಉದಾಹರಣೆಯೆಂದು ಲೋಚನಕಾರರ ಅಭಿ ಪ್ರಾಯ. ವಾಚ್ಯ-ವ್ಯಂಗ್ಯಗಳ ಪ್ರಾಧಾನ್ಯ-ಅಪ್ರಾಧಾನ್ಯ ವಿವೇಚನೆ 'ಆಕ್ಷೇಪ'ದಂತೆ 'ಸಮಾಸೋಕ್ತಿ'ಗೂ ಸಮಾನವಾದುದರಿಂದ ಈ ಪದ್ಯವನ್ನು ಉದಾಹರಿಸಲಾಗಿದೆಯೆಂದು ಅವರ ವ್ಯಾಖ್ಯಾನ. ಸಮಾಗಮಕ್ಕೆ ಸಕಲ ಸಾಮಗ್ರಿಗಳ ಸಹಾಯವಿದ್ದರೂ ದೈವಗತಿ ವಿಚಿತ್ರವಾದುದರಿಂದ ಸಮಾಗಮವಿಲ್ಲವೆಂಬುದು ವಾಚ್ಯಾರ್ಥ, ಮೀರಲಾರದಂತಿರುವ ಹಿರಿಯರ ಅಪ್ಪಣೆಯೇ ಮುಂತಾದ ಕಾರಣ ವ್ಯಂಗ್ಯ

೯೪ ಆದರೆ ಮೂಲದಲ್ಲಿ 'ಆಕ್ಷೇಪ'ಕ್ಕೆ ಬೇರೆ ಉದಾಹರಣೆಯೇ ಇಲ್ಲವಾದ್ದರಿಂದ ಇದನ್ನೇ ಹೇಗಾದರೂ ನಯನಮಾಡುವ ಉದ್ದೇಶದಿಂದಲೋ ಎಂಬಂತೆ ಅಭಿನವಗುಪ್ತರು "ವಾಮನನ ಪ್ರಕಾರ ಇದೇ 'ಆಕ್ಷೇಪ'ವಾಗುತ್ತದೆ; ಭಾಮಹನ ಅಭಿಪ್ರಾಯದಲ್ಲಿ 'ಸಮಾಸೋಕ್ತಿ' ಬೇಕೆಂದೇ ಬುದ್ಧಿಪೂರ್ವಕವಾಗಿ ಈ ಎರಡಕ್ಕೂ ಅನ್ವಯಿಸುವ ಒಂದೇ ಉದಾಹರಣೆಯನ್ನು ಗ್ರಂಥಕಾರನು ಕೊಟ್ಟಿದ್ದಾನೆ" ಎಂದು ಬರೆದು, ಪುನಃ, "ಇದು ಸಮಾಸೋಕ್ತಿಯಾಗಲಿ, ಆಕ್ಷೇಪವಾಗಲಿ, ನಮಗೆ ಅದರಿಂದೇನಾಗಬೇಕಾಗಿದೆ? ಸಮಾಸೋಕ್ತಿಯೇ ಮೊದಲಾದ ಎಲ್ಲ ಅಲಂಕಾರಗಳಲ್ಲೂ

ವ್ಯಂಗ್ಯವು ವಾಚ್ಯಕ್ಕೆ ಗುಣೀಭೂತವಾಗುತ್ತದೆಂಬ ತತ್ತ್ವವನ್ನು ಮಾತ್ರ ನಾವು ಸಾಧಿಸಬೇಕಾಗಿದೆ" ಎಂದು "ನಮ್ಮ ಗುರುಗಳು" ವಿವರಿಸಿದ್ದಾರೆ, ಎಂದು ಉಲ್ಲೇಖಿಸಿದ್ದಾರೆ.

ಈ ಪದ್ಯದಲ್ಲಿ ವಿಶೇಷೋಕ್ತಿ ಅಲಂಕಾರದ ಛಾಯೆಯೂ ಇಲ್ಲದಿಲ್ಲ ಆನಂದವರ್ಧನನು ಉದ್ಭಟನ ಅಲಂಕಾರ ಲಕ್ಷಣಗಳ ಭಾಮಹೋಕ್ತ ಕ್ರಮವನ್ನೇ ಅನುಸರಿಸುವುದನ್ನು ಲಕ್ಷಿಸಿದರೆ, ಇಲ್ಲಿಯವರೆಗೆ ವಾಮನನ ಮತವನ್ನು ಆಶ್ರಯಿಸುವುದು ಸ್ವಲ್ಪ ವಿಚಿತ್ರವಾಗಿ ತೋರುತ್ತದೆ. ಒಂದು ವೇಳೆ ಭಾಮಹನ ಆಕ್ಷೇಪಲಕ್ಷಣವನ್ನೇ ಈ ಪದ್ಯಕ್ಕೂ ಅನ್ವಯಿಸುವುದು ಸಾಧ್ಯವೆ? ಇದು ವಿದ್ವಾಂಸರು ವಿಮರ್ಶಿಸಬೇಕಾದ ಅಂಶ 'ವ್ಯಂಗ್ಯಾರ್ಥ'ವನ್ನು ಮನಸ್ಸಿನಲ್ಲಿಟ್ಟುಕೊಂಡು, ಅದರ ಪ್ರಕಟನೆಗೆ ನಿಷೇಧಾಭಾಸರೂಪವಾದ ವಾಕ್ಯವನ್ನು ಆಶ್ರಯಿಸುವುದು ಭಾಮಹಸಮ್ಮತವಾದ 'ಆಕ್ಷೇಪ.' ಲಕ್ಷ್ಯದಲ್ಲಿ ವ್ಯಂಗ್ಯಾರ್ಥವಿರುವುದು ಸರ್ವಸಮ್ಮತ. ವಾಕ್ಯದಲ್ಲಿ ನಿಷೇಧಾಭಾಸವುಂಟೇ ಇಲ್ಲವೆ, ಅಷ್ಟೇ ಪ್ರಶ್ನೆ. "ತಥಾಪಿ ನ ಸಮಾಗಮಃ" ಎಂಬಲ್ಲಿ ನಕಾರ ಗಮನಾರ್ಹ. ಪ್ರಸ್ತುತ ವರ್ಣನಾ ವಿಷಯಗಳು ಸಂಧ್ಯಾ ಮತ್ತು ದಿವಸವೇ ಹೊರತು ಅವರ 'ಸಮಾಗಮ'ವಲ್ಲ. ಎಂದ ಮೇಲೆ ಕವಿಯು 'ಸಮಾಗಮದ' ಎಂದರೆ ಕಲ್ಪಿತವಸ್ತುವಿನ ನಿಷೇಧಮಾಡುವುದನ್ನು 'ನಿಷೇಧಾಭಾಸ'ವೆಂದೇಕೆ ಭಾವಿಸಬಾರದು? ಅದು ನಿಜವಾದ ನಿಷೇಧವೇ ಆದರೆ ಗಮ್ಯಾರ್ಥದ ಅವಶ್ಯಕತೆಯೇ ಕಡಿಮೆಯಾಗುತ್ತದೆ ದೈವಗತಿ ವಿಚಿತ್ರವೆಂಬ ವಾಚ್ಯ ಕಾರಣವಿರುವಾಗ, ಕಾರಣಾಂತರವು ಗಮ್ಯವೆಂದೇಕೆ ಭಾವಿಸಬೇಕು? ಕವಿಗೆ ವಿವಕ್ಷಿತವಾದ ಗಮ್ಯಾರ್ಥ—ಲೋಕದಲ್ಲಿ ಪರಸ್ಪರಪ್ರಣಯಿಗಳು ಕೂಡುವುದಕ್ಕೆ ದೈವಾನುಗ್ರಹವೂ ಅಗತ್ಯ, ಆದುದರಿಂದ ಪಾಲಿಗೆ ಬಂದ ಸುಖವನ್ನು ಕಳೆದುಕೊಳ್ಳಬಾರದು—ಎಂದು ಇದ್ದಿರಬಹುದೆ? ಅಂತಹ ದೈವಯೋಗ ಅಕಸ್ಮಾತ್ತಾಗಿ ಲಭಿಸಿದ ಕಾಮಿಯೊಬ್ಬನು ಪ್ರೇಯಸಿಗೆ ಈ ಮಾತನ್ನು ಹೇಳಿರಬಹುದೆ? ಹೀಗೆ ಕಲ್ಪಿಸಿದರೆ, ವ್ಯಂಗ್ಯಾರ್ಥವು ವಾಚ್ಯವಾದ ನಿಷೇಧಾಭಾಸಕ್ಕೆ ಪೋಷಕವಾಗುವುದರಿಂದ ಭಾಮಹನ ಲಕ್ಷಣಾನುಗುಣವಾದ 'ಆಕ್ಷೇಪಾಲಂಕಾರ'ವು ಇಲ್ಲಿ ಪ್ರತೀತಿಗೆ ಬರುತ್ತದೆ 'ಆಕ್ಷೇಪ'ಕ್ಕೆ ಗ್ರಂಥಕಾರನು ಉದಾಹರಣೆಯನ್ನೇ ಕೊಡಲಿಲ್ಲವೆಂಬ ನ್ಯೂನತೆಯೂ ತಪ್ಪುತ್ತದೆ

ವ್ಯಂಗ್ಯಮೂಲವಾದ ಅಲಂಕಾರಗಳಲ್ಲೆಲ್ಲ ವಾಚ್ಯ ಪ್ರಧಾನವೆ ಅಥವಾ ವ್ಯಂಗ್ಯ ಪ್ರಧಾನವೆ? ಎನ್ನುವ ಜಟಿಲ ಪ್ರಶ್ನೆ ಏಳುತ್ತದೆ. ಕವಿವಿವಕ್ಷಿತವಾದ ಅರ್ಥವೇ ಪ್ರಧಾನವೆಂದು ನಿರ್ಣಯಿಸುವುದಾದರೆ ಇಂತಹ ಸ್ಥಳಗಳಲ್ಲೆಲ್ಲ [ಉದಾ: ವಿಶೇಷೋಕ್ತಿ, ಪರ್ಯಾಯೋಕ್ತ, ಅಪ್ರಸ್ತುತಪ್ರಶಂಸೆ] ವ್ಯಂಗ್ಯಾರ್ಥವೇ ಪ್ರಧಾನವೆನ್ನಬೇಕಾಗುತ್ತದೆ. ವ್ಯಂಗ್ಯಾರ್ಥಪ್ರಧಾನವಾದ ಕಾವ್ಯವೆಲ್ಲ 'ಧ್ವನಿ'ಯಾದರೆ—ಇವು ಮಾತ್ರ ಧ್ವನಿಯಲ್ಲ, 'ಗುಣೀಭೂತವ್ಯಂಗ್ಯ' ಎಂಬ ಆನಂದವರ್ಧನನ ಪ್ರಕ್ರಿಯೆ ನಮ್ಮ ಬುದ್ಧಿಗೆ ಗಹನವಾಗುತ್ತದೆ ಇದಕ್ಕಾಗಿ ವೃತ್ತಿಗ್ರಂಥದ ಸೂಕ್ಷ್ಮ ಪರಿಶೀಲನೆ ಅಗತ್ಯ. ವ್ಯಂಗ್ಯಪ್ರತೀತಿ ಕವಿವಿವಕ್ಷಿತವೆಂದರೂ 'ರಮಣೀಯತೆ' ವ್ಯಂಗ್ಯನಿಷ್ಠವೆನಿಸದೆ ವ್ಯಂಗ್ಯದಿಂದ ಉಪಕೃತವಾದ ವಾಚ್ಯದಲ್ಲಿಯೇ ಎಂದೆನಿಸುವ ಸ್ಥಳಗಳೆಲ್ಲ ಗುಣೀಭೂತವ್ಯಂಗ್ಯಗಳೆಂದು ನಿರ್ಣಯಿಸಬೇಕು. ಭಾಮಹಾದಿ ಪ್ರಾಚೀನರು ಹೀಗೆ ಈ ಅಲಂಕಾರಗಳ ಲಕ್ಷಣಗಳನ್ನು ಹೇಳಿದ್ದರೆನ್ನಲು ಪ್ರಮಾಣವಿಲ್ಲ. ಆದರೆ ಆನಂದವರ್ಧನನ ನೂತನ ಕಾವ್ಯಮೀಮಾಂಸೆಯಲ್ಲಿ ಇದೊಂದು

'ದೀಪಕ,' 'ಅಪಹ್ನುತಿ'[95] ಮೊದಲಾದ ಅಲಂಕಾರಗಳಲ್ಲಿ 'ಉಪಮೆ'ಯು ವ್ಯಂಗ್ಯವಾಗಿ ಪ್ರತೀತವಾಗುತ್ತಿದ್ದರೂ ಸಹ, ದೀಪಕಾದಿಗಳಿಗೇ ಪ್ರಾಧಾನ್ಯ-ವಿವಕ್ಷೆಯಿರುವುದರಿಂದ 'ಉಪಮೆ'ಯೆಂಬ ಹೆಸರು ಹೇಗೆ ಸಲ್ಲುವುದಿಲ್ಲವೋ, ಹಾಗೆಯೇ ಇಲ್ಲಿಯೂ ಎಂದರಿಯಬೇಕು.

ಅನುಕ್ತ-ನಿಮಿತ್ತ-ವಿಶೇಷೋಕ್ತಿ'[96]ಯಲ್ಲಿಯೂ—

"ಆಹೂತೋಽಪಿ ಸಹಾಯ್ಯೈರೇಮಿತ್ಯುಕ್ತ್ವಾ ವಿಮುಕ್ತನಿದ್ರೋಽಪಿ ।
ಗಂತುಮನಾ ಅಪಿ ಪಥಿಕಃ ಸಂಕೋಚಂ ನೈವ ಶಿಥಿಲಯತಿ ॥"

ಜತೆಯವರು ಕರೆದರೂ, 'ಇದೊ ಬಂದೆ' ಯೆಂದರೂ,
ನಿದ್ದೆಯಿಂದೆಚ್ಚರಿಕೆಯಾಗಿದ್ದರೂ ।
ಹೋಗಬೇಕೆಂಬಿಚ್ಛೆಯಿದ್ದರೂ ಪಯಣಿಗನು
ಸಂಕೋಚವನು ಮಾತ್ರ ಶಿಥಿಲಗೊಳಿಸ ॥

ಮುಂತಾದ ಲಕ್ಷ್ಯಗಳಲ್ಲಿ ಪ್ರಕರಣದ ಸಾಮರ್ಥ್ಯದಿಂದ ವ್ಯಂಗ್ಯದ[97] ಪ್ರತೀತಿ ಮಾತ್ರ ಉಂಟಾಗುತ್ತದೆಯೇ ಹೊರತು ಅದರಿಂದ ಯಾವ ರಮಣೀಯತಾತಿಶಯವೂ ತೋರುವುದಿಲ್ಲವಾದುದರಿಂದ ಅದಕ್ಕೆ ಪ್ರಾಧಾನ್ಯವಿಲ್ಲ.

---

ಮೂಲಭೂತವಾದ ವಿಚಾರಸರಣಿ. "ಸಮಾಸೋಕ್ತಿ"ಯಲ್ಲಿ ವಾಚ್ಯ ಪ್ರಸ್ತುತ. ಪ್ರಸ್ತುತವಾದ್ದರಿಂದಲೇ ವಾಚ್ಯ ಪ್ರಧಾನವೆಂದು ತಿಳಿಯಲಾಗದು ; ರಮಣೀಯವಾದ್ದರಿಂದ ವಾಚ್ಯಪ್ರಧಾನವೆನ್ನಬೇಕು. ಇಲ್ಲದಿದ್ದರೆ ಅಪ್ರಸ್ತುತ ಪ್ರಶಂಸೆಯಲ್ಲಿ ನಿಯಮ ತಪ್ಪುತ್ತದೆ. ಅಪ್ರಸ್ತುತ ಪ್ರಶಂಸೆಯಲ್ಲಿ ವ್ಯಂಗ್ಯ ಪ್ರಸ್ತುತ ; ವಾಚ್ಯ ಅಪ್ರಸ್ತುತ ಅಲ್ಲಿ ವ್ಯಂಗ್ಯವೇ ಪ್ರಧಾನವೆನ್ನಬೇಕಾದ ಪ್ರಸಂಗ ತಪ್ಪಬೇಕಾದರೆ ವಾಚ್ಯವೇ ಅಲ್ಲಿಯೂ ರಮಣೀಯತರವೆಂಬ ಸಿದ್ಧಾಂತವನ್ನನುಸರಿಸಬೇಕಾಗುತ್ತದೆ.

95 ಈ ಎಲ್ಲ ಅಲಂಕಾರಗಳ ಲಕ್ಷ್ಯ-ಲಕ್ಷಣ ಸಮನ್ವಯಗಳಿಗೆ "ಕನ್ನಡ ಕಾವ್ಯಾಲಂಕಾರ"ವನ್ನು ನೋಡಿ.

96 ಕಾರಣ ಸಾಮಗ್ರಿಯಲ್ಲಿ ಊನವಾದರೂ ಕಾರ್ಯಕಾರಿತ್ವ ತಪ್ಪದಿರುವುದು 'ವಿಶೇಷೋಕ್ತಿ'. ಇದು ಅಚಿಂತ್ಯನಿಮಿತ್ತ, ಉಕ್ತನಿಮಿತ್ತ, ಅನುಕ್ತನಿಮಿತ್ತ ಎಂದು ಮೂರು ಬಗೆ. ಮೊದಲನೆಯ ಎರಡರಲ್ಲೂ ವ್ಯಂಗ್ಯಾಂಶದ ಅಸ್ತಿತ್ವವಿಲ್ಲ ಅದರ ಪ್ರಸಕ್ತಿಯಿರುವುದೇ ಮೂರನೆಯ ಬಗೆಯಲ್ಲಾದ್ದರಿಂದ 'ವೃತ್ತಿ'ಯಲ್ಲಿ ಅದೊಂದನ್ನೇ ಎತ್ತಿ ಹೇಳಿದೆ. ಕಾರ್ಯಕಾರಿತ್ವ ತಪ್ಪದಿರಲು ನಿಮಿತ್ತ ಅಲ್ಲಿ ವ್ಯಂಗ್ಯ—ಲೋ.

97 ಉದ್ಭಟನ ಪ್ರಕಾರ ಈ ಪದ್ಯದಲ್ಲಿ 'ಶೀತದ ಬಾಧೆ'ಯು ಗಮ್ಯವಾದ ನಿಮಿತ್ತ. ಅದನ್ನು ಮನಸ್ಸಿನಲ್ಲಿಟ್ಟು ಯಾವ ರಮಣೀಯತೆಯೂ ವ್ಯಂಗ್ಯದಲ್ಲಿಲ್ಲವೆನ್ನಲಾಗಿದೆ. ರಸಿಕರು ಬೇರೆ

'ಪರ್ಯಾಯೋಕ್ತ'ದಲ್ಲಿಯೂ೨೮ ವ್ಯಂಗ್ಯವೇ ಪ್ರಧಾನವಾಗಿರುವ ಪಕ್ಷಕ್ಕೆ ಅದೇ (ಬೇಕಾದರೆ) 'ಧ್ವನಿ'ಯಲ್ಲಿ ಅಂತರ್ಭಾವವನ್ನು ಹೊಂದಲಿ; ಆದರೆ 'ಧ್ವನಿ'ಯು ಮಾತ್ರ 'ಪರ್ಯಾಯೋಕ್ತ'ದಲ್ಲಿ ಅಂತರ್ಭಾವ ಹೊಂದಲಾರದು. ಏಕೆಂದರೆ ಧ್ವನಿಯ ವ್ಯಾಪ್ತಿಯು ಬಹಳ ವಿಶಾಲವಾದುದೆಂದೂ೨೯ ಆದರ ಸ್ಥಾನವು ಬಹಳ ಮುಖ್ಯವಾದು

---

ನಿಮಿತ್ತವನ್ನೂ ಕಲ್ಪಿಸಿದ್ದಾರೆ—'ಕಾಂತಾಸಮಾಗಮಕ್ಕೆ ಪ್ರಯಾಣಕ್ಕಿಂತಲೂ ಸ್ವಪ್ನವೇ ಶೀಘ್ರತರ ಉಪಾಯವೆಂದು ತಿಳಿದುಕೊಂಡ ಅವನು ಇನ್ನೂ ನಿದ್ರೆ ಬಂದೀತೆಂಬ ಬುದ್ಧಿಯಿಂದ ಸಂಕೋಚವನ್ನು ಬಿಡಲಿಲ್ಲ', ಎಂದು ಈ ನಿಮಿತ್ತ ಕೂಡ ನೇರವಾಗಿ ರಮಣೀಯತೆಗೆ ಪ್ರಯೋಜಕವೆಂದು ಆಲಂಕಾರಿಕರು ಭಾವಿಸುವುದಿಲ್ಲ. ವಾಚ್ಯವಾದ ವಿಶೇಷೋಕ್ತಿ 'ಸಂಕೋಚವನ್ನು ಬಿಡಲೊಲ್ಲ' ಎಂಬ ವಾಕ್ಯಾಂಶ ಅದೇ ವ್ಯಂಗ್ಯವಾದ ನಿಮಿತ್ತದಿಂದ ಅಲಂಕೃತವಾಗಿ ರಮಣೀಯತೆಗೆ ಪ್ರಯೋಜಕವಾಗುತ್ತದೆ. ಇಲ್ಲದಿದ್ದರೆ ಅಲಂಕಾರಕ್ಕೆ 'ವಿಶೇಷೋಕ್ತಿ' ಎಂಬ ಹೆಸರೇ ಅನ್ವರ್ಥಕವಾಗುವುದಿಲ್ಲ. ('ವಿಶೇಷ'=ವ್ಯಂಗ್ಯಾಂಶ, ಅದರ 'ಉಕ್ತಿ'=ವಾಚ್ಯತ್ವ) —ಹೀಗೆ ಎರಡು ಅಭಿಪ್ರಾಯಗಳನ್ನೂ (ಉದ್ಭಟನ ಮತ್ತು ರಸಿಕರ) ಗಮನಿಸಿ ಗ್ರಂಥಕಾರನು ನಿರ್ಣಯಿಸಿದ್ದಾನೆ, ಬರಿಯ ಉದ್ಭಟನ ಅಭಿಪ್ರಾಯವೊಂದನ್ನೇ ಅಲ್ಲವೆಂದು ತಿಳಿಯಬೇಕು.

೨೮ ಭಾಮಹನ ಪರ್ಯಾಯೋಕ್ತ ಲಕ್ಷಣ, ಅದರ ವಿವರಣೆಗಳಿಗೆ ಕನ್ನಡ ಕಾವ್ಯಾಲಂಕಾರವನ್ನು ನೋಡಿ. ಅದನ್ನು ಆನಂದವರ್ಧನನೇ ಸ್ವಲ್ಪ ಮುಂದೆ ಕಂಠೋಕ್ತವಾಗಿ ಕಟಾಕ್ಷಿಸುತ್ತಾನೆ. ಅಲ್ಲಿ ಲಕ್ಷ್ಯ (ಗೃಹೇಷ್ವಧ್ವಸು ವಾ....) ಬಹಳ ಸಂಗ್ರಹವಾಗಿರುವುದರಿಂದ ವ್ಯಂಗ್ಯಾರ್ಥಕ್ಕೆ ಪ್ರಾಧಾನ್ಯ ಸ್ಪಷ್ಟವಲ್ಲ ಬೇರೆ ಸಮುಚಿತ ಲಕ್ಷ್ಯಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಈ ವಾಕ್ಯವನ್ನು ಬರೆದಂತಿದೆ ಲೋಚನದಲ್ಲಿ ಉದ್ಭಟನ ಪರ್ಯಾಯೋಕ್ತ ಲಕ್ಷಣವನ್ನು ಬರೆದರೂ, ಉದ್ಭಟನು ಕೊಡುವ ಲಕ್ಷ್ಯದ ಬದಲಾಗಿ ಕೆಳಗೆ ಬರೆದ ಉತ್ತಮ ಲಕ್ಷ್ಯವನ್ನು ಉಲ್ಲೇಖಿಸಲಾಗಿದೆ—

"ಶತ್ರುಗಳನ್ನು ಧ್ವಂಸಮಾಡುವ ಹಟತೊಟ್ಟು, ಸನ್ಮಾರ್ಗವನ್ನುಲ್ಲಂಘಿಸಿದ
ಪರಶುರಾಮನೆಂಬ ತಾಪಸನಿಗೆ ಈ ಧನುಸ್ಸು ಧರ್ಮೋಪದೇಶ ಮಾಡಿದೆ".

ಭೀಷ್ಮನ ಈ ವಾಕ್ಯದಲ್ಲಿ ಭಾರ್ಗವನನ್ನು ಸೋಲಿಸುವಂತಹ ಪೌರುಷವು ಯದ್ಯಪಿ ವ್ಯಂಗ್ಯವಾದರೂ, ಅದರ ಸಹಾಯದಿಂದ ಕಳೆಗೊಳ್ಳುವ 'ಧನುಸ್ಸು ಧರ್ಮೋಪದೇಶಮಾಡಿದೆ' ಎಂಬ ವಾಚ್ಯಾರ್ಥದಿಂದಲೇ ಕಾವ್ಯಾರ್ಥವು (=ವೀರರಸ—ಕೌಮುದಿ) ಅಲಂಕೃತವಾಗಿದೆ—ಲೋ

'ಪರ್ಯಾಯೋಕ್ತ'ದಲ್ಲಿ ವ್ಯಂಗ್ಯವೇ ಪ್ರಧಾನವೆಂದು ಪ್ರತಿಜ್ಞೆಮಾಡುವುದಾದರೆ ಆಗ ಅದು 'ಅಲಂಕಾರ್ಯ' ಅಥವಾ ಆತ್ಮವೇ ಆಗಿಬಿಡುತ್ತದೆ; 'ಅಲಂಕಾರ' ಶಬ್ದಕ್ಕೇ ಅನರ್ಹವಾಗುತ್ತದೆ—ಲೋ.

೨೯ 'ಧ್ವನಿ'ಯು ವ್ಯಾಪಕ ತತ್ವ; ಎಲ್ಲ ಅಲಂಕಾರಗಳಿಗೂ ಸಾರ್ಥಕ್ಯವನ್ನು ಕಲ್ಪಿಸುವ ಅಲಂಕಾರ್ಯ; ಎಲ್ಲ ಗುಣಾದಿಗಳಿಗೂ ವಿಶ್ರಾಂತಿಸ್ಥಾನ. 'ಅಲಂಕಾರ'ವಾದರೋ ಲೌಕಿಕಾಭರಣದಂತೆ ಅನ್ಯಾಶ್ರಿತ ಮತ್ತು ಅಲಂಕಾರ್ಯಪರತಂತ್ರವಾದುದರಿಂದ ಎಂದೂ ಮುಖ್ಯವೆನಿಸ

ದೆಂದೂ ಮುಂದೆ ವಿವರಿಸುತ್ತೇವೆ. ವಸ್ತುತಃ **ಭಾಮಹನು** ಉದಾಹರಿಸುವಂತಹ 'ಪರ್ಯಾಯೋಕ್ತ'ಗಳಲ್ಲಿ ವ್ಯಂಗ್ಯಕ್ಕೆ ಮಾತ್ರವೇ ಪ್ರಾಧಾನ್ಯವಿಲ್ಲ; ವಾಚ್ಯವನ್ನು ಅಪ್ರಧಾನವೆಂದು ಅಲ್ಲಿ ಪರಿಗಣಿಸದಿರುವುದೇ ಇದಕ್ಕೆ ಕಾರಣ.

**'ಅಪಹ್ನುತಿ,' 'ದೀಪಕ'** — ಇವೆರಡು ಅಲಂಕಾರಗಳಲ್ಲಾದರೋ[100] ವಾಚ್ಯವೇ ಪ್ರಧಾನವಾದುದು, ವ್ಯಂಗ್ಯವು ಅನುಯಾಯಿ ಮಾತ್ರ, ಎಂಬ ವಿಷಯವು ಪ್ರಸಿದ್ಧವಾಗಿಯೇ ಇದೆ.

**ಸಂಕರಾಲಂಕಾರದಲ್ಲಿ** [101]ಕೂಡ ಒಂದು ಅಲಂಕಾರವು ಇನ್ನೊಂದು ಅಲಂಕಾರದ ಛಾಯೆಗೆ ಕಾರಣವಾಗಿರುವ ಕಾಲದಲ್ಲಿ,[102] ವ್ಯಂಗ್ಯವೇ ಪ್ರಧಾನವೆಂದು ವಿವಕ್ಷಿತವಾಗಿಲ್ಲದ ಕಾರಣ 'ಧ್ವನಿ'ಯಿರುವ ಸಂಭವವಿಲ್ಲ. ಒಟ್ಟಿಗೆ ಎರಡು ಅಲಂಕಾರಗಳು ಬರುವ ಕಡೆಗಳಲ್ಲಾದರೋ[103] ವಾಚ್ಯ–ವ್ಯಂಗ್ಯಗಳಿಗೆ ಸಮಪ್ರಾಧಾನ್ಯವನ್ನೊಪ್ಪಬೇಕು. ಒಂದು ಪಕ್ಷ ವಾಚ್ಯವು ಅಪ್ರಧಾನವೇ ಆಗಿಬಿಟ್ಟು, ವ್ಯಂಗ್ಯವೇ

---

ಲನರ್ಹ ಅದೂ ವ್ಯಾಪಕ, ಮುಖ್ಯ, ಎನ್ನುವುದಾದರೆ ಆಗ ಆತ್ಮವೇ ಆಗಿಬಿಡುತ್ತದೆ, ಅಲಂಕಾರವಾಗಿ ಉಳಿಯುವುದಿಲ್ಲ 'ಧ್ವನಿ' ಎಂಬ ಶಬ್ದದ ಬದಲು 'ಪರ್ಯಾಯೋಕ್ತ'ವೆಂಬ ನಾಮಾಂತರ ಮಾತ್ರ ಅವಕ್ಕೆ ಬಂದಂತಾಗುತ್ತದೆ, ಅಷ್ಟೆ, ಆದರೆ ಭಾಮಹಾದಿಗಳೇನೂ ಪರ್ಯಾಯೋಕ್ತದಲ್ಲಿ ವ್ಯಂಗ್ಯಪ್ರಾಧಾನ್ಯವನ್ನು ಎತ್ತಿ ಹೇಳಿಲ್ಲ—ಲೋ

100 ಇವೆರಡು ಅಲಂಕಾರಗಳಲ್ಲೂ ಉಪಮೆ ವ್ಯಂಗ್ಯ. ವ್ಯಂಗ್ಯೋಪಮೆ ಧ್ವನಿಯೆನಿಸೀತೆ ಎಂಬ ಆಶಂಕೆಗೆ ಮಾತ್ರ ಅವಕಾಶವುಂಟು—ಲೋ

101 'ವಿರುದ್ಧ ಅಲಂಕಾರಗಳೆರಡರ ಛಾಯೆಯಿದ್ದು, ಎರಡೂ ಒಂದೆಡೆಯಲ್ಲಿರುವುದು— ಅಸಂಭವವಾಗಿರುವಾಗ, ಮತ್ತು ಒಂದನ್ನು ಹೌದೆಂದು ನಿರ್ಣಯಿಸಲು ಅಥವಾ ಇನ್ನೊಂದನ್ನು ಅಲ್ಲವೆನ್ನಲು ಸಾಧಕವಾಗಲಿ ಬಾಧಕವಾಗಲಿ ಇಲ್ಲದಿದ್ದರೆ, ಆಗ ಆ ಎರಡಲಂಕಾರಗಳಿಗೆ 'ಸಂಕರ'ವೆಂದು ತಿಳಿಯಬೇಕು' ಎಂಬ ಉದ್ಭಟನ ಲಕ್ಷಣ ಸಂಕರಾಲಂಕಾರದಲ್ಲಿ ಮೊದಲನೆಯ (i) ಪ್ರಕಾರವಾದ 'ಸಂದೇಹ ಸಂಕರ'ವನ್ನು ಕುರಿತುದು ಅದರ ಮಿಕ್ಕ ಮೂರು ಪ್ರಕಾರಗಳು (ii) ಶಬ್ದಾಲಂಕಾರ ಅರ್ಥಾಲಂಕಾರಗಳು ಒಂದೇ ವಾಚಕದಲ್ಲಿ ನಿವಿಷ್ಟವಾಗಿರುವುದು, ಉದಾಹರಣೆ 'ಸ್ಮರ ಸ್ಮರಮಿವ ಪ್ರಿಯಂ. .' ಇಲ್ಲಿ ಯಮಕ ಮತ್ತು ಉಪಮೆಗಳು ಒಂದೇ ವಾಕ್ಯಭಾಗದಲ್ಲಿ ಪ್ರವಿಷ್ಟವಾಗಿವೆ. (iii) ಎರಡು ಅರ್ಥಾಲಂಕಾರಗಳು ಒಂದೇ ವಾಕ್ಯಾಂಶದಲ್ಲಿ ಬರುವುದು. (iv) ಅಲಂಕಾರಗಳಿಗೆ ಅನುಗ್ರಾಹ್ಯ-ಅನುಗ್ರಾಹಕ ಭಾವವಿರುವುದು—ಲೋ.

102 ಇಲ್ಲಿ ನಾಲ್ಕನೆಯ ಸಂಕರ-ಪ್ರಭೇದವನ್ನು ಮುಖ್ಯವಾಗಿ ಲಕ್ಷೀಕರಿಸಲಾಗಿದೆ. ಎರಡು, ಮೂರನೆಯ ಪ್ರಭೇದಗಳಲ್ಲಿ ವ್ಯಂಗ್ಯದ ಪ್ರಸಕ್ತಿಯಿಲ್ಲ—ಲೋ.

103 ಇದು ಸಂಕರದ (i)ನೆಯ ಪ್ರಕಾರವನ್ನು ಕುರಿತು ಹೇಳುವ ಮಾತು—ಲೋ.

ಅಲ್ಲಿ ಪ್ರಧಾನವಾಗಿರುವುದಾದರೆ, ಆಗ ಅದೂ ಧ್ವನಿಯೊಳಗೆ ಬೇಕಾದರೆ ಸೇರಲಿ.[104] ಆದರೆ ಅದನ್ನೇ ಧ್ವನಿಯೆಂದು ಹೇಳುವುದು ಶಕ್ಯವಿಲ್ಲ. 'ಪರ್ಯಾಯೋಕ್ತ'ವನ್ನು ವಿವೇಚಿಸಿದಾಗ ಹೇಳಲಾದ ಯುಕ್ತಿಯನ್ನೇ ಇಲ್ಲಿಯೂ ಅಂಗೀಕರಿಸಬೇಕು. ಅಷ್ಟೇ ಅಲ್ಲದೆ 'ಸಂಕರಾಲಂಕಾರ' ಎನ್ನುವಾಗ 'ಅಲಂಕಾರಗಳು ಒಂದರೊಡನೊಂದು ಬೆರೆತು ಹೋಗುವಿಕೆ' ಎಂದು ನಾವು ಹೇಳುವ ಸಂಕರವೆಂಬ ಮಾತ್ರೇ[105] 'ಧ್ವನಿ'ಯ ಕಲ್ಪನೆಯನ್ನು ಕೂಡ ತಪ್ಪಾಗಿಸುತ್ತದೆ.

'ಅಪ್ರಸ್ತುತ ಪ್ರಶಂಸೆ'ಯಲ್ಲಿ 'ಸಾಮಾನ್ಯ – ವಿಶೇಷ – ಭಾವ'ದಿಂದಲೋ[106] ಇಲ್ಲವೆ 'ಕಾರ್ಯಕಾರಣಭಾವ'ದಿಂದಲೋ ವಾಚ್ಯವಾದ ಅಪ್ರಸ್ತುತ ವಿಷಯಕ್ಕೂ ಪ್ರತೀಯಮಾನವಾದ ಪ್ರಸ್ತುತ ವಿಷಯಕ್ಕೂ ಎಲ್ಲಿ ಸಂಬಂಧವಿರುವುದೋ ಅಲ್ಲಿ ವಾಚ್ಯವ್ಯಂಗ್ಯಗಳಿಗೆ ಸಮವಾದ ಪ್ರಾಧಾನ್ಯವನ್ನೇ ಒಪ್ಪಬೇಕು. ಹೇಗೆಂದರೆ— ವಾಚ್ಯವಾದ ಸಾಮಾನ್ಯವು ಅಪ್ರಸ್ತುತವಾಗಿದ್ದು, ಅದು ವ್ಯಂಗ್ಯವಾದ ಮತ್ತು ಪ್ರಸ್ತುತವಾದ ವಿಶೇಷದೊಡನೆ ಸಂಬಂಧ ಹೊಂದಿದ್ದರೆ, ವಿಶೇಷದ ಪ್ರತೀತಿಗೇ ಪ್ರಾಧಾನ್ಯ ಬಂದರೂ ಕೂಡ, ಸಾಮಾನ್ಯಕ್ಕೂ ವಿಶೇಷಕ್ಕೂ 'ಅವಿನಾಭಾವ'

---

104 'ಅಲಂಕಾರಧ್ವನಿ'ಯೆಂಬ ಧ್ವನಿಕಾವ್ಯದ ಎರಡನೆಯ ಪ್ರಕಾರದಲ್ಲಿ ಅಂತರ್ಗತವಾದೀತೇ ಹೊರತು, 'ಸಂಕರ'ವೆಂಬ 'ಅಲಂಕಾರ'ವೆನಿಸಲಾರದು—ಲೋ.

105 ಎಂದರೆ ಗಾಢವಾದ ಸಂಕೀರ್ಣತೆ = ಸಮ್ಮಿಶ್ರಣ = ಹಾಲು ನೀರುಗಳಂತೆ ಸೇರ್ಪಡೆ—ಲೋ

106 ಇದು ಅಪ್ರಸ್ತುತ ಪ್ರಶಂಸೆಯ ಮೊದಲನೆಯ ಪ್ರಕಾರ. ಮತ್ತೆ ಇದರಲ್ಲಿ ಎರಡು ಪ್ರಭೇದಗಳಿವೆ—(i) ಅಪ್ರಸ್ತುತವಾದ 'ಸಾಮಾನ್ಯ'ವು ವಾಚ್ಯವಾಗಿ, ಪ್ರಸ್ತುತವಾದ 'ವಿಶೇಷ'ವು ವ್ಯಂಗ್ಯವಾಗಿರುವುದು. ಉದಾ: 'ಅಹಾ, ಸಂಸಾರವು ಎಷ್ಟು ನಿರ್ದಯ! ಆಪತ್ತುಗಳು ಎಷ್ಟು ಕ್ರೂರ! ನಿಸರ್ಗಕುಟಿಲವಾದ ವಿಧಿಯ ಮಾರ್ಗಗಳು ಎಷ್ಟು ದುರಂತ!' ಇಲ್ಲಿ ಪ್ರೇಯಸೀ ಪುತ್ರಾದಿಗಳ ವಿನಾಶವೆಂಬ ಪ್ರಸ್ತುತಾರ್ಥ-ವಿಶೇಷ ವ್ಯಂಗ್ಯ. (ii) ಅಪ್ರಸ್ತುತವಾದ 'ವಿಶೇಷ' ವಾಚ್ಯವಾಗಿದ್ದು, ಪ್ರಸ್ತುತ 'ಸಾಮಾನ್ಯ'ವನ್ನು ಧ್ವನಿಸುತ್ತಿರುವುದು. ಉದಾ: "ತಾವರೆಯೆಲೆಯ ಮೇಲಿನ ನೀರ ಹನಿಯನ್ನು ಮುತ್ತೆಂದು ಆ ದಡ್ಡನು ಹೇಳಿದರೆ ಸೋಜಿಗವೇನೂ ಇಲ್ಲ. ಇದಕ್ಕಿಂತ ಹೆಚ್ಚಿನದನ್ನು ಕೇಳು—ಅದನ್ನು ಮೆಲ್ಲನೆ ಎತ್ತಿಕೊಳ್ಳಲೆಂದು ಕೈಚಾಚಿದಾಗ, ಹನಿಯು ಬೆರಳು ಸೋಕಿದೊಡನೆ ಮಾಯವಾಗಲು, 'ನನ್ನ ಮಣಿಯೆಲ್ಲಿ ಹಾರಿಹೋಯಿತು?' ಎಂಬ ಕೊರಗಿನಲ್ಲಿ ಎಷ್ಟೋ ದಿನಗಳಿಂದ ಅವನಿಗೆ ನಿದ್ದೆಯೂ ಇಲ್ಲ." ಇಲ್ಲಿ ಪ್ರಸ್ತುತವಾದ ಅಂಶ—ಅಸ್ಥಾನದಲ್ಲಿ ಮಹತ್ತ್ವದ ಸಂಭಾವನೆಯೆಂಬ ಸಾಮಾನ್ಯ. ವೃತ್ತಿಗ್ರಂಥದಲ್ಲಿ ಎರಡೂ ಪ್ರಭೇದಗಳು ಲಕ್ಷೀಕೃತವಾಗಿವೆ—ಲೋ.

ಅಥವಾ ಅತ್ಯಂತ ಸನ್ನಿಕೃಷ್ಟವಾದ ಸಂಬಂಧವಿರುವುದರಿಂದ, ವಿಶೇಷದ ಪ್ರಾಧಾನ್ಯವೇ ಸಾಮಾನ್ಯಕ್ಕೂ ಬರುತ್ತದೆ. ಹಾಗೆಯೇ ಸಾಮಾನ್ಯವೇ ಪ್ರಸ್ತುತವಾಗಿ ಮುಖ್ಯತಃ ಪ್ರಧಾನವೆನಿಸುತ್ತಿರುವಾಗಲೂ, ಅಪ್ರಸ್ತುತವಾದ ವಿಶೇಷವು ಸಹ ಸಾಮಾನ್ಯ ನಿಷ್ಠವೇ ಆದುದರಿಂದ—ಏಕೆಂದರೆ ಸಕಲ ವಿಶೇಷಗಳೂ ಮೂಲತಃ ಸಾಮಾನ್ಯದಲ್ಲಿ ಅಂತರ್ಭಾವ ಹೊಂದುತ್ತವೆ—ಅದಕ್ಕೂ ಪ್ರಾಧಾನ್ಯವು ಉಂಟೇ ಉಂಟು. ಕಾರ್ಯಕಾರಣ ಭಾವವನ್ನೊಳಗೊಂಡ ಅಪ್ರಸ್ತುತ ಪ್ರಶಂಸೆಯಲ್ಲಿಯೂ ಇದೇ ನ್ಯಾಯವೇ ಅನ್ವಯಿಸುತ್ತದೆ.[107] ಪ್ರಸ್ತುತ, ಅಪ್ರಸ್ತುತ, ಇವುಗಳ ಸಂಬಂಧವು ಕೇವಲ 'ಸಾರೂಪ್ಯ'ವಾಗಿರುವಂತಹ ಅಪ್ರಸ್ತುತ ಪ್ರಶಂಸೆಯಲ್ಲಿಯೂ ಸಹ ಅಪ್ರಸ್ತುತವಾದ ಸರೂಪ ವಾಚ್ಯಾರ್ಥಕ್ಕೆ ಎಲ್ಲಿ ಪ್ರಾಧಾನ್ಯದ ವಿವಕ್ಷೆಯಿಲ್ಲವೋ ಅವುಗಳಿಗೆಲ್ಲ ಧ್ವನಿಯಲ್ಲೇ ಅಂತರ್ಭಾವವನ್ನು ಹೇಳುತ್ತೇವೆ. ಹಾಗಿಲ್ಲದೆ ಪ್ರಾಧಾನ್ಯದ ವಿವಕ್ಷಯಿದ್ದರೆ ಅವು ಅಲಂಕಾರದ ವರ್ಗದಲ್ಲೇ ಸೇರುತ್ತವೆ.[108] (ಕಾಶಿ ಸಂಸ್ಕರಣದಲ್ಲಿ ಕೆಳಗಿನ ಮೂರು ಪದ್ಯಗಳನ್ನೂ ಸಂಗ್ರಹ ಶ್ಲೋಕಗಳೆಂದು ಗಣಿಸಿದೆ.) ಈ ಅಂಶಗಳನ್ನೆಲ್ಲ ಮುಂದಿನ ಕಾರಿಕೆಗಳಲ್ಲಿ ಸಂಗ್ರಹಿಸಿದೆ.

ಕಾರಿಕೆ (?)

ವ್ಯಂಗ್ಯಸ್ಯ ಯತ್ರಾಪ್ರಾಧಾನ್ಯಂ ವಾಚ್ಯಮಾತ್ರಾನುಯಾಯಿನಃ ।
ಸಮಾಸೋಕ್ತ್ಯಾದಯಸ್ತತ್ರ ವಾಚ್ಯಾಲಂಕೃತಯಃ ಸ್ಫುಟಾಃ ॥೧೪॥

ಕೇವಲ 'ವಾಚ್ಯ'ವನ್ನೇ ಹಿಂಬಾಲಿಸುತ್ತಾ ಎಲ್ಲಿ 'ವ್ಯಂಗ್ಯ'ವು ಅಪ್ರಧಾನವಾಗಿರುವುದೋ. ಅಲ್ಲೆಲ್ಲ 'ಸಮಾಸೋಕ್ತಿ'ಯೇ ಮೊದಲಾದ ಅರ್ಥಾಲಂಕಾರಗಳು ಸ್ಫುಟವಾಗಿರುತ್ತವೆ.

---

107 ಇದೇ ರೀತಿ ಕಾರ್ಯಕಾರಣಭಾವ ಸಂಬಂಧವಿರುವ ಅಪ್ರಸ್ತುತ ಪ್ರಶಂಸೆಯಲ್ಲಿಯೂ ಎರಡು ಪ್ರಭೇದಗಳಾಗುತ್ತವೆ. ಇವುಗಳ ಉದಾಹರಣೆಗಳಿಗೆ ಕನ್ನಡಕಾವ್ಯಪ್ರಕಾಶವನ್ನು ಓದಿ.

108 ಇದೇ ನ್ಯಾಯವು ವ್ಯಾಜಸ್ತುತಿ ಮುಂತಾದ ವ್ಯಂಗ್ಯಮೂಲಾಲಂಕಾರಗಳಿಗೆಲ್ಲ ಅನ್ವಯಿಸುತ್ತದೆ. ರುದ್ರಟನು ಹೇಳುವ "ಭಾವಾಲಂಕಾರ" ವಾದರೂ ಇದೇ ಜಾತಿಯದು. (ಅವನ ಉದಾಹರಣೆ ಯದ್ಯಪಿ 'ಶ್ವಶ್ರೂರತ್ರ...' ಮುಂತಾದ ವಸ್ತುಧ್ವನಿಯ ಉದಾಹರಣೆಯಂತೆಯೇ ಇದ್ದರೂ) 'ಭಾವಾಲಂಕಾರ'ವೆಂಬ ಹೆಸರಿನ ಸಾರ್ಥಕ್ಯಕ್ಕಾಗಿ ವಾಚ್ಯಾರ್ಥವನ್ನು ಪ್ರಧಾನವೆನ್ನಬೇಕು. ವ್ಯಂಗ್ಯಾರ್ಥವು ವಾಚ್ಯಾಂಶಕ್ಕೇ ಪೋಷಕವೆನ್ನಬೇಕು.—ಲೋ

ಕಾರಿಕೆ (?)

ವ್ಯಂಗ್ಯಸ್ಯ ಪ್ರತಿಭಾಮಾತ್ರೇ ವಾಚ್ಯಾರ್ಥಾನುಗಮೇಽಪಿ109 ವಾ ।
ನ ಧ್ವನಿರ್ಯತ್ರ ವಾ ತಸ್ಯ ಪ್ರಾಧಾನ್ಯಂ ನ ಪ್ರತೀಯತೇ ॥೧೫॥

ವ್ಯಂಗ್ಯವು ಹಾಗೂ ಹೀಗೂ ಅಲ್ಪ ಸ್ವಲ್ಪ ಭಾಸವಾಗುತ್ತಿರುವ ಅಥವಾ ವ್ಯಂಗ್ಯವು ವಾಚ್ಯವನ್ನೇ ಅನುಸರಿಸುತ್ತಿರುವ ಸ್ಥಲದಲ್ಲಿಲ್ಲ 'ಧ್ವನಿ' ಯಿರುವುದಿಲ್ಲ; ಮತ್ತು ವ್ಯಂಗ್ಯದ ಪ್ರಾಧಾನ್ಯವು ಎಲ್ಲೆಲ್ಲಿ ಸ್ಪಷ್ಟವಾಗಿರುವುದಿಲ್ಲವೋ110 ಅಲ್ಲಿಯೂ 'ಧ್ವನಿ' ಯಿರುವುದಿಲ್ಲ.

ಕಾರಿಕೆ (?)

ತತ್ಪರಾವೇವ ಶಬ್ದಾರ್ಥೌ ಯತ್ರ ವ್ಯಂಗ್ಯಂ ಪ್ರತಿ ಸ್ಥಿತೌ ।
ಧ್ವನೇಃ ಸ ಏವ ವಿಷಯೋ ಮಂತವ್ಯಃ ಸಂಕರೋಜ್ಝಿತಃ ॥೧೬॥

ಎಲ್ಲಿ ಶಬ್ದಾರ್ಥಗಳೆರಡೂ ವ್ಯಂಗ್ಯದ ಸಾಧನೆಯೊಂದಕ್ಕಾಗಿಯೇ ನಿಂತಿರುವುವೋ, ಅದನ್ನು ಮಾತ್ರ, ಧ್ವನಿಗೆ ವಿಷಯವೆಂದು ತಿಳಿಯಬೇಕು. ಉಳಿದ ಅಲಂಕಾರಗಳೊಡನೆ ಅದನ್ನು ಕಲಸಿಕೊಳ್ಳುವ ಹಾಗೆಯೇ ಇಲ್ಲ.

ವೃತ್ತಿ

ಆದುದರಿಂದ ಧ್ವನಿಯು ಹೇಗೂ ಅನ್ಯತ್ರ ಅಂತರ್ಭಾವ ಹೊಂದುವುದಿಲ್ಲ. ಇದಲ್ಲದೆ "ಅಂಗಿ"ಯಾದ111 'ಕಾವ್ಯ ವಿಶೇಷ'ವೇ ಧ್ವನಿಯೆಂದು ಹೇಳಿರುವುದೂ ಕೂಡ ಅದು ಹಾಗೆ ಅಂತರ್ಭಾವ ಹೊಂದುವುದಿಲ್ಲವೆನ್ನುವುದಕ್ಕೆ ಇನ್ನೊಂದು ಕಾರಣ. 'ಅಲಂಕಾರ'ಗಳು, 'ಗುಣ'ಗಳು, ಮತ್ತು 'ವೃತ್ತಿ'ಗಳು—ಎಲ್ಲವೂ ಅದರ 'ಅಂಗ'ಗಳೆಂದು ಮುಂದೆ ಪ್ರತಿಪಾದಿಸಲಾಗುತ್ತದೆ. ಯಾರೂ ಪ್ರತ್ಯೇಕವಾಗಿ ಒಂದು ಅವಯವವನ್ನು ತೆಗೆದುಕೊಂಡು 'ಇದೇ ಅವಯವಿ' (ಅಥವಾ ಪೂರ್ಣ ವಸ್ತು) ಯೆಂದು ಹೇಳುವುದಿಲ್ಲ. (ಪ್ರತ್ಯೇಕವಾಗಿ ತೆಗೆದುಕೊಳ್ಳುವುದರ ಬದಲು) ಅವಯವಗಳ ಸಮುದಾಯವನ್ನೇ ಪರಿಗಣಿಸಿದರೂ, ಅವಯವವು ಅವಯವಿಯ ಅಂಗವೆನಿಸೀತೇ

---

109 'ಅನುಗಮ'= ಸಮಪ್ರಾಧಾನ್ಯ; ಅಪ್ರಸ್ತುತ ಪ್ರಶಂಸೆಯಲ್ಲಿರುವಂತೆ ವ್ಯಂಗ್ಯ ವಾಚ್ಯಗಳಿಗೆ ಸಮಪ್ರಾಧಾನ್ಯವಿದ್ದಾಗ—ಲೋ.

110 ಬಲವಂತವಾಗಿ ಕಲ್ಪಿಸಿದಾಗ ಮಾತ್ರ ಶಕ್ಯವೋ, ಎಂದರ್ಥ.—ಲೋ.

111 ಅಂಗಿ = ಮುಖ್ಯ ; ಅಂಗ = ಗೌಣ. ಸ್ವಾಮಿಭೃತ್ಯರಲ್ಲಿ ಸ್ವಾಮಿ 'ಅಂಗಿ', ಭೃತ್ಯ 'ಅಂಗ'. ಹಾಗೆಯೇ 'ಧ್ವನಿ' ಪ್ರಧಾನ, ಅಲಂಕಾರ ಗೌಣ.—ಲೋ.

ಹೊರತು ಎಂದಿಗೂ ಅವಯವಿಯೇ ಆಗಿಬಿಡಲಾರದು.[112] ಒಂದು ವೇಳೆ ಹಾಗೆ ಆಗುವುದಾದರೂ, ಧ್ವನಿಯ ಮಟ್ಟಿಗೆ ಹೇಳುವುದಾದರೆ, ಅದರ ವ್ಯಾಪ್ತಿಯು ಬಹಳ ದೊಡ್ಡದಾದುದರಿಂದ, ಅವಯವಗಳಾದ ಅಲಂಕಾರವೇ ಮೊದಲಾದುವುಗಳಲ್ಲಿ ಮಾತ್ರ ಅದು ಎಂದೂ ಅಡಕವಾಗಲಾರದು.[113]

"ಪಂಡಿತರು . . . ಕರೆದಿದ್ದಾರೆ" ಎಂದು ಕಾರಿಕೆಯಲ್ಲಿ[114] ಹೇಳಿರುವುದರಿಂದ 'ವಿದ್ವಾಂಸರು ಮೊದಲು ಕೊಟ್ಟ ಹೆಸರೇ ಇದು (='ಧ್ವನಿ'), ಹೇಗೋ ಬಂದುದಲ್ಲ' ಎಂಬಂಶವು ಸ್ಪಷ್ಟವಾಗುತ್ತದೆ. ವಿದ್ವಾಂಸರಲ್ಲಿ ಮೊದಲು ಬರತಕ್ಕವರೆಂದರೆ ವೈಯಾಕರಣರೇ; ಏಕೆಂದರೆ ಸಕಲ ವಿದ್ಯೆಗಳಿಗೂ ವ್ಯಾಕರಣವೇ ಮೂಲವಾದುದು. ಕಿವಿಗೆ ಕೇಳಬರುವ ವರ್ಣಗಳನ್ನು[115] ಅವರು 'ಧ್ವನಿ'ಯೆಂದು ವ್ಯವಹರಿಸುತ್ತಾರೆ.

---

112 ಸಮುದಾಯವಾದರೂ ಒಂದೇ ಎನ್ನುವುದು ಕಷ್ಟ; ಉಳಿದ ಸಮುದಾಯಿ (ವ್ಯಕ್ತಿ)ಗಳು ಅಲ್ಲಿಯೇ ಗೋಚರವಾಗುವುದರಿಂದ ಆ ಸಮುದಾಯಿಗಳಲ್ಲಿ ವ್ಯಂಗ್ಯವೂ ಒಂದು. ಅದು ಅಲಂಕಾರವಲ್ಲ, ಪ್ರಧಾನವಾದ್ದರಿಂದ. 'ಅಲಂಕಾರ' ಅಪ್ರಧಾನವಾದ್ದರಿಂದಲೇ 'ಧ್ವನಿ' ಯಲ್ಲ—ಲೋ

113 ಅಲಂಕಾರಗಳೇ ಅಲ್ಲದ ವಸ್ತುಧ್ವನಿ', 'ರಸಧ್ವನಿ' ಗಳೆಂಬ ವಿಶಾಲ ಕ್ಷೇತ್ರ ಗಳಿರುವುದರಿಂದ

114 ಕಾರಿಕೆ ೧೩ ರಲ್ಲಿ.

115 ಶಬ್ದದ ಉತ್ಪತ್ತಿ ಸ್ಥಲದಿಂದ ಹಿಡಿದು ಶ್ರೋತೃವಿನ ಕರ್ಣಪಟಲದವರೆಗೆ ಸಂತಾನ =series) ರೂಪವಾಗಿ, ಅಲೆಯಲೆಯಾಗಿ, ಶಬ್ದ ತರಂಗಗಳು ಬರುತ್ತವೆಯೆಂಬ ಸಿದ್ಧಾಂತ ವನ್ನೊಪ್ಪಿದರೆ ಕಿವಿಗೆ ಕೇಳುವ ಶಬ್ದವೆಂದರೆ ಅನೇಕ ಶಬ್ದಪರಂಪರೆಗಳಿಂದುಂಟಾದ 'ಶಬ್ದಜ' ಶಬ್ದ. ಗಂಟೆಯ ನಾದಕ್ಕೆ ಅನುರಣನವಿರುವಂತೆ ಎಲ್ಲ ಶಬ್ದಗಳಿಗೂ ಉಂಟು. ವೈಯಾಕರಣರ ಸ್ಫೋಟವಾದದಲ್ಲಿ (i) ಅನಿತ್ಯವಾದ (=ಉತ್ಪತ್ತಿವಾದ), (ii) ನಿತ್ಯವಾದ (=ಅಭಿವ್ಯಕ್ತಿವಾದ) ವೆಂಬ ಪಕ್ಷದ್ವಯಗಳಿವೆ. ಅನಿತ್ಯವಾದದ ಪ್ರಕಾರ ಪ್ರಥಮ ಶಬ್ದಕ್ಕೆ 'ಸ್ಫೋಟ' ವೆಂಬ ಹೆಸರು; ಕಿವಿಯವರೆಗೆ ಅಲೆಯಾಗಿ ಬಂದ ಶಬ್ದಜ ಶಬ್ದಕ್ಕೆ 'ಧ್ವನಿ' ಯೆಂದು ಹೆಸರು ಗಂಟೆಯ ಅನುರಣನ ಸಾಮ್ಯ ಇಲ್ಲಿ ಸ್ಪಷ್ಟ. ಹೀಗೆ ಪ್ರಥಮ ಶಬ್ದದಿಂದ "ವ್ಯಂಗ್ಯ" ವಾದ್ದರಿಂದ ಕಡೆಯ ಅನುರಣನ ವನ್ನು "ಧ್ವನಿ" ಯೆನ್ನಲಾಗಿದೆ. ಇದಲ್ಲದೆ, ನಿತ್ಯಸ್ಫೋಟವಾದವನ್ನನುಸರಿಸುವ ವಿವರಣೆಯಲ್ಲಿ— ಕಿವಿಗೆ ಬೀಳುವ ಅಕ್ಷರಗಳಿಗೆ 'ನಾದ' ವೆಂದೂ ಹೆಸರು; ಇವುಗಳ ಸಮಗ್ರಸ್ವರೂಪ ತಿಳಿಯುವುದು ಒಂದೊಂದು ಅಕ್ಷರದ ಉಚ್ಚಾರ ಕಾಲದಲ್ಲಲ್ಲ; ಇಡಿಯ ಪದದ ಶ್ರವಣಾನಂತರ ಪೂರ್ವಪೂರ್ವ ವರ್ಣಶ್ರವಣಗಳ ಸಂಸ್ಕಾರವೆಲ್ಲ|ಕಡೆಯ ವರ್ಣಶ್ರವಣ ಸಮಕಾಲದಲ್ಲಿ ಕೂಡಿಕೊಂಡು ಅಖಂಡ 'ಸ್ಫೋಟ'ವನ್ನು ಪ್ರಕಾಶಿಸುತ್ತದೆ. ಹೀಗೆ ಅಂತ್ಯ ವರ್ಣ ಸಂಸ್ಕಾರ ಸಾಪೇಕ್ಷವಾಗಿ, ವರ್ಣಾತಿರಿಕ್ತ

ಹಾಗೆಯೇ ಅವರ ಸಿದ್ಧಾಂತದ ಅನುಯಾಯಿಗಳಾದ ಮಿಕ್ಕ ವಿದ್ವಾಂಸರು ಎಂದರೆ ಕಾವ್ಯ ತತ್ತ್ವಜ್ಞರು—ವ್ಯಂಜಕತ್ವವು ಇಲ್ಲಿಯೂ ಸಮಾನವಾಗಿದ್ದುದರಿಂದ—ವಾಚ್ಯ-ವಾಚಕಗಳ ಸಾಹಿತ್ಯವಿದ್ದು ಕಾವ್ಯವೆಂಬ ಹೆಸರಿಗೆ ಪಾತ್ರವಾಗುವ ಶಬ್ದಾತ್ಮವನ್ನು ಕೂಡ 'ಧ್ವನಿ'ಯೆಂದು ಹೇಳಿರುವರು. ಹಾಗೆಯೇ ಮುಂದೆ ಇನ್ನೂ ಹೇಳಲಿರುವ ಧ್ವನಿಯ ಎಲ್ಲ ಭೇದ-ಪ್ರಭೇದಗಳನ್ನೂ ಒಟ್ಟುಗೂಡಿಸಿದರೆ, ಅದರ ವಿಷಯ-ವ್ಯಾಪ್ತಿಯು ಎಷ್ಟು ವಿಶಾಲವಾದುದೆಂಬುದೂ, ಅದರ ನಿರೂಪಣೆಯು ಕೆಲವು ಪ್ರಸಿದ್ಧವಾದ ಅಲಂಕಾರ-ವಿಶೇಷಗಳ ಪ್ರತಿಪಾದನೆಗೆ ಯಾವ ಬಗೆಯಿಂದಲೂ ಸಮಾನವಲ್ಲವೆಂಬುದೂ, ಮನದಟ್ಟಾಗುವುದು. ಆದುದರಿಂದ 'ಧ್ವನಿ'ಯಲ್ಲಿಯೇ ಮಗ್ನವಾದ ಮನಸ್ಸುಳ್ಳವರು ಅದರ ವಿಷಯದಲ್ಲಿ ಸಡಗರವನ್ನು ತೋರಿಸುವುದು ಯುಕ್ತವೇ ಆಗಿದೆ. ಅಸೂಯೆಯಿಂದ ಯಾರೂ ಅವರ ಬುದ್ಧಿ ಕೆಟ್ಟಿರುವುದೆಂದು ಹೇಳಬೇಕಾಗಿಲ್ಲ.

ಹೀಗೆ ಇಲ್ಲಿಯವರೆಗೂ ಧ್ವನಿಯ ಅಭಾವವಾದಿಗಳಿಗೆ ಉತ್ತರ ಕೊಟ್ಟಂತಾಯಿತು.

'ಧ್ವನಿ'ಯು ಇದ್ದೇ ಇದೆ. ಸ್ಥೂಲವಾಗಿ ಅದನ್ನು ವಿಂಗಡಿಸಿದರೆ 'ಅವಿವಕ್ಷಿತ-

---

'ಸ್ಫೋಟ' ಕ್ಕೆ ಅಭಿವ್ಯಂಜಕ ಗಳಾದ 'ನಾದ' ಅಥವಾ 'ವರ್ಣ'ಗಳು (ಉದಾ.- 'ಗೌಃ' ಎಂಬಲ್ಲಿ ಗಕಾರ ಉಕಾರ ವಿಸರ್ಗಗಳು) "ಧ್ವನಿಯೆನಿಸುತ್ತವೆ. ಅದರಂತೆ ಇಲ್ಲಿಯೂ ಮೊದಲ ಪಕ್ಷವನ್ನನುಸರಿಸಿ ವ್ಯಂಗ್ಯಾರ್ಥವನ್ನೂ, ಎರಡನೆಯ ಪಕ್ಷವನ್ನನುಸರಿಸಿ ವ್ಯಂಜಕ ಶಬ್ದಾರ್ಥಗಳನ್ನೂ ಧ್ವನಿಯೆನ್ನಲಾಗಿದೆ ಹಾಗೆಯೇ ವರ್ಣಗಳ ಉಚ್ಚಾರಣೆಯಲ್ಲಿ ಬರಬಹುದಾದ 'ದ್ರುತ', 'ವಿಲಂಬಿತ' ಮುಂತಾದ ವಕ್ತೃ ವ್ಯಾಪಾರವನ್ನೂ "ಧ್ವನಿ" ಯೆನ್ನಲಾಗಿದೆ. ಅದರಂತೆ ಇಲ್ಲಿಯೂ ವ್ಯಂಜನಾ ವ್ಯಾಪಾರವನ್ನು ಸಹ 'ಧ್ವನಿ' ಯೆಂದಿದೆ ಈ ನಾಲ್ಕು ಧ್ವನಿಗಳ ಸಮುದಾಯವಾದ 'ಕಾವ್ಯ' ಕೂಡ 'ಧ್ವನಿ'ಯೇ. ಈ ಐದು ಅರ್ಥಗಳಿಗೂ ಆಧಾರ—ವ್ಯಾಕರಣ ಶಾಸ್ತ್ರದಲ್ಲಿ ಪ್ರಸಿದ್ಧನಾದ ಭರ್ತೃಹರಿಯ 'ವಾಕ್ಯಪದೀಯ' ಗ್ರಂಥದ ವಚನಗಳು —ಲೋ.

"ಕಾವ್ಯದ 'ಆತ್ಮ' ಧ್ವನಿ" ; "ಕಾವ್ಯದ ವಿಶೇಷ 'ಧ್ವನಿ'". ಎನ್ನುವಾಗ ವಾಕ್ಯಗಳಲ್ಲಿ ಪರಸ್ಪರ ವಿರೋಧ ಆಪಾತತಃ ಕಾಣುತ್ತದೆ. ಮೊದಲನೆಯ ವಾಕ್ಯದಲ್ಲಿ ಕಾವ್ಯ ಬೇರೆ, ಧ್ವನಿ ಬೇರೆ ಎನಿಸುತ್ತದೆ, ಎರಡನೆಯ ವಾಕ್ಯದಲ್ಲಿ ಕಾವ್ಯದ ಒಂದು ಪ್ರಕಾರವೇ ಧ್ವನಿಯಾದ್ದರಿಂದ ಕಾವ್ಯ ಧ್ವನಿಗಳಿಗೆ ಅಭೇದ ಕಾಣುತ್ತದೆ. ಆದರೆ ವಸ್ತುತಃ ವಿರೋಧವಿಲ್ಲ; ಎರಡೂ ಸರಿಯೇ. (ಹತ್ತು ಬಾಳೆಯ ಹಣ್ಣಿರುವ ಒಂದು ಚಿಪ್ಪಿನಲ್ಲಿ ಚಿಪ್ಪೆಂಬ ಹನ್ನೊಂದನೆಯ ವಸ್ತುವಿಲ್ಲ; ಆದ್ದರಿಂದ ಚಿಪ್ಪೆಂದರೆ ಹತ್ತು ಬಾಳೆಯ ಹಣ್ಣೇ ಎಂದು ಅಭೇದ ಹೇಳಬಹುದು. ಹಾಗೆಯೇ ಚಿಪ್ಪಿಗೂ ಹಣ್ಣಿಗೂ ಇನ್ನೊಂದು ದೃಷ್ಟಿಯಿಂದ ಭೇದವಿರುವುದೂ ವಾಸ್ತವ)—ಲೋ.

ವಾಚ್ಯ' ಮತ್ತು 'ವಿವಕ್ಷಿತಾನ್ಯಪರ-ವಾಚ್ಯ' ಎಂಬ ಎರಡು ವಿಧಗಳಾಗುತ್ತವೆ.116
ಅವುಗಳಲ್ಲಿ ಮೊದಲನೆಯದಕ್ಕೆ ಉದಾಹರಣೆ :—

೯ "ಸುವರ್ಣಪುಷ್ಪಾಂ ಪೃಥಿವೀಂ ಚಿನ್ವಂತಿ ಪುರುಷಾಸ್ತ್ರಯಃ।
ಶೂರಶ್ಚ ಕೃತವಿದ್ಯಶ್ಚ ಯಶ್ಚ ಜಾನಾತಿ ಸೇವಿತುಂ ॥"
ಕಾಂಚನವ ಕುಸುಮಿಸುವ ಧರೆಯನ್ನೆ ಪಡೆಯುವರು
ಬುವಿಯೊಳಗೆ ಮೂದೆರನ ಪುರುಷರವರು ।
ಶೂರತನವುಳ್ಳವನು, ವಿದ್ಯೆ ಸಾಧಿಸಿದವನು,
ಸೇವೆ ಮಾಡುವ ಹದನನರಿತಾತನು ॥116

ಎರಡನೆಯದಕ್ಕೆ ಉದಾಹರಣೆ :—

"ಶಿಖರಿಣಿ ಕ್ವನು ನಾಮ ಕಿಯಚ್ಚಿರಂ
ಕಿಮಭಿಧಾನಮಸಾವಕರೋತ್ತಪಃ।
ತರುಣಿ ಯೇನ ತವಾಧರಪಾಟಲಂ
ದಶತಿ ಬಿಂಬಫಲಂ ಶುಕಶಾವಕಃ ॥"

---

115 a) ಉದಾಹರಣೆಗಳ ಸಹಾಯದಿಂದ ಭಾಕ್ತವಾದದ ನಿರಾಕರಣೆ ಸುಲಭವಾಗುವು ದೆಂಬ ಅಭಿಪ್ರಾಯದಿಂದ ಮುಂದಿನ ಉದ್ಯೋತದ ಕಾರಿಕೆಗಳಲ್ಲಿ ಬರುವ ಧ್ವನಿ ವಿಭಾಗವನ್ನು ಇಲ್ಲಿಯೇ ವೃತ್ತಿಕಾರನು ನಿರೂಪಿಸಿದ್ದಾನೆ. 'ವಸ್ತು', 'ಅಲಂಕಾರ' 'ರಸ', ಎಂಬ ಮೂರು ಬಗೆಯ ಧ್ವನಿಗಳೂ ಉಕ್ತವಾದ 'ಅವಿವಕ್ಷಿತವಾಚ್ಯ' 'ವಿವಕ್ಷಿತಾನ್ಯಪರವಾಚ್ಯ ವೆಂಬೀ ಎರಡರಲ್ಲೇ ಅಂತರ್ ಗತವಾಗುತ್ತವೆಂದಭಿಪ್ರಾಯ. ಈ ಉದ್ದ ಹೆಸರುಗಳನ್ನು ಹೇಳುವುದರಲ್ಲಿ ಔಚಿತ್ಯವೇನೆಂದರೆ— 'ಧ್ವನಿ'ಯೆಂಬ ಕಂಠೋಕ್ತ ನಾಮಶ್ರವಣದಿಂದ ಅಭಿಧಾ, ಲಕ್ಷಣಾ, ತಾತ್ಪರ್ಯ, ವಿಲಕ್ಷಣವಾದ ವ್ಯಾಪಾರದ ಪ್ರಾಧಾನ್ಯವೂ ಅದರ ಪ್ರತೀತಿಗೆ ಒಂದು ಕಡೆ ಸಹೃದಯನ ಅಭಿಧಾದಿ ಪರಿಜ್ಞಾನದ ಅಗತ್ಯ, ಇನ್ನೊಂದು ಕಡೆ ಕವಿಯ ತತ್ಪರ ವಿವಕ್ಷೆ, ಇವುಗಳೆಲ್ಲ ಸ್ಪಷ್ಟವಾಗುವುದೇ—ಲೋ.

116 ಹೊನ್ನನ್ನು ಹೂಬಿಡುವ ಧರೆಯೆಂಬುದು ಬಾಧಿತವಾದ್ದರಿಂದ 'ಅವಿವಕ್ಷಿತ' ವಾಚ್ಯ. ಸಾದೃಶ್ಯದ ಮೂಲಕ ಸುಲಭ ಸಮೃದ್ಧಿಯನ್ನು ಲಕ್ಷಣಾ ವ್ಯಾಪಾರದಿಂದ ಬೋಧಿಸುತ್ತದೆ. ಶೂರಾದಿಗಳ ಪ್ರಾಶಸ್ತ್ಯವೇ ಆ ಲಕ್ಷಣೆಯ ಪ್ರಯೋಜನ, ಅದು ವ್ಯಂಗ್ಯ—ಲೋ.

ಶಬ್ದ ಪ್ರಧಾನವಾಗಿ ವ್ಯಂಜಕ ; ಅರ್ಥ ಸಹಕಾರಿಯಾಗಿ ವ್ಯಂಜಕ.

ಪ್ರಾಚೀನ ಭಾಮಹಾದಿಗಳ ದೃಷ್ಟಿಯಿಂದ ನೋಡಿದರೆ ಇಲ್ಲಿ 'ಅತಿಶಯೋಕ್ತಿ' ಅಲಂಕಾರ ವನ್ನು ಹೇಳಬಹುದಲ್ಲವೇ ? (ಹೋಲಿಸಿ-ಮೇಘದೂತ ಪ್ರಯೋಗವಾದ 'ಲೋಚನೈಃ ಪೀಯಮಾನಃ')

ಆವ ಬೆಟ್ಟದ ಮೇಲೆ,[117] ಎನಿತು ಕಾಲದವರೆಗೆ,[118]
ಆವ ಹೆಸರಿನ ತಪವನಾಚರಿಸಿತೋ[119]
ಅಲ್ಲದಿರೆ ಗಿಳಿಮರಿಯು[120] ತರುಣಿ! ನಿನ್ನಯ ತುಟಿಯು
ಕೆಂಪಿಡಿದ ತೊಂಡೆಯನು ಕಡಿವುದೆಂತು?[121]

II. 'ಭಕ್ತಿ'ಯೇ ಧ್ವನಿಯೆಂದು ಹೇಳಲಾದ ಪೂರ್ವಪಕ್ಷಕ್ಕೆ ಕೆಳಗಿನ ಕಾರಿಕೆಯಲ್ಲಿ ಸಮಾಧಾನ ಹೇಳುತ್ತಾನೆ :—

**ಕಾರಿಕೆ**

**ಭಕ್ತ್ಯಾ ಬಿಭರ್ತಿ ನೈಕತ್ವಂ ರೂಪಭೇದಾದಯಂ ಧ್ವನಿಃ।**

'ಧ್ವನಿ'ಯ ಸ್ವರೂಪಕ್ಕೂ 'ಭಕ್ತಿ'ಯ ಸ್ವರೂಪಕ್ಕೂ ಎಷ್ಟೋ ವ್ಯತ್ಯಾಸವಿರುವುದರಿಂದ 'ಧ್ವನಿ'ಯೂ 'ಭಕ್ತಿ'ಯೂ ಒಂದೇ ಆಗುವುದಿಲ್ಲ.[122]

**ವೃತ್ತಿ**

ಎರಡರ ಸ್ವರೂಪವೂ ಬೇರೆ ಬೇರೆಯಾದುದರಿಂದ ಇಲ್ಲಿಯವರೆಗೂ ವಿವರಿಸಲಾದ 'ಧ್ವನಿ'ಯು 'ಭಕ್ತಿ'ಯೊಡನೆ ತಾದಾತ್ಮ್ಯವನ್ನು ಪಡೆಯುವುದಿಲ್ಲ. 'ವಾಚ್ಯ' 'ವಾಚಕ'ಗಳೆರಡೂ ಎಲ್ಲಿ ವಾಚ್ಯ–ವ್ಯತಿರಿಕ್ತವಾದ ವ್ಯಂಗ್ಯಾರ್ಥವನ್ನೇ ತಾತ್ಪರ್ಯ–ರೂಪದಿಂದ[123] ಪ್ರಕಾಶಗೊಳಿಸುವುವೋ, ಅಲ್ಲಿ ಆ ವ್ಯಂಗ್ಯಾರ್ಥಕ್ಕೇ ಪ್ರಾಧಾನ್ಯ

---

117 ಪ್ರಸಿದ್ಧವಾದ ಶ್ರೀಶೈಲವೇ ಮುಂತಾದುವಕ್ಕಿಂತ ಹೆಚ್ಚಿನ ಸಿದ್ಧಿಪರ್ವತವಿರಬೇಕೆಂದು ತಾತ್ಪರ್ಯ—ಲೋ.

118 ದಿವ್ಯ ಕಲ್ಪಸಹಸ್ರಗಳ ಅವಧಿಯಾದರೂ ಕಡಿಮೆಯೆಂದು ಭಾವ—ಲೋ.

119 ಪಂಚಾಗ್ನಿಯೇ ಮುಂತಾದ ತಪಸ್ಸಾಧನೆಗಳಿಂದ ಇಂತಹ ಸಿದ್ಧಿ ಬಾರದು. ಇದೊಂದು ಹೊಸ ತಪಸ್ಸೇ ಆಗಿರಬೇಕು, ಎಂದರ್ಥ.—ಲೋ.

120 ಉಪಭೋಗಾನುಕೂಲವಾದ ತಾರುಣ್ಯದಿಂದ ತುಂಬಿ, ಎಂದು ತಾತ್ಪರ್ಯ–ಲೋ.

121 ಇಲ್ಲಿ ಕಾಮಿಯೊಬ್ಬನ ಪ್ರೇಯಸೀ ಚುಂಬನೇಚ್ಛೆಯನ್ನು ಇದು ಚಾಟುರೂಪವಾಗಿ ಧ್ವನಿಸುತ್ತದೆ. ವಾಕ್ಯಾರ್ಥ ಬಲದಿಂದಲೇ ವ್ಯಂಗ್ಯ ಪ್ರತೀತವಾಗುತ್ತದೆ. ವಾಕ್ಯದ ಅಭಿಧೆ ತಾತ್ಪರ್ಯಗಳೇ ಧ್ವನಿಸುತ್ತವೆ; ಲಕ್ಷಣೆಗೆ ಇಲ್ಲಿ ಹೆಚ್ಚಿನ ಪ್ರಸಕ್ತಿಯಿಲ್ಲ; ಅದರ ಕೆಲಸ ಮಧ್ಯದಲ್ಲಿ ಎಲ್ಲೋ ಸ್ವಲ್ಪ ಮಾತ್ರ. ರಸಾದಿಧ್ವನಿಯಲ್ಲಂತೂ ಲಕ್ಷಣೆಗೆ ಪ್ರವೇಶವೇ ಇಲ್ಲ.

122 ಐದೂ ಅರ್ಥಗಳಲ್ಲಿ—(i) ಶಬ್ದ, (ii) ಅರ್ಥ, (iii) ವ್ಯಾಪಾರ, (iv) ವ್ಯಂಗ್ಯ ಮತ್ತು (v) ಸಮುದಾಯ.—ಲೋ.

123 ಎಂದರೆ ವ್ಯಂಗ್ಯಾರ್ಥದಲ್ಲಿಯೇ ಅರ್ಥದ ವಿಶ್ರಾಂತಿಯಿರುವಂತೆ—ಲೋ.

ವಿರುವ ಪಕ್ಷಕ್ಕೆ, ಅದು 'ಧ್ವನಿ'ಯೆನಿಸುತ್ತದೆ. ಆದರೆ 'ಭಕ್ತಿ'ಯೆಂದರೆ ಕೇವಲ 'ಉಪಚಾರ' (ಅಥವಾ ಗೌಣ ಮತ್ತು ಲಾಕ್ಷಣಿಕ ಪದಪ್ರಯೋಗ.)

ಈ 'ಭಕ್ತಿ'ಯು ಧ್ವನಿ'ಯ ಲಕ್ಷಣವಾಗಲಾರದೆಂದು ಕಾರಿಕೆಯ ಉತ್ತರಾರ್ಧವನ್ನು ಹೇಳುತ್ತಾನೆ:—

ಕಾರಿಕೆ

**ಅತಿವ್ಯಾಪ್ತೇರಥಾವ್ಯಾಪ್ತೇರ್ನ ಚಾಸೌ ಲಕ್ಷ್ಯತೇ ತಯಾ ‖೧೭‖**

'ಅತಿವ್ಯಾಪ್ತಿ' ಮತ್ತು 'ಅವ್ಯಾಪ್ತಿ'—ಈ ಎರಡು ದೋಷಗಳೂ ಬಂದೊದಗುವ ಕಾರಣ 'ಧ್ವನಿ'ಗೆ 'ಭಕ್ತಿ'ಯು ಲಕ್ಷಣವಾಗುವುದಿಲ್ಲ.

ವೃತ್ತಿ

ಎಂದಿಗೂ 'ಭಕ್ತಿ'ಯೇ ಧ್ವನಿಗೆ ಲಕ್ಷಣ (Definition) ವಾಗಲಾರದು. ಏಕೆಂದರೆ ಹಾಗೆ ಒಪ್ಪಿದೊಡನೆಯೇ, 'ಅತಿವ್ಯಾಪ್ತಿ' ಮತ್ತು 'ಅವ್ಯಾಪ್ತಿ' ಎಂಬ ಎರಡು ದೋಷಗಳೂ ಸಂಭವಿಸುತ್ತವೆ. 'ಧ್ವನಿ'ಗಿಂತಲೂ ಬೇರೆಯಾದ ವಿಷಯಗಳಲ್ಲಿ ಸಹ 'ಭಕ್ತಿ'ಯು ಬರುವ ಸಂಭವವಿರುವ ಪ್ರಯುಕ್ತ 'ಅತಿವ್ಯಾಪ್ತಿ' ದೋಷ; ಎಲ್ಲಿ ವ್ಯಂಜಕತ್ವದಿಂದುಂಟಾದ ರಮಣೀಯತೆಯ ಉತ್ಕರ್ಷವೇನೂ[124] ಇಲ್ಲವೋ ಅಂತಹ ಕಡೆಗಳಲ್ಲಿಯೂ ಕವಿಗಳು ಲೋಕರೂಢಿಯನ್ನನುಸರಿಸಿ[125] 'ಭಕ್ತಿ' ಅಥವಾ 'ಉಪಚರಿತ-ಶಬ್ದ-ವೃತ್ತಿ'ಯನ್ನು ಯಥೇಚ್ಛವಾಗಿ ಪ್ರಯೋಗಿಸುವುದನ್ನು ನೋಡಬಹುದು. ಉದಾಹರಣೆ:—

---

124 ಲಕ್ಷಣಾ ವ್ಯಾಪಾರದ 'ಪ್ರಯೋಜನ' ಅನಾದರಕ್ಕೆ ಅರ್ಹವಲ್ಲವಾದ್ದರಿಂದ ವ್ಯಂಜಕತ್ವವೇನೋ ಸಿದ್ಧಿಸುವುದಾದರೂ, 'ಧ್ವನಿ' ವ್ಯವಹಾರಕ್ಕೆ ಅವಶ್ಯಕವಾದುದು ಅಂತಹ ವ್ಯಂಜಕತ್ವ ಸ್ಪರ್ಶವಲ್ಲ, ಆದರೆ ರಮಣೀಯತಾತಿಶಯದಿಂದ ತುಂಬಿದ ವ್ಯಂಜಕತ್ವ 'ಸಮಾಧಿ' ಯೆಂಬ ಕಾವ್ಯಗುಣದಲ್ಲಿ ಒಂದರ ಧರ್ಮವನ್ನು ಮತ್ತೊಂದರಲ್ಲಾರೋಪಿಸುವಾಗ ರಮಣೀಯತೆ ಕೂಡ ವ್ಯಂಜಕತ್ವದಲ್ಲಿರುವುದು ನಿಜ ಆದರೆ ಆ 'ಗುಣ'ದ ರಮಣೀಯತೆಗಿಂತಲೂ ಹೆಚ್ಚಿನ ರಮಣೀಯತೆ ವ್ಯಂಜಕತ್ವದಿಂದ ಸಿದ್ಧವಾಗುವಾಗ ಮಾತ್ರ ಲಕ್ಷಣಾಮೂಲ'ಧ್ವನಿ'. ಕೇವಲ ರೂಢಿ ಅಥವಾ ಪ್ರಸಿದ್ಧಿಯ ಬಲದಿಂದ ಪ್ರಯೋಗಿಸುವ ಲಾಕ್ಷಣಿಕ ರೂಪಗಳಲ್ಲಿ 'ಭಕ್ತಿ'ಯಿರುವದೇ ಹೊರತು ಧ್ವನಿಯಲ್ಲ—ಲೋ.

125 ಲೋಕಪ್ರಸಿದ್ಧಿಯೆಂದರೆ ಲಕ್ಷಣೆಯ ಪ್ರಯೋಜನ ನಿಗೂಢವಾಗದಿರುವಿಕೆ, ಅಥವಾ ಪ್ರಕಟತೆ.

೧೧ "ಪರಿಮ್ಲಾನಂ ಪೀನಸ್ತನಜಘನಸಂಗಾದುಭಯತ-
ಸ್ತನೋರ್ಮಧ್ಯಸ್ಯಾನ್ತಃ ಪರಿಮಿಲನಮಪ್ರಾಪ್ಯ ಹರಿತಂ ।
ಇದಂ ವ್ಯಸ್ತನ್ಯಾಸಂ ಪ್ರಶಿಥಿಲಭುಜಾಕ್ಷೇಪವಲನೈಃ
ಕೃಶಾಂಗ್ಯಾಃ ಸಂತಾಪಂ ವದತಿ[126] ಬಿಸಿನೀಪತ್ರಶಯನಂ ॥[127]

ಉರುವಕ್ಷೋಜನಿತಂಬಸಂಗದಿನೆರಳ್ಪಕ್ಕಂಗಳೊಳ್ ಮಾಸಿದಾ
ವರದೇಹಸ್ಥ ಸುಮಧ್ಯಭಾಗಮದು ಮೇಣ್ ಸಂಪರ್ಕಮಂ ಬಿಟ್ಟಿರಲ್ ।
ಹರಿತಂ ತಾನೆನೆ, ಮತ್ತೆ ತೋಳಲತೆಯಂ ಬೀಸಲ್ಕೆ ತಾಂ ಗೋಜಿದಾ
ಬಿಸಿನೀಪತ್ರದ ಶಯ್ಯೆ ತಾನೆ ತರುಣೀಸಂತಾಪಮಂ **ಪೇಳುಗುಂ** ॥

ಮತ್ತು—

೧೨ "ಚುಂಬಿಜ್ಜಇ ಸಅಹುತ್ತಂ ಅವರುಂಧಿಜ್ಜಇ ಸಹಸ್ಸಹುತ್ತಮ್ಮಿ ।
ವಿರಮಿಅ ಪುಣೋ ರಮಿಜ್ಜಇ ಪಿಓ ಜಣೋ ಣತ್ಥಿ ಪುನರುತ್ತಂ ॥"

ನೂರುಸಲ ಚುಂಬನವು, ಸಾವಿರಾಲಿಂಗನವು ।
ಬಿಟ್ಟರೂ ಮತ್ತೆ ಸಂಭೋಗ ಪ್ರಿಯಜನಕೆ ।
**ಪುನರುಕ್ತಿ**[128] ಮಾತ್ರ ತಾನಿಲ್ಲ ॥

ಮತ್ತು—

೧೩ "ಕುವಿಆಓ ಪಸನ್ನಾಓ ಓರಣ್ಣಮುಹೀಓ ವಿಹಸಮಾಣಾಓ ।
ಜಹ ಗಹಿಓ ತಹ ಹಿಅಅಂ ಹರಂತಿ ಉಚ್ಛಿಂತಮಹಿಲಾಓ ॥"

ಮುಳಿಯಲೊಲಿದಿರಲವರು,
ರೋದಿಸಲಿ ನಗುತಿರಲಿ,

---

126 ಇಲ್ಲಿ 'ವದತಿ' ಎಂಬಲ್ಲಿ ಲಕ್ಷಣೆಯಿದೆ; 'ಸ್ಫುಟಗೊಳಿಸುವದು' ಎನ್ನುವದು ಲಕ್ಷ್ಯಾರ್ಥ ಈ ಗೂಢವರ್ಣನೆಯಿಂದ ಹೆಚ್ಚಿನ ರಮಣೀಯತೆಯೇನು ಬಂದಿತು? ಪ್ರಕಟವಾಗಿ 'ಸ್ಫುಟಗೊಳಿಸುವದು' ಎಂದೇ ಹೇಳಿದ್ದರೂ ಇಷ್ಟೇ ರಮಣೀಯತೆ ಇರುತ್ತಿರಲಿಲ್ಲವೆ? ಹೀಗೆ ರೂಢಿ-ಲಕ್ಷಣಾಸ್ಥಲದಲ್ಲಿ ಪ್ರಯೋಜನವು ನಿಗೂಢತ್ವವನ್ನು ಅಪೇಕ್ಷಿಸುವುದಿಲ್ಲ; ಆದರೆ (ಲಕ್ಷಣಾ ಮೂಲ) 'ಧ್ವನಿ' ಯಿರುವಲ್ಲಿ ಮಾತ್ರ ಲಕ್ಷಣಾ ಪ್ರಯೋಜನವು ನಿಗೂಢತ್ವವನ್ನೇ ಆಶ್ರಯಿಸಿರುತ್ತದೆ—ಲೋ.

127 ರತ್ನಾವಳೀ ನಾಟಿಕೆ. I

128 ಇಲ್ಲಿ 'ಪುನರುಕ್ತಿ' ಯೆಂಬ ವಾಚ್ಯಾರ್ಥ ಅಸಂಭವ; 'ಅನುಪಾದೇಯತ್ವ' ವೇ ಲಕ್ಷ್ಯಾರ್ಥ.—ಲೋ

ಹೇಗೆ ಹಿಡಿದರೆ[129] ಹಾಗೆ ಹೃದಯವನೆ ಜನರ।
ಸೂರೆಗೊಳ್ಳದೆ ಬಿಡರು,
ಸ್ವೈರಿಣೀ ಮಹಿಳೆಯರು॥

ಮತ್ತು—

೧೪ "ಅಜ್ಜಾಏ ಪಹಾರೋ ಣವಲದಾಏ ದಿಣ್ಣೋ ಪಿಏಣ ಥಣವಟ್ಟೇ।
ಮಉಏ ವಿ ದೂಸಹೋ ವ್ವಿಅ ಜಾಅ ಹಿಅಏ ಸವತ್ತೀಣಂ॥"

ಚಿಕ್ಕಹೆಂಡತಿಯೆದೆಯ ಮೇಲೆ ನಲ್ಲನು ಕೊಟ್ಟ[130]
ಬಳ್ಳಿಪೆಟ್ಟದು ಪುಟ್ಟದಾಗಿದ್ದರೂ।
'ಸಹಿಸಲಾರದ ಪೆಟ್ಟು!' ಎಂದೆನಿಸಿತದು ಸವತಿ-
ಪೆಣ್ಗಳೆಲ್ಲರ ಹೃದಯರಂಗದಲ್ಲಿ॥

ಮತ್ತು—

೧೫ "ಪರಾರ್ಥೇ ಯಃ ಪೀಡಾಮನುಭವತಿ ಭಂಗೇಽಪಿ ಮಧುರೋ
ಯದೀಯಃ ಸರ್ವೇಷಾಮಿಹ ಖಲು ವಿಕಾರೋಽಪ್ಯಭಿಮತಃ।
ನ ಸಂಪ್ರಾಪ್ತೋ ವೃದ್ಧಿಂ ಯದಿ ಸ ಭೃಶಮಕ್ಷೇತ್ರಪತಿತಃ
ಕಿಮಿಕ್ಷೋರ್ದೋಷೋಽಸೌ ನ ಪುನರಗುಣಾಯಾ ಮರುಭುವಃ॥"

ಅನುಭವಿಸಿ ಪೀಡೆಯನು ಪರರ ಸಲುವಾಗಿ,
ಮುರಿದರೂ, ಮಧುರತೆಯ ಮಾತ್ರ ಸೂಸಿ।
ಎಲ್ಲಾ ವಿಕಾರದಲು ಜನಕೆ ಬೇಕಾಗಿ,
ಊಷರಕ್ಷೇತ್ರದಲಿ ಬಿದ್ದು ಹೇಸಿ।
ವೃದ್ಧಿಯನು ಹೊಂದದಿರೆ ಕಬ್ಬಿನದು ತಪ್ಪೋ?
ಗುಣಹೀನವಾದ ಮರುಭೂಮಿಯದೆ ತಪ್ಪೋ?॥131

---

129 ಇಲ್ಲಿ ಹಿಡಿ=ಮೆಚ್ಚಾಗು; ಸೂರೆಗೊಳ್ಳು=ಗೆಲ್ಲು—ಎಂಬ ಲಕ್ಷ್ಯಾರ್ಥಗಳು.

130 ಮೂಲ-'ದತ್ತ'=ಅರ್ಪಿಸಿದ. ದಾನ ಫಲವೆಲ್ಲ ಆಕೆಗೇ ಸಮರ್ಪಿತವೆಂಬುದು ಲಕ್ಷ್ಯಾರ್ಥ. ಪೆಟ್ಟು ಕೊಟ್ಟದ್ದು ಒಬ್ಬಳಿಗೆ; ಪೀಡೆಯಾದುದು ಬೇರೆ ಯಾರಿಗೋ ಸವತಿಯರಿಗೆ ಎನ್ನುವಾಗ ವಿರೋಧಾಭಾಸ—ಲೋ.

131 ಇದು 'ಅಪ್ರಸ್ತುತ ಪ್ರಶಂಸೆ'. ಮಹಾಪುರುಷನ ವರ್ಣನೆ. 'ಪ್ರಸ್ತುತ'. ಪುರುಷನ ಪರವಾಗಿ ಅರ್ಥಮಾಡುವಾಗ 'ಅನುಭವತಿ' ಎಂಬ ಶಬ್ದದ ಮುಖ್ಯಾರ್ಥವೇ ಸರಿಹೋಗುತ್ತದೆ; ಆದರೆ ಅಪ್ರಸ್ತುತವಾದ (ಅಚೇತನ) ಕಬ್ಬಿನ ಪರವಾಗಿ ಅರ್ಥಮಾಡುವಾಗ 'ಪೀಡೆಗೊಂಡು' ಎಂಬ ಲಕ್ಷ್ಯಾರ್ಥ ಸ್ಫುರಿಸುತ್ತದೆ—ಲೋ.

ಇಲ್ಲಿ ಕಬ್ಬಿನ ಪರವಾದ ಅರ್ಥಮಾಡಿಕೊಂಡಾಗ 'ಅನುಭವಿಸಿ' ಎಂಬ ಶಬ್ದವು 'ಭಕ್ತಿ'ಗೆ ಉದಾಹರಣೆ. ಈ ವಿಧವಾದ ಪ್ರಯೋಗಗಳು 'ಧ್ವನಿ'ಯ ವಿಷಯವೆಂದು ಎಂದಿಗೂ ನಾವು ಒಪ್ಪುವುದಿಲ್ಲ. ಏಕೆಂದರೆ—

ಕಾರಿಕೆ

ಉಕ್ತ್ಯನ್ತರೇಣಾಶಕ್ಯಂ ಯತ್ತಚ್ಚಾರುತ್ವಂ ಪ್ರಕಾಶಯನ್ ।
ಶಬ್ದೋ ವ್ಯಂಜಕತಾಂ ಬಿಭ್ರದ್ ಧ್ವನ್ಯುಕ್ತೇರ್ವಿಷಯೀಭವೇತ್ ॥ ೧೪ ॥

ಮಿಕ್ಕ ಯಾವ ವಿಧವಾದ ಶಬ್ದವ್ಯಾಪಾರದಿಂದಲೂ ಅಸಾಧ್ಯವಾದಂತಹ ರಮಣೀಯತೆಯನ್ನು ಪ್ರಕಾಶಗೊಳಿಸುತ್ತ, ವ್ಯಂಜಕತ್ವವನ್ನು ಹೊಂದಿರುವ ಶಬ್ದವು[132] ಮಾತ್ರ 'ಧ್ವನಿ'ಯೆಂಬ ಹೆಸರಿಗೆ ಪಾತ್ರವಾಗುತ್ತದೆ.

ವೃತ್ತಿ

ಹಿಂದೆ ಉದಾಹರಿಸಿದ ಲಕ್ಷ್ಯಗಳಲ್ಲಿ, ಶಬ್ದವು ಪ್ರಕಾರಾಂತರದಿಂದ ಸಾಧಿಸಲು ಅಶಕ್ಯವಾದಂತಹ ರಮಣೀಯತೆಗೇನೂ ಕಾರಣವಾಗಿಲ್ಲ. ಅದೂ ಅಲ್ಲದೆ—

ಕಾರಿಕೆ

ರೂಢಾ ಯೇ ವಿಷಯೇಽನ್ಯತ್ರ ಶಬ್ದಾಃ ಸ್ವವಿಷಯಾದಪಿ ।
ಲಾವಣ್ಯಾದ್ಯಾಃ ಪ್ರಯುಕ್ತಾಸ್ತೇ ನ ಭವನ್ತಿ ಪದಂ ಧ್ವನೇಃ ॥ ೧೫ ॥

ತಮ್ಮ ಮುಖ್ಯವಾದ ಅರ್ಥದ ಬದಲು ಬೇರೆ ಅರ್ಥಾಂತರದಲ್ಲಿ ರೂಢಿಯಾಗಿ ಬಳಕೆಯಲ್ಲಿರುವ ಶಬ್ದಗಳು—ಉದಾಹರಣೆಗೆ 'ಲಾವಣ್ಯ' ಇವೇ ಮೊದಲಾದುವು—[133] ಪ್ರಯುಕ್ತವಾದಾಗಲೂ ಅವು 'ಧ್ವನಿ'ಗೆ ಆಸ್ಪದವನ್ನು ಕೊಡಲಾರವು.

ವೃತ್ತಿ

ಅಂತಹ ಶಬ್ದಗಳಲ್ಲಿ 'ಭಕ್ತಿ' ಅಥವಾ 'ಉಪಚರಿತ-ಶಬ್ದ-ವೃತ್ತಿ'ಯೇನೋ ಉಂಟು, ಆದರೆ ನಿಯಮದಿಂದ 'ಧ್ವನಿ'ಯಿದ್ದೇ ಇರುವುದಿಲ್ಲ. ಎಲ್ಲಾದರೂ ಒಂದು

---

132 'ಶಬ್ದ' ವೆಂಬುದನ್ನು 'ಧ್ವನಿ'ಯ ಐದರ್ಥಗಳಿಗನುಗುಣವಾಗಿ ಐದರ್ಥಗಳಲ್ಲಿ ಗ್ರಹಿಸಬೇಕು—ಲೋ

133 ಲಾವಣ್ಯ='ಉಪ್ಪಿನ ರುಚಿಯಿಂದ ಕೂಡಿರುವಿಕೆ' ಮುಖ್ಯಾರ್ಥ; 'ಹೃದ್ಯತ್ವ' ರೂಢಿಮೂಲವಾದ ಲಕ್ಷ್ಯಾರ್ಥ ಇಂತಹ ಗೌಣಾರ್ಥಗಳು ಮುಖ್ಯಾರ್ಥಪ್ರಾಯವೇ ಎನ್ನಬಹುದು—ಲೋ.

ಭಾಷಾಶಾಸ್ತ್ರದಲ್ಲಿ ಇವನ್ನು Dead Metaphors ಎನ್ನುತ್ತಾರೆ.

ಕಡೆ 'ಧ್ವನಿ'ಯು ಬಂದರೂ ಆ 'ಧ್ವನಿ'ಯು ಪ್ರಕಾರಾಂತರದಿಂದ 134 ಬರುವುದೇ ಹೊರತು, ಎಂದಿಗೂ ಆ 'ಭಾಕ್ತ'-ಶಬ್ದಗಳ ಮೂಲಕವೇ ಬರುವುದಿಲ್ಲ. ಮತ್ತೂ ಏನೆಂದರೆ—135

ಕಾರಿಕೆ

ಮುಖ್ಯಾಂ ವೃತ್ತಿಂ ಪರಿತ್ಯಜ್ಯ ಗುಣವೃತ್ತ್ಯಾರ್ಥದರ್ಶನಮ್ ।
ಯದುದ್ದಿಶ್ಯ ಫಲಂ ತತ್ರ ಶಬ್ದೋ ನೈವ ಸ್ಖಲದ್ಗತಿಃ ॥ ೨೦ ॥

ಶಬ್ದವು ಮುಖ್ಯವಾದ ವೃತ್ತಿಯನ್ನು (=ಅಭಿಧಾ ವ್ಯಾಪಾರವನ್ನು) ಬಿಟ್ಟು ಗುಣವೃತ್ತಿಯಿಂದ (=ಲಕ್ಷಣಾ ವ್ಯಾಪಾರದಿಂದ) ಅರ್ಥವನ್ನು ಬೋಧಿಸುವುದಕ್ಕೆ ಒಂದು ಪ್ರಯೋಜನವೇ ಕಾರಣವಾಗಿರುವುದಷ್ಟೆ, ಆ ಪ್ರಯೋಜನವನ್ನು ಸಹ ಶಬ್ದವು ಗುಣವೃತ್ತಿಯಿಂದಲೇ ಬೋಧಿಸಲಾರದು, ಏಕೆಂದರೆ ಆ ಕಾಲದಲ್ಲಿ ಶಬ್ದದ ಗಮನವೇನೂ ಕುಂಟುತ್ತಿರುವುದಿಲ್ಲ (= ಶಬ್ದದ ಮುಖ್ಯಾರ್ಥಕ್ಕೆ ಬಾಧೆ ಇರುವುದಿಲ್ಲ).

ವೃತ್ತಿ

ಸೌಂದರ್ಯಾತಿಶಯದಿಂದ ಕೂಡಿರುವ ಒಂದು ವಿಶಿಷ್ಟಾರ್ಥವೇ ಗುಣವೃತ್ತಿಯ ಪ್ರಯೋಗಕ್ಕೆ ಪ್ರಯೋಜನವೆಂದು ನಾವು ಅರ್ಥಮಾಡಿಕೊಳ್ಳುವಾಗ, ಆಗಲೂ (=ಆ ಪ್ರಯೋಜನಾಂಶದಲ್ಲಿಯೂ) ಶಬ್ದವು ಅಮುಖ್ಯವೇ ಎಂದುಬಿಟ್ಟರೆ (=ಆಗಲೂ ಮುಖ್ಯಾರ್ಥಕ್ಕೆ ಬಾಧೆಯಿದ್ದೇ ಇರುವುದೆಂದರೆ) ಅಂತಹ ಶಬ್ದಪ್ರಯೋಗವೇ ದೋಷ

---

134 ಎಂದರೆ, ವ್ಯಂಜಕತ್ವದ ಪ್ರಭಾವದಿಂದ—ಲೋ

135 ಎಲ್ಲೆಲ್ಲಿ 'ಭಕ್ತಿ'ಯುಂಟೋ ಅಲ್ಲೆಲ್ಲ 'ಧ್ವನಿ'ಯಿಲ್ಲ ಭಕ್ತಿಯೇ ಧ್ವನಿಯ ಲಕ್ಷಣವಾಗುವುದಾದರೆ ಭಕ್ತಿಯಿದ್ದಲ್ಲೆಲ್ಲ ಧ್ವನಿಯಿರಬೇಕಾಗಿದ್ದಿತು. ಹಾಗಿಲ್ಲ; ಆದ್ದರಿಂದ ಆ ಲಕ್ಷಣದಲ್ಲಿ 'ಅತಿವ್ಯಾಪ್ತಿ' ದೋಷ. ಒಂದು ವೇಳೆ ವಾದಕ್ಕೆ ಭಕ್ತಿಯೇ ಧ್ವನಿಯೆಂದೊಪ್ಪಿದರೂ ಸಹ, ಲಕ್ಷಣಾ ವ್ಯಾಪಾರದ ವಿಷಯ ಬೇರೆ; ಧ್ವನನ ವ್ಯಾಪಾರದ ವಿಷಯ ಬೇರೆ. ಭಿನ್ನ ವಿಷಯಗಳಾದ ಎರಡರಲ್ಲಿ ಧರ್ಮ-ಧರ್ಮಿಭಾವವೇ ಅಶಕ್ಯ. 'ಧರ್ಮ'ವೆಂಬುದೇ 'ಲಕ್ಷಣ'ವೆಂದರೂ, ಲಕ್ಷಣಾ ವ್ಯಾಪಾರದ ವಿಷಯ-ಅಮುಖ್ಯವಾದ ಅರ್ಥ. ಧ್ವನನದ ವಿಷಯವಾದರೋ-ಪ್ರಯೋಜನ. ಈ ಪ್ರಯೋಜನಾಂಶದಲ್ಲಿಯೂ ಮತ್ತೆ ಲಕ್ಷಣಾ ವ್ಯಾಪಾರ ಸಾಧ್ಯವಿಲ್ಲ; ಏಕೆಂದರೆ ಅಲ್ಲಿ ಲಕ್ಷಣಾ ಸಾಮಗ್ರಿಯೇ ಇಲ್ಲ—ಲೋ.

ವೆನಿಸೀತು (ಪ್ರಯೋಜನಾಂತರವು ಇಲ್ಲದೆ ಇರೋಣದರಿಂದ).136 ಆದರೆ ವಸ್ತುತಃ ಹೀಗಿಲ್ಲ.137

ಆದಕಾರಣ—

ಕಾರಿಕೆ

ವಾಚಕತ್ವಾಶ್ರಯೇಣೈವ ಗುಣವೃತ್ತಿರ್ವ್ಯವಸ್ಥಿತಾ ।
ವ್ಯಂಜಕತ್ವೈಕಮೂಲಸ್ಯ ಧ್ವನೇಃ ಸ್ಯಾಲ್ಲಕ್ಷಣಂ ಕಥಮ್ ॥ ೨೧ ॥

ವಾಚಕತ್ವದ ಆಧಾರದ ಮೇಲೆಯೇ ವ್ಯವಸ್ಥಿತವಾಗಿರುವ 'ಗುಣವೃತ್ತಿ'ಯು ವ್ಯಂಜಕತ್ವವೊಂದನ್ನೇ ಆಧಾರವಾಗಿ ಉಳ್ಳ 'ಧ್ವನಿ'ಗೆ ಹೇಗೆ ತಾನೆ ಲಕ್ಷಣವೆನಿಸೀತು?

ವೃತ್ತಿ

ಆದುದರಿಂದ 'ಧ್ವನಿ'ಯೇ ಬೇರೆ; 'ಗುಣವೃತ್ತಿ'ಯೇ ಬೇರೆ. ಇದರ ಜತೆಗೆ ಗುಣವೃತ್ತಿಯೇ 'ಧ್ವನಿ'ಯೆಂಬ ಲಕ್ಷಣವನ್ನು ಹೇಳಿದರೆ 'ಅವ್ಯಾಪ್ತಿ'ದೋಷವೂ ಸಂಘಟಿಸುತ್ತದೆ.138 ಏಕೆಂದರೆ 'ಧ್ವನಿ'ಯ ಪ್ರಭೇದವಾದ 'ವಿವಕ್ಷಿತಾನ್ಯಪರವಾಚ್ಯ'

---

136 ಅಮುಖ್ಯಾರ್ಥದಲ್ಲಿ ಶಬ್ದ ಪ್ರಯೋಗ ಮಾಡುವುದಕ್ಕೆ ಪ್ರಯೋಜನದ ಸುಖ ಪ್ರತೀತಿಯೇ ಕಾರಣ. ಉದಾಹರಣೆಗೆ 'ವಿದ್ಯಾರ್ಥಿಯು ಸಿಂಹ' ಎಂಬ ಪ್ರಯೋಗದಲ್ಲಿ ಶೌರ್ಯಾತಿಶಯದ ಪ್ರತೀತಿಯೇ ಪ್ರಯೋಜನ. ಆ ಪ್ರಯೋಜನದ ಪ್ರತೀತಿ ಕೂಡ ನೇರವಾಗಿ ಆಗದೆ ತಡವರಿಸಿಕೊಂಡು ಅಗುವುದಾದರೆ ಅಂತಹ ಪ್ರಯೋಗ ಮಾಡುವುದು ತಾನೆ ಏಕೆ? ಲಕ್ಷಣೆಯಿಂದ ಆಗುವುದೆನ್ನಬೇಕಾದರೆ ಮತ್ತೊಂದು ಪ್ರಯೋಜನವನ್ನು ಹುಡುಕಬೇಕು; ಆ ಪ್ರಯೋಜನಕ್ಕೆ ಮತ್ತೊಂದು ಕಾರಣ—ಹೀಗೆ ಅನವಸ್ಥೆಯೊದಗೀತು ವಸ್ತುತಃ, ಪ್ರಯೋಜನ ನೇರವಾಗಿಯೇ ಶಬ್ದದಿಂದ ಪ್ರತೀತವಾಗುತ್ತದೆ; ಆದರೆ ಅದು ಅಭಿಧೆಯೂ ಅಲ್ಲ; 'ಸಂಕೇತ' ವಿಲ್ಲದ ಕಾರಣ; ಅಭಿಧೆಯೂ ಅಲ್ಲದೆ, ಲಕ್ಷಣೆಯೂ ಅಲ್ಲದೆ, ಅನುಭವ ಗೋಚರವಾದ ಶಬ್ದ ವ್ಯಾಪಾರವೆಂದರೆ ಧ್ವನನವೇ ಸರಿ—ಲೋ.

137 ಶಬ್ದ ಪ್ರಯೋಗದಲ್ಲಿ ದೋಷವಿಲ್ಲ; ಪ್ರಯೋಜನವೂ ಎಡರಿಲ್ಲದೆ ಪ್ರತೀತಿಗೆ ಬರುವುದರಿಂದ. ಅಭಿಧೆಯೇ ಬಾಧಿತವಾದಾಗ ಕುಂಟಿದಂತಾಗಿ, ತಿರುಗಿ ಅಮುಖ್ಯಾರ್ಥದವರೆಗೆ ಪಸರಿಸಿದಾಗ ಲಕ್ಷಣೆಯೆನಿಸುತ್ತದೆ. ಈ ಶಬ್ದಕ್ಕೆ ಇದೇ ಅಮುಖ್ಯಾರ್ಥವೆಂದು ಒಂದು ರೀತಿಯ 'ಸಂಕೇತ'ವೂ ಉಂಟೆನ್ನಲವಕಾಶವಿದೆ ಆದ್ದರಿಂದ ಅಭಿಧೆಯ ಬಾಲವೇ ಲಕ್ಷಣೆ, ಧ್ವನನದಂತೆ ಸ್ವತಂತ್ರ ವ್ಯಾಪಾರವಲ್ಲ—ಲೋ

138 ಎಲ್ಲೆಲ್ಲಿ 'ಧ್ವನಿ' ಯುಂಟೋ ಅಲ್ಲೆಲ್ಲ ಭಕ್ತಿಯಿದ್ದುದಾದರೆ 'ಅವ್ಯಾಪ್ತಿ' ಇರುತ್ತಿರಲಿಲ್ಲ. ಆದರೆ ಹೀಗಿಲ್ಲ. 'ಅವಿವಕ್ಷಿತ ವಾಚ್ಯ' ಧ್ವನಿಯಲ್ಲೇನೋ (ಉದಾ:-'ಸುವರ್ಣ ಪುಷ್ಪಾಂ') ಭಕ್ತಿಯಿದೆ; ಮಿಕ್ಕ ಕಡೆಗಳಲ್ಲಿ (ಉದಾ-'ಶಿಖರಿಣಿ....') ಎಲ್ಲಿದೆ?

ವಾಗಲಿ, ಮಿಕ್ಕ ಇನ್ನೂ ಅನೇಕ ಧ್ವನಿ-ಪ್ರಕಾರಗಳಾಗಲಿ 'ಭಕ್ತಿ'ಯೊಳಗೆ ಸೇರುವುದಿಲ್ಲ.139 ಆದುದರಿಂದ 'ಭಕ್ತಿ'ಯು ಧ್ವನಿಗೆ ಲಕ್ಷಣವಲ್ಲ.

---

139 ಪೂರ್ವಪಕ್ಷಿಗಳು ಹೀಗೆ ವಾದಿಸಬಹುದು :—'ಲಕ್ಷಣೆ' ವ್ಯಾಪಕವಾದುದು ; 'ಗೌಣಿ' ಯೆಂಬುದು ಅದರ ಭೇದ ಮಾತ್ರ. ಶಬ್ದವು ಗೌಣಾರ್ಥವನ್ನು ಬೋಧಿಸಿ, ಅದರೊಂದಿಗೆ ಸಾಮಾನಾಧಿಕರಣ್ಯವನ್ನು ಪಡೆದಾಗ 'ಗೌಣೀ'.—ಉದಾ-'ವಿದ್ಯಾರ್ಥಿಯು ಸಿಂಹ !' ಹಾಗೆಯೇ ಒಂದರ್ಥವು ಮತ್ತೊಂದರ್ಥವನ್ನು ಲಕ್ಷಣೆಯಿಂದ ಬೋಧಿಸಿ ಸ್ವಶಬ್ದವನ್ನು ಮತ್ತೊಂದರೊಡನೆ ಸಮಾನಾಧಿಕರಣವಾಗಿಸಿದಾಗ ಲಕ್ಷಣೆ, ಶಬ್ದಾರ್ಥಗಳೆರಡೂ ಕೂಡ ಏಕಕಾಲದಲ್ಲಿ ಅನ್ಯಾರ್ಥವನ್ನು ಬೋಧಿಸಿ, ಆ ಅನ್ಯ ಶಬ್ದಾರ್ಥಗಳೊಡನೆ ಸಂಮಿಶ್ರವಾಗಿ ಬಿಟ್ಟಾಗಲೂ ಲಕ್ಷಣೆಯೇ. ಇದೇ ಗೌಣಿಗೂ ಲಕ್ಷಣೆಗೂ ಭೇದ "ಗೌಣದಲ್ಲಿ ಶಬ್ದಪ್ರಯೋಗವಿರುತ್ತದೆ, ಲಕ್ಷಣೆಯಲ್ಲಿಲ್ಲ." ಎಲ್ಲ ಕಡೆಗೂ ಸಮಾನವಾಗಿ ಅನ್ವಯಿಸುವ ತತ್ತ್ವ ಲಕ್ಷಣೆಯೇ. ಅದು ವ್ಯಾಪಕವಾದುದು ಅದರ ಬಗೆಗಳು ಐದು.—

i) ವಾಚ್ಯಾರ್ಥ ಸಂಯೋಗದಿಂದ ಬರತಕ್ಕದು—ಉದಾ· 'ದ್ವಿರೇಫ' (=ಭ್ರಮರ) =ದುಂಬಿ.

ii) ಸಾಮೀಪ್ಯದಿಂದ ಬರತಕ್ಕದು—ಉದಾ 'ಗಂಗೆಯಲ್ಲಿ ಹಳ್ಳಿ'=ಗಂಗಾ ತೀರದಲ್ಲಿ ಹಳ್ಳಿ.

iii) ಸಂಬಂಧದಿಂದ ಬರತಕ್ಕದು—ಉದಾ 'ಕೋಲುಗಳನ್ನು ಒಳಗೆ ಕರೆಯಿರಿ' =ಕೋಲು ಹಿಡಿದವರನ್ನು ಒಳಗೆ ಕರೆಯಿರಿ.

iv) ವಿರೋಧದಿಂದ ಬರತಕ್ಕದು (Irony)—ಉದಾ : ಶತ್ರುವನ್ನು ಕುರಿತು, 'ಅಬ್ಬಾ, ಅವನು ನನಗೆ ಮಾಡದ ಉಪಕಾರವಿದೆಯೇ ?' ಎಂದಾಗ 'ಅಪಕಾರ' ಎಂದರ್ಥ.

v) ಕಾರ್ಯಕಾರಣ ಯೋಗದಿಂದ ಬರತಕ್ಕದು—ಉದಾ : ಅನ್ನವನ್ನು ಕಿತ್ತುಕೊಳ್ಳುವವನನ್ನು ಕುರಿತು 'ಪ್ರಾಣವನ್ನು ಕಿತ್ತುಕೊಳ್ಳುತ್ತಿರುವನು' ಎಂಬ ಪ್ರಯೋಗ,

ಹೀಗೆ ಈ ಐದು ಬಗೆಯ ಲಕ್ಷಣೆಗಳಿಂದ ಸಕಲ ವಾಕ್ಯಗಳನ್ನೂ ವಿವರಿಸಬಹುದು. ಆದ್ದರಿಂದ "ಶಿಖರಿಣಿ...." ಮುಂತಾದ ಉದಾಹರಣೆಗಳಲ್ಲಿಯೂ ಆಕಸ್ಮಿಕವಾದ ಪ್ರಶ್ನೆ ಎಂಬ ಮುಖ್ಯಾರ್ಥ ಬಾಧಿತವೆಂದು ತಿಳಿದಾಗ ಸಾದೃಶ್ಯಮೂಲವಾದ ಲಕ್ಷಣೆ ಇದ್ದೇ ಇದೆ ನೀವೂ ಹೌದೆನ್ನುವುದಾದರೆ "ವಿವಕ್ಷಿತಾನ್ಯಪರ"ವೆಂಬ ಹೆಸರು ಅನುಚಿತವಾಗುವುದಲ್ಲವೆ ?

ಸಿದ್ಧಾಂತಿಯ ಉತ್ತರ ಹೀಗೆ—"ಇಲ್ಲಿ ಮುಖ್ಯವಾಗಿ ಅಸಂಲಕ್ಷ್ಯಕ್ರಮವಾದ 'ರಸಾದಿಧ್ವನಿ'ಯ ಭೇದಗಳನ್ನು ದೃಷ್ಟಿಯಲ್ಲಿಟ್ಟು ಆ ಹೆಸರನ್ನು ಬಳಸಲಾಗಿದೆ. ರಸ, ಭಾವ, ರಸಾಭಾಸ ಮುಂತಾದುವೆಲ್ಲ ಅದರ ಭೇದಗಳು. ಅವುಗಳಲ್ಲೆಲ್ಲೂ ಲಕ್ಷಣೆಗೆ ಪ್ರಸಕ್ತಿಯಿಲ್ಲ. ವಿಭಾವ, ಅನುಭಾವ ಇತ್ಯಾದಿಗಳನ್ನು ವರ್ಣಿಸುವ ಕಾವ್ಯದಲ್ಲಿ ಮುಖ್ಯಾರ್ಥಕ್ಕೆ ಬಾಧೆಯಿರುವುದೇ ಅಸಂಭವ ; ಇನ್ನು ಲಕ್ಷಣೆಗೆ ಅವಕಾಶವೆಲ್ಲಿ ?

"ಬಾಧೆಯಿಲ್ಲದಿದ್ದರೆ ಬೇಡ. 'ಮುಖ್ಯಾರ್ಥದ ಜತೆಜತೆಗೆ ಬರುವ ಪ್ರತೀತಿ ಲಕ್ಷಣೆ'ಯೆಂಬುದಿಷ್ಟೇ ಅದರ ಸ್ವರೂಪ, ವಿಭಾವಾದಿಗಳ ಜತೆಗೇ ರಸಪ್ರತೀತಿ ಇಲ್ಲಿಯೂ ಬರುವುದರಿಂದಲೇ ಲಕ್ಷಣೆ; ವಿಭಾವಾನುಭಾವಗಳು ಕಾರಣ-ಕಾರ್ಯಗಳು, ವ್ಯಭಿಚಾರಿಗಳು ಸಹಕಾರಿಗಳು" ಎಂದು ಪೂರ್ವಪಕ್ಷಿಯೇನೋ ವಾದಿಸಬಹುದು. ಅದಕ್ಕೆ ಪ್ರತ್ಯುತ್ತರ—ಹೊಗೆಯ ಶಬ್ದ-ಜ್ಞಾನದಿಂದ ಬೆಂಕಿಯ ಸ್ಮೃತಿ ಬಂದರೆ ಆ ಸ್ಮೃತಿಗೂ ಲಕ್ಷಣೆಯೇ ಕಾರಣವೆನ್ನಬಾರದೇಕೆ? ಆಮೇಲೆ ಬರುವ ಶೀತನಾಶಕತ್ವದ ಸ್ಮರಣೆಯೂ ಶಬ್ದಾರ್ಥವೇ ಆಗಬೇಕಷ್ಟೆ? 'ಹೊಗೆ'ಯೆಂಬ ಶಬ್ದಕ್ಕೆ ಮುಖ್ಯಾರ್ಥದಲ್ಲಿ ಪರ್ಯವಸಾನವಿರುವುದರಿಂದ ಅಷ್ಟೆಲ್ಲಾ ದೂರ ಹೋಗುವ ಶಕ್ತಿ ಇಲ್ಲವೆಂದರೆ ಮುಖ್ಯಾರ್ಥಬಾಧೆಯೇ ಲಕ್ಷಣೆಯ ಜೀವಾಳವೆಂಬ ತತ್ತ್ವಕ್ಕೇ ಬಂದು ನಿಂತಂತಾಯಿತು. 'ಹೊಗೆಯ ಶಬ್ದ ಪ್ರತೀತಿಯಲ್ಲಿ ಹೇಗೋ ಹಾಗೆ ರಸಪ್ರತೀತಿಯ ಸ್ಥಳದಲ್ಲಿ ಶಬ್ದವ್ಯಾಪಾರವೇ ಇಲ್ಲ; ನಾಯಕಾದಿಗಳ ಚಿತ್ತವೃತ್ತಿಯ ಪ್ರತೀತಿ ಮಾತ್ರ ಇರುತ್ತದೆ' ಎಂದು ವಾದಿಸುವ ಮೀಮಾಂಸಕನನ್ನು ಹೀಗೆ ಕೇಳಬೇಕಾಗಿದೆ—'ಪ್ರತೀತಿ ಸ್ವರೂಪವನ್ನು ಬಲ್ಲ ಮಹಾಶಯರೆ, ನೀವು ಅನ್ಯರ ಚಿತ್ತವೃತ್ತಿಯ ಪ್ರತೀತಿಯೇ ರಸಪ್ರತೀತಿಯೆಂದು ಭಾವಿಸುವಿರಲ್ಲವೆ? ಅದು ನಿಮ್ಮ ಭ್ರಮೆ ಮಾತ್ರ ಏಕೆಂದರೆ ಲೋಕದಲ್ಲಿರುವ ಚಿತ್ತವೃತ್ತಿಗಳನ್ನೇ 'ಅನುಮಾನ' ಮಾಡಿದ ಮಾತ್ರಕ್ಕೆ "ರಸತ್ವ"ವೆಲ್ಲಿಂದ ಬರಬೇಕು? ರಸಾಸ್ವಾದವೆಂಬುದು ಅಲೌಕಿಕವಾದ ಚಮತ್ಕಾರ, ಕಾವ್ಯಗತವಾದ ವಿಭಾವಾದಿಗಳ ಚರ್ವಣೆ ಅದರ ಪ್ರಾಣ. ಸ್ಮರಣೆ, ಅನುಮಾನ, ಮುಂತಾದ ಲೌಕಿಕ ವ್ಯವಹಾರಗಳಿಂದ ಅದನ್ನು ನೋಯಿಸಲು ಸಲ್ಲದು. ಆದರೆ ಲೌಕಿಕವಾದ ಕಾರ್ಯ, ಕಾರಣ, ಅನುಮಾನಾದಿಗಳಿಂದ ಸಂಸ್ಕೃತ ಹೃದಯನಾದವನು ವಿಭಾವಾದಿಗಳನ್ನು ತಿಳಿಯುವಾಗಲೇ ರಸವನ್ನೂ ಅನುಭವಿಸುತ್ತಾನೆ, ತಟಸ್ಥನಂತೆ ಕೇವಲ ಬೌದ್ಧಿಕವಾಗಿ ಅರಿಯುವುದಿಲ್ಲ, 'ಹೃದಯಸಂವಾದ' ಅಥವಾ 'ಸಹೃದಯತ್ವ'ದ ಫಲವಾಗಿ ಪರವಶನಾಗಿ, ಉಕ್ಕುತ್ತಿರುವ ರಸಾನುಭವದಲ್ಲಿ ಭಾಗಿಯಾಗುತ್ತಾನೆ. ಅನುಮಾನ, ಸ್ಮರಣ ಮುಂತಾದ ಲೌಕಿಕ ಸರಣಿಯನ್ನು ಸೋಂಕುವುದಿಲ್ಲ; ತನ್ಮಯೀಭವನಕ್ಕೆ ಉಚಿತವಾದ ಚರ್ವಣಾವಸ್ಥೆಯಲ್ಲಿ ಮಗ್ನನಾಗಿರುತ್ತಾನೆ. ಈ ರಸಚರ್ವಣೆ ಹಿಂದೆಂದೂ ಪ್ರಮಾಣಾಂತರಗಳಿಂದ ಜನಿತವಾದ ಅನುಭವವಲ್ಲ; ಆದ್ದರಿಂದ 'ಸ್ಮೃತಿ'ಯೆನಿಸದು. ಸವಿಯುವಾಗ ಕೂಡ ಪ್ರಮಾಣಾಂತರಗಳ ಪ್ರಸಕ್ತಿ ಅದಕ್ಕಿಲ್ಲ, ಅಲೌಕಿಕ ಅನುಭವದಲ್ಲಿ ಪ್ರತ್ಯಕ್ಷಾದಿಗಳಿಗೆ ಅವಕಾಶವಿಲ್ಲವಾದ್ದರಿಂದ. ಆದ್ದರಿಂದಲೇ 'ವಿಭಾವ' ಮುಂತಾದ ಅಲೌಕಿಕ ಶಬ್ದಗಳನ್ನೇ ವ್ಯವಹಾರ ಮಾಡುವುದಾದರೂ. ಲೋಕದಲ್ಲಿ 'ಕಾರಣ'ವೆನ್ನುವುದನ್ನೇ ಕಾವ್ಯದಲ್ಲಿ 'ವಿಭಾವ'ವೆನ್ನುತ್ತೇವೆ. ಲೋಕದಲ್ಲಿ ಯಾವುದು ಕಾರ್ಯವೋ ಅದೇ ಕಾವ್ಯದಲ್ಲಿ 'ಅನುಭಾವ' ಇಲ್ಲಿ ಪರಕೀಯ ಚಿತ್ತವೃತ್ತಿಯಷ್ಟೇ ಗಮ್ಯವಲ್ಲವೆಂದು ತೋರಿಸುವುದಕ್ಕಾಗಿಯೇ ರಸಸೂತ್ರದಲ್ಲಿ ('ವಿಭಾವಾನುಭಾವ....') 'ಸ್ಥಾಯಿ' ಭಾವವನ್ನು ನಿರ್ದೇಶಿಸಲಾಗಿಲ್ಲ. ನಿರ್ದೇಶಿಸಿದ್ದರೆ ರಸಪ್ರಕ್ರಿಯೆಗೆ ದೊಡ್ಡ ಮುಳ್ಳಿನಂತಾಗುತ್ತಿದ್ದಿತು. ಸ್ಥಾಯಿಯು ರಸವಾಗಿ ಪರಿಣಮಿಸುವುದೆಂಬ ಮಾತಿನಲ್ಲಿ ಔಚಿತ್ಯವಿದೆ.—ಸ್ಥಾಯಿಯು ವಿಭಾವಾನುಭಾವಗಳಿಗೆ ಉಚಿತವಾದ ಚಿತ್ತವೃತ್ತಿಸಂಸ್ಕಾರದಿಂದ ಮಾತ್ರ ಸುಂದರ ಚರ್ವಣೆ ಫಲಿಸುತ್ತದೆ. ಲೋಕದ ಚಿತ್ತವೃತ್ತಿಯ ಪರಿಜ್ಞಾನಾ

ವಸ್ಥೆಯ ಹೃದಯ ಸಂವಾದಕ್ಕೆ ಉಪಯೋಗಿಯಾಗುತ್ತದೆ; ಉದ್ಯಾನ ಪುಲಕಾದಿಗಳಿಂದ ಸ್ಥಾಯಿಭಾವಗಳಾದ ರತ್ಯಾದಿಗಳ ಅರಿವಾಗುವುದರಿಂದ. ವ್ಯಭಿಚಾರಿ ಭಾವ ಕೂಡ (ಸ್ಥಾಯಿಯಂತೆ) ಚಿತ್ತವೃತ್ತಿ ಸ್ವರೂಪವೇ ಆದರೂ ಮುಖ್ಯ (=ಸ್ಥಾಯಿ) ಚಿತ್ತವೃತ್ತಿಪಾರವಶ್ಯದಿಂದ ಮಾತ್ರ ಚರ್ವಿತವಾಗುವ ಕಾರಣ ಅದನ್ನು ವಿಭಾವಾದಿಗಳೊಡನೆ ಸೂತ್ರದಲ್ಲಿ ಹೆಸರಿಸಲಾಗಿದೆ. ಆದ್ದರಿಂದ "ರಸನಿಷ್ಪತ್ತಿ"ಯೆಂದರೆ—ಕಾವ್ಯಕಥೆಯಲ್ಲಿ ಬರುವ ಬಂಧು ಸಮಾಗಮ ಮುಂತಾದ ಕಾರಣಗಳ ಮೂಲಕ ಬರುವ ಹರ್ಷಾದಿ ಲೌಕಿಕ ಚಿತ್ತವೃತ್ತಿಯಲ್ಲವೇ ಅಲ್ಲ, ಅದನ್ನು ಸಂಪೂರ್ಣವಾಗಿ ಮೆಟ್ಟಿ ಆಸ್ವಾದದಲ್ಲಿ ಮಾತ್ರ ಆರೂಢವಾಗುವ ಅಲೌಕಿಕ ಅನುಭವ ಮಾತ್ರ. ಆದ್ದರಿಂದ ಚರ್ವಣಾ ವ್ಯಾಪಾರ 'ಅಭಿವ್ಯಂಜನೆ'ಯೇ ಹೊರತು 'ಜ್ಞಾಪನ'ವಲ್ಲ (ಇತರ ಪ್ರಮಾಣ ವ್ಯಾಪಾರಗಳಂತೆ); ಉತ್ಪಾದನವಲ್ಲ (ಕಾರಣ ವ್ಯಾಪಾರದಂತೆ). ಪ್ರಸಿದ್ಧವಾದ ಏನೂ ಅಲ್ಲದ ಇದಾವುದೆಂದರೆ ಅದೇ ಅಲೌಕಿಕ "ರಸ" ವಿಭಾವಾದಿಗಳು ಜ್ಞಾಪಕವೂ ಅಲ್ಲ, ಕಾರಕವೂ ಅಲ್ಲ, ಕೇವಲ ಚರ್ವಣೆಗೆ ಉಪಯೋಗಿಗಳು. ಇದನ್ನು ಎಲ್ಲಾದರೂ ಕಂಡವರುಂಟೆ? ಎಂದರೆ, ಕಾಣದಿರುವುದರಿಂದಲೇ 'ಅಲೌಕಿಕ'ವೆನ್ನುವುದು ಹಾಗಾದರೆ ರಸ "ಅಪ್ರಮಾಣ"ವಲ್ಲವೆ? ಎಂದರೆ 'ಆಗಿಕೊಳ್ಳಲಿ, ಚರ್ವಣೆಯೇ ಅದರ ಪರಮಪ್ರಯೋಜನ, ಪ್ರಾಮಾಣ್ಯಾದಿ ಪ್ರಯೋಜನಾಂತರ ನಮಗೆ ಉದ್ದಿಷ್ಟವಲ್ಲ,' ಎಂಬುದು ಒಂದು ದೃಷ್ಟಿ. ಸ್ವಸಂವೇದನವೆಂಬ ಪ್ರಮಾಣ ಸಿದ್ಧವಾದ್ದರಿಂದ ಸಪ್ರಮಾಣವೇ ಎಂಬುದು ಸಿದ್ಧಾಂತ.

ಹೀಗೆ ರಸ 'ಅಲೌಕಿಕ'ವಾದುದರಿಂದಲೇ ಅರ್ಥಕ್ಕೆ ಉಪಯೋಗಿಗಳಲ್ಲದ ಲಲಿತ, ಪರುಷ, ಮುಂತಾದ ಅನುಪ್ರಾಸಾದಿಗಳು ರಸಕ್ಕೆ ವ್ಯಂಜಕವಾಗುತ್ತವೆ. ಅಲ್ಲಿ ಲಕ್ಷಣೆಯ ಶಂಕೆಗೆ ತಾನೆ ಎಡೆಯೆಲ್ಲಿ? ಕಾವ್ಯಾತ್ಮಕ ಶಬ್ದದ ನಿಷ್ಪೀಡನದಿಂದಲೇ ಅಲ್ಲಲ್ಲ ಚರ್ವಣೆ ಕಾಣುತ್ತದೆ. ಅದೇ ಕಾವ್ಯವನ್ನೇ ಮತ್ತೆ ಮತ್ತೆ ಓದಿ ಆಸ್ವಾದಿಸುವ ಸಹೃದಯರಿರುತ್ತಾರೆ ಆದ್ದರಿಂದ ಅರ್ಥನಿರಪೇಕ್ಷವಾದ ಶಬ್ದಕ್ಕೂ ಧ್ವನನವ್ಯಾಪಾರವುಂಟೆಂದು ಸಿದ್ಧವಾದಂತಾಯಿತು. ಆದ್ದರಿಂದಲೇ ರಸಪರವಾದ ಧ್ವನಿ "ಅಲಕ್ಷ್ಯಕ್ರಮ"

ಕಾವ್ಯಕ್ಕೆ 'ವಾಚ್ಯ', 'ವ್ಯಂಗ್ಯ' ಎಂಬ ಅರ್ಥದ್ವಯವನ್ನೊಪ್ಪುವುದಾದರೆ ಮೀಮಾಂಸಾ ಶಾಸ್ತ್ರದಲ್ಲಿ ಹೇಳುವ 'ವಾಕ್ಯಭೇದ'ವೆಂಬ ದೋಷ ಬರುವುದಲ್ಲವೆ? ಎಂದು ಕೇಳುವುದು ಅವರ ಅನಭಿಜ್ಞತೆಯನ್ನೇ ತೋರಿಸುತ್ತದೆ ವಸ್ತುತಃ, 'ವಿಧಿ'ಗಳನ್ನು ಹೇಳುವ ಆ ಶಾಸ್ತ್ರದ ವಾಕ್ಯಗಳಲ್ಲಿಯೇ ಈ ದೋಷದ ಪ್ರಸಕ್ತಿಯಿಲ್ಲ, ಏಕಕಾಲದಲ್ಲಿ ವಿರುದ್ಧಾರ್ಥಕ ಸಂಕೇತಗಳ ಸ್ಮರಣೆ, ಅಥವಾ ಒಂದೇ ವ್ಯಾಪಾರ ಮತ್ತೆ ಮತ್ತೆ ಭಿನ್ನಾರ್ಥಗಳ ಬೋಧೆಗೆ ಪ್ರವರ್ತಿಸುವುದು, ಅಥವಾ ಪ್ರಕರಣಾದಿಗಳು ನಿಯಾಮಕವಾಗದಿರುವುದು, ಇದೊಂದೂ ಸಂಭವವೇ ಅಲ್ಲ. ದೋಷ ಬರುವ ಕಡೆಯೆಂದರೆ ಯಾವ ಆಧಾರವೂ ಇಲ್ಲದೆ 'ಸ್ವರ್ಗಕಾಮನು ಅಗ್ನಿಹೋತ್ರ ಮಾಡಬೇಕು,' ಮುಂತಾದ ವಾಕ್ಯಕ್ಕೆ 'ನಾಯ ಮಾಂಸವನ್ನು ತಿನ್ನಬೇಕು' ಎಂಬಂಥ ಅಸಂಬದ್ಧ ಅರ್ಥವನ್ನು ಹೇಳಿದಾಗ ಮಾತ್ರ.

ಕಾವ್ಯದಲ್ಲಿ ಈ ಪ್ರಸಕ್ತಿಯಿಲ್ಲ. ವಾಚ್ಯಾರ್ಥದೊಡವೆ ಸುಸಂಬದ್ಧವಾದ ವಿಭಾವಾದಿಗಳೇ

ಕಾರಿಕೆ

ಕಸ್ಯಚಿದ್ ಧ್ವನಿಭೇದಸ್ಯ ಸಾ ತು ಸ್ಯಾದುಪಲಕ್ಷಣಮ್ ।

ಧ್ವನಿಯ ಯಾವುದಾದರೂ ಒಂದು ಭೇದಕ್ಕೆ ಮಾತ್ರ ಅದು ಒಂದು ವೇಳೆ 'ಉಪಲಕ್ಷಣ' (=ನಿರ್ದೇಶಕ)ವಾದರೂ ಆಗಬಹುದು.140

ವೃತ್ತಿ

'ಅದು'=ಆ 'ಭಕ್ತಿ'ಯಾದರೋ ಮುಂದೆ ಹೇಳಲಿರುವ ಅನೇಕ 'ಧ್ವನಿ'-ಪ್ರಭೇದಗಳ ಮಧ್ಯೆ ಯಾವುದೋ ಒಂದು ಭೇದಕ್ಕೆ ಮಾತ್ರ ಒಂದು ವೇಳೆ ಉಪಲಕ್ಷಣವಾಗಬಹುದೆಂದು ಇಷ್ಟನ್ನು ಮಾತ್ರ ಊಹಿಸಬಹುದು. ಹಾಗಲ್ಲದೆ ಗುಣ

---

ಚರ್ವಣೆಗೆ ವಿಷಯಗಳಾಗುತ್ತವೆ, ಸಂಕೇತಕ್ಕೆ ಇಲ್ಲಿ ಬೆಲೆ ತಪ್ಪದು. ಶಾಸ್ತ್ರವಿಧಿಯ ಬೋಧಕಾಲದಲ್ಲಿ "ಇದು ನನ್ನ ಕರ್ತವ್ಯ"ವೆಂದೂ ಅನುಷ್ಠಾನ ಕಾಲದಲ್ಲಿ "ನಾನು ಈಗ ಮಾಡುತ್ತೇನೆ" ಎಂದೂ, ಕಡೆಗೆ "ನನ್ನ ಕೆಲಸ ಪೂರೈಸಿತು" ಎಂದೂ ಪ್ರತೀತಿಯುಂಟು; ಪುರುಷಾರ್ಥಸಾಧಕವಾದ ಲೌಕಿಕ ಕ್ರಿಯೆಯಿರುವುದರಿಂದ. ಆದರೆ ವಿಭಾವಾದಿಗಳ ಚರ್ವಣೆ ಅದ್ಭುತ ಪುಷ್ಪದಂತೆ ತತ್ಕಾಲ ಮಾತ್ರ ಗೋಚರ ಇದಕ್ಕೆ ಭೂತ ಭವಿಷ್ಯತ್ಕಾಲಗಳ ಸಂಪರ್ಕವಿಲ್ಲ. ಹೀಗೆ ಒಂದು ಕಡೆ ಲೌಕಿಕವಾದ ಆಸ್ವಾದ, ಇನ್ನೊಂದು ಕಡೆ ಯೋಗಿಗಳ ಆತ್ಮಾನಂದ, ಎರಡರಿಂದಲೂ ಬೇರೆಯಾದ ಮೂರನೆಯದೇ ರಸಾಸ್ವಾದ. ಆದ್ದರಿಂದಲೇ 'ಶಿಖರಿಣಿ....' ಮುಂತಾದೆಡೆಗಳಲ್ಲಿ ಕೂಡ ಸಹೃದಯರು ಮುಖ್ಯಾರ್ಥಬಾಧಾದಿಗಳನ್ನು ಗಮನಿಸದೆಯೇ ವಕ್ತಾರನ "ಚಾಟು" ಅಥವಾ ಶೃಂಗಾರಾನುನಯವೆಂಬ ಅಭಿಪ್ರಾಯವನ್ನು ಗ್ರಹಿಸುತ್ತಾರೆ. ಆದ್ದರಿಂದಲೇ ಆನಂದವರ್ಧನನು ಸಾಮಾನ್ಯವಾಗಿ "ವಿವಕ್ಷಿತಾನ್ಯಪರವಾಚ್ಯ" ಧ್ವನಿಯಲ್ಲಿ ಭಕ್ತಿಯಿಲ್ಲವೆಂದಿರುವುದು. ನಾವು ಮಾತ್ರ, ದುರ್ವಾದಿಗಳನ್ನೊಪ್ಪಿಸುವ ದೃಷ್ಟಿಯಿಂದ ಹೇಳಿದ್ದೇನೆಂದರೆ—"ಇಲ್ಲಿಯೂ ಲಕ್ಷಣೆಯಿರಲಿ; ಆದರೆ ಅಲಕ್ಷ್ಯ ಕ್ರಮದಲ್ಲಿ ನೀನು ಎಷ್ಟೇ ಕೋಪಿಸಿಕೊಂಡರೆ ತಾನೆ ಏನು ಮಾಡುವೆ?" ಕೋಪಿಸಿಕೊಳ್ಳದಿದ್ದಲ್ಲಿ, "ಸುವರ್ಣಪುಷ್ಪಾಂ...." ಮುಂತಾದ "ಅವಿವಕ್ಷಿತವಾಚ್ಯ"ದಲ್ಲಿ ಕೂಡ ಮುಖ್ಯಾರ್ಥ ಬಾಧೆಯೇ ಮುಂತಾದ ಲಕ್ಷಣಾಸಾಮಗ್ರಿಯ ಅಪೇಕ್ಷೆಯಿಲ್ಲದೆಯೆ ವ್ಯಂಗ್ಯಾರ್ಥದಲ್ಲಿ ಅರ್ಥದ ವಿಶ್ರಾಂತಿಯನ್ನೊಪ್ಪಿಕೊ", ಎಂದು—ಲೋ.

140 ದೇವದತ್ತನ ಮನೆ ಯಾವುದೆಂದು ನಿರ್ದೇಶಿಸಲು ತತ್ಕಾಲದಲ್ಲಿ ಆ ಮನೆಯ ಮೇಲೆ ಕುಳಿತಿರುವ ಕಾಗೆಯನ್ನು ಉಪಯೋಗಿಸಿಕೊಳ್ಳಬಹುದು—"ಕಾಗೆ ಕುಳಿತ ಮನೆಯೇ ದೇವದತ್ತನ ಮನೆ," ಎಂದು. ಇಲ್ಲಿ "ಕಾಗೆ" ಮನೆಯ "ಲಕ್ಷಣ"ವಲ್ಲ, ನಿಯತಧರ್ಮವಲ್ಲವಾದ್ದರಿಂದ; ಆದರೆ "ಉಪಲಕ್ಷಣ," ಅಥವಾ ಪ್ರಸಂಗಾತ್ ಸೂಚಕ.

ವೃತ್ತಿಯೇ ಧ್ವನಿಯ ಸಂಪೂರ್ಣ ಲಕ್ಷಣವನ್ನು ಹೇಳುತ್ತದೆನ್ನುವ ಪಕ್ಷದಲ್ಲಿ,[141] ಅಭಿಧಾ ವ್ಯಾಪಾರವೊಂದರಿಂದಲೇ ಉಳಿದ ಅಲಂಕಾರವರ್ಗದ ಸಮಗ್ರ ಲಕ್ಷಣವನ್ನೂ ಹೇಳಿದಂತಾಗುವುದರಿಂದ, ಪ್ರತ್ಯೇಕವಾಗಿ ಅಲಂಕಾರಗಳ ಲಕ್ಷಣವನ್ನು ಬರೆಯುವುದೆಲ್ಲವೂ ವ್ಯರ್ಥವೆನ್ನಬೇಕಾಗಿ ಬಂದೀತೆಂದು ಪ್ರತಿಯಾಗಿ ವಾದಿಸಬಹುದು. ಅಷ್ಟೇ ಅಲ್ಲದೆ—

**ಕಾರಿಕೆ**

**ಲಕ್ಷಣೇಽನ್ಯೈಃ ಕೃತೇ ಚಾಸ್ಯ ಪಕ್ಷಸಂಸಿದ್ಧಿರೇವ ನಃ ॥ ೨೨ ॥**

ಇತರರು ಮೊದಲೇ[142] ಇದರ (=ಧ್ವನಿಯ) ಲಕ್ಷಣವನ್ನು ರಚಿಸಿಬಿಟ್ಟಿರುವರೆಂದರೆ, ಅದರಿಂದ ನಮ್ಮ ಪಕ್ಷವು ಸಿದ್ಧವಾದ ಹಾಗೆಯೇ ಆಯಿತು.

**ವೃತ್ತಿ**

ಹಿಂದೆಯೇ ಬೇರೆಯವರಿಂದ ಧ್ವನಿಯ ಲಕ್ಷಣವು ಪ್ರತಿಪಾದಿತವಾಗಿಬಿಟ್ಟಿರುವುದೆಂದರೆ ಅದು ನಮಗೆ ಇಷ್ಟಸಾಧನೆಯೆಂದೇ ಭಾವಿಸುತ್ತೇವೆ; ಏಕೆಂದರೆ ಧ್ವನಿಯುಂಟೆಂಬುದೇ ನಮ್ಮ ವಾದ. ಅದು ಮೊದಲೇ ಸಿದ್ಧಾಂತವಾಗಿಬಿಟ್ಟಿದೆಯೆನ್ನುವುದಾದರೆ, ನಮ್ಮ ಪ್ರಯತ್ನವೇನೂ ಇಲ್ಲದೆಯೇ ನಮ್ಮ ಇಷ್ಟಾರ್ಥವು ಕೈಗೂಡಿದವರಾಗುತ್ತೇವೆ.

III. ಧ್ವನಿಯ ತತ್ವವು ಸಹೃದಯರ ಹೃದಯಗಳಿಗೆ ಮಾತ್ರ ಸಂವೇದ್ಯವೆಂದೂ ಅದರ ಸ್ವರೂಪವು ಮಾತುಗಳಿಗೆ ನಿಲುಕುವಂತಹುದಲ್ಲವೆಂದೂ ಹೇಳಿದ ಪೂರ್ವಪಕ್ಷಕಾರರಾದರೂ ವಿಚಾರಮಾಡಿ ವಾದಿಸುವವರಲ್ಲ. ಏಕೆಂದರೆ ಈಗಾಗಲೇ ನಾವು ಹೇಳಿರುವ ಅಂಶಗಳ ಜತೆಗೆ ಮುಂದೆ ಇನ್ನೂ ಹೇಳುವ ಧ್ವನಿಯ ಸಾಮಾನ್ಯ-ವಿಶೇಷ ಲಕ್ಷಣಗಳೆಲ್ಲವನ್ನೂ ಪರಿಶೀಲಿಸಿದ ಮೇಲೆಯೂ ಅದು "ಅನಿರ್ವಾಚ್ಯ" ಅಥವಾ 'ಅನಾಖ್ಯೇಯ'ವೇ ಆಗುವುದಾದರೆ, ಈ ಅನಿರ್ವಚನೀಯತೆಯು ಪ್ರಪಂಚದ ವಸ್ತುಗಳೆಲ್ಲಕ್ಕೂ ಅನ್ವಯಿಸಬೇಕಾಗುತ್ತದೆ. ಹಾಗಲ್ಲದೆ ಈ ಅತಿಶಯೋಕ್ತಿಯಿಂದ[143]

---

141 ಹಿಂದಿನವರು "ಭಕ್ತಿ"ಯನ್ನು ಹೇಳಿಯೇ ಇದ್ದಾರೆ, ಅದರ ದಿಕ್ಸೂಚನೆಯಿಂದಲೇ ವಿಸ್ತಾರವಾದ ಧ್ವನಿಪ್ರಪಂಚವೆಲ್ಲ ತಿಳಿದೀತು. ಅದರ ಲಕ್ಷಣ ಪ್ರಯಾಸವೇಕೆ, ಎಂಬ ಆಶಂಕೆಗೆ ಇಲ್ಲಿ ಉತ್ತರ ಹೇಳಲು ಹೊರಟಿದೆ—ಲೋ.

142 ನಮ್ಮ ಗ್ರಂಥರಚನೆಗೂ ಮುಂಚೆಯೇ ಎಂದರ್ಥ—ಲೋ.

143 ಇದು ಇಲ್ಲಿ "ವರ್ಣನೆಗೆ ಅಶಕ್ಯ"ವೆಂಬುದರ ಪರ್ಯಾಯವಾದ "ಅಲಂಕಾರಿಕ ವಾಣಿ"ಯೆಂಬ ಸಾಮಾನ್ಯಾರ್ಥದಲ್ಲಿ ಪ್ರಯುಕ್ತವಾಗಿದೆ; ವಿಶಿಷ್ಟ "ಅತಿಶಯೋಕ್ತಿ" ಅಲಂಕಾರ

ಮಿಕ್ಕ ಕಾವ್ಯಗಳನ್ನು ಮೀರಿಸುವಂತಹ ಧ್ವನಿಯ ಸ್ವರೂಪವೇ ಹೇಳಲ್ಪಡುತ್ತದೆನ್ನುವ ಪಕ್ಷಕ್ಕೆ ಅವರು ಹೇಳುವುದೂ ಯುಕ್ತವೇ!

ಇಲ್ಲಿಗೆ ಶ್ರೀ ರಾಜಾನಕ-ಆನಂದವರ್ಧನಾಚಾರ್ಯ-ವಿರಚಿತವಾದ
'ಧ್ವನ್ಯಾಲೋಕ'ದಲ್ಲಿ ಮೊದಲನೆಯ ಉದ್ಯೋತದ ಕನ್ನಡ ಅನುವಾದವು
ಮುಗಿದುದು.

---

ವೆಂಬರ್ಥದಲ್ಲಲ್ಲ.

ಉದಾ :—'ತಾನ್ಯಕ್ಷರಾಣಿ ಹೃದಯೇ ಕಿಮಪಿ ಸ್ಫುರಂತಿ'

"ಆ ಯಾವುದೋ ರೀತಿಯ (=ವರ್ಣನೆಗೆ ಮೀರಿದ) ನುಡಿಗಳು ಇನ್ನೂ ಹೃದಯದಲ್ಲಿ ಬೆಳಗುತ್ತಿವೆ!"—ಲೋ.

ಧ್ವನಿಯಾಲೋಕಂ ಬೆಳಗ
ಲ್ಕನುವಿಂದಿರವೇಳ್ಕುಮಚ್ಛಲೋಚನಮೆಂದಾಂ।
ನೆನೆಯುತೆ ಲೋಚನಸಾರವ
ನನುವಾದಿಸಿ ಬರೆದೆನಿಂತು ತಿಳಿಗನ್ನಡದೊಳ್ ॥

# ಎರಡನೆಯ ಉದ್ಯೋತ

## ವೃತ್ತಿ

ಹೀಗೆ ಧ್ವನಿಯು 'ಅವಿವಕ್ಷಿತವಾಚ್ಯ' ಮತ್ತು 'ವಿವಕ್ಷಿತಾನ್ಯಪರವಾಚ್ಯ' ಎಂದು ಎರಡು ಬಗೆಯಾಗಿರುವುದನ್ನು ಹೇಳಲಾಯಿತು.[1] ಅವುಗಳಲ್ಲಿ 'ಅವಿವಕ್ಷಿತವಾಚ್ಯ'ವೆಂಬ ಧ್ವನಿಯ ಪ್ರಭೇದಗಳನ್ನು ತೋರ್ಪಡಿಸುವ ಸಲುವಾಗಿ ಮುಂದಿನ ಕಾರಿಕೆಯನ್ನು ಹೇಳಿದೆ:[2]

## ಕಾರಿಕೆ

ಅರ್ಥಾನ್ತರೇ ಸಂಕ್ರಮಿತಮತ್ಯನ್ತಂ ವಾ ತಿರಸ್ಕೃತಮ್ ।
ಅವಿವಕ್ಷಿತವಾಚ್ಯಸ್ಯ ಧ್ವನೇರ್ವಾಚ್ಯಂ ದ್ವಿಧಾ ಮತಮ್ ॥೧॥

'ಬೇರೊಂದು ಅರ್ಥದಲ್ಲಿ ಸೇರಿಸಲ್ಪಟ್ಟಿರುವುದು' (='ಅರ್ಥಾಂತರಸಂಕ್ರಮಿತ')[3] ಮತ್ತು 'ಸಂಪೂರ್ಣವಾಗಿ ಲುಪ್ತವಾದುದು' (='ಅತ್ಯಂತ ತಿರಸ್ಕೃತ')—ಎಂಬುದಾಗಿ 'ಅವಕ್ಷಿತವಾಚ್ಯ-ಧ್ವನಿ'ಯ ವಾಚ್ಯ (=ಮುಖ್ಯಾರ್ಥ)ವು ಎರಡು ವಿಧವಾಗಿರುತ್ತದೆ.[4]

---

ಸ್ಮರಣೆಯಿನಾವಳ್ ಶುಭಮಂ
ತರುವಳ್ ಪರಿಹರಿಸಿ ಸಕಲ ರೋಗೋತ್ಕರಮಂ ।
ಉರುಕಾಮಿತ ಫಲವೀವಾ
ಸುರತರುಲತೆ ಶಿವೆಗೆ ಭಕ್ತಿಯಿಂ ಪೊಡಮಡುವೆಂ ॥

1 ವೃತ್ತಿಗ್ರಂಥದಲ್ಲಿ, ಎಂದಭಿಪ್ರಾಯ—ಲೋ.

2 ಅಲ್ಲಿ ವೃತ್ತಿಯಲ್ಲಿ ಹೇಳಿದ ಧ್ವನಿವಿಭಾಗವು ಕಾರಿಕೆಗೆ ಅನುಗುಣವಾಗಿದೆಯೆಂಬದನ್ನು ಇದು ತೋರಿಸುತ್ತದೆ—ಲೋ

3 'ಸಂಕ್ರಮಿತ' ಎಂಬಲ್ಲಿರುವ 'ಣಿಜಂತ' (=causal)ವು ವ್ಯಂಜನಾ ವ್ಯಾಪಾರದಲ್ಲಿ ಸಹಕರಿಸುವ ಅಂಶವಾವುದುಂಟೋ ಅದರ ಪ್ರಭೇದವೇ ಇದೆಂದು ತೋರಿಸುತ್ತದೆ.

4 ವಾಚ್ಯಾರ್ಥವು ಆ ಸಂದರ್ಭದಲ್ಲಿ ಉಪಪನ್ನವಾಗಿಯೇ ಇರಬಹುದು ಆದರೂ ಅಷ್ಟರಿಂದಲೇ ಕೃತಾರ್ಥವಾಗದೆ ಧರ್ಮಾಂತರ ಸಂಪರ್ಕದಿಂದ ಬೇರೆಯೇ ಎನಿಸುವಂತೆ ಇದ್ದರೂ, ಸೂಕ್ಷ್ಮವಾಗಿ ನೋಡಿದಾಗ, ಮಾಲೆಯ ನಡುವೆ ಅಡಗಿರುವ ದಾರದಂತೆ ಅನುಗತವಾದ ಐಕ್ಯಸೂತ್ರವಾಗಿ ಕಾಣುವಂತಿದ್ದರೆ, ಆಗ ಅದು 'ರೂಪಾಂತರ ಪರಿಣತ' ವಾದ ವಾಚ್ಯ—ಲೋ.

ಸಂದರ್ಭದಲ್ಲಿ ಯಾವ ವಾಚ್ಯಾರ್ಥವು ಅನುಪಪನ್ನವೋ, ಆದ್ದರಿಂದಲೇ ಅರ್ಥಾಂತರದ ಪ್ರತೀತಿಗೆ ಯಾವುದು ಕೇವಲ ಉಪಾಯಮಾತ್ರವಾಗಿದ್ದು ತಾನು ಓಡಿಹೋಗುವಂತಿರುವುದೋ, ಅದು 'ತಿರಸ್ಕೃತ' ವಾಚ್ಯ—ಲೋ.

ವೃತ್ತಿ

'ವಾಚ್ಯ'ವು ಹೀಗೆ ಎರಡು ವಿಧವಾಗಿರುವುದರಿಂದ ಉಂಟಾಗತಕ್ಕ ವಿಶೇಷ ವೆಲ್ಲವೂ 'ವ್ಯಂಗ್ಯ'ಕ್ಕೇ ಸಂಬಂಧಪಟ್ಟುದಾದ ಕಾರಣ, ವ್ಯಂಗ್ಯದ ಪ್ರಕಟನೆಗೆಂದು ಹೊರಟಿರುವ 'ಧ್ವನಿ'ಯ ಪ್ರಭೇದವೆಂದೇ ಅವನ್ನು ಪರಿಗಣಿಸಬೇಕು.[5]

ಇದು 'ಅರ್ಥಾಂತರ-ಸಂಕ್ರಮಿತವಾಚ್ಯ'ಕ್ಕೆ ಉದಾಹರಣೆ :—

೧೬ "ಸ್ನಿಗ್ಧಶ್ಯಾಮಲಕಾಂತಿಲಿಪ್ತವಿಯತೋ ವೇಲ್ಲದ್ಬಲಾಕಾ ಘನಾ
ವಾತಾಃ ಶೀಕರಿಣಃ ಪಯೋದಸುಹೃದಾಮಾನಂದಕೇಕಾಃ ಕಲಾಃ ।
ಕಾಮಂ ಸಂತು ದೃಢಂ ಕಠೋರಹೃದಯೋ ರಾಮೋಽಸ್ಮಿ ಸರ್ವಂ ಸಹೇ
ವೈದೇಹೀ ತು ಕಥಂ ಭವಿಷ್ಯತಿ ಹಹಾ ಹಾ ದೇವಿ! ಧೀರಾ ಭವ ॥

ದೆಸೆಯಂ ತಮ್ಮೆಣ್ಣೆಗಪ್ಪಿಂ ಬಳಿಮ ತವೆ ಬಲಾಕಾಗಣೋದ್ರೇಕಮಂ ಮಾ-
ಡಿಸಿ ನಿಂದಾ ಮೇಘಗಳ್, ಶೀತಲಪವನಚಯಂ, ಸಂತಸಂ ವೆರ್ಚಲಿಂಪಿಂ- |
ದೆಸೆವಾ ಬರ್ಹಿಸ್ವನಂ ತಾಮಿರಲಿರಲೆನಿಸುಂ ಸರ್ವಮಂ ತಾಳ್ದಪೆಂ ಕೂ-
ರಸಿವೋಲ್ ಕಲ್ಲೆರ್ದೆಯಾ ರಾಮನೆನಲಬಲೆ ನೀಂ ಸೀತೆ ಹಾ! ಧೈರ್ಯಮಂ
ಕೊಳ್ ||

---

5 ವ್ಯಂಗ್ಯದ ಪ್ರಭೇದಗಳನ್ನು ಹೇಳಹೊರಟು, ವಾಚ್ಯದ ಭೇದಗಳನ್ನು ಹೇಳುವುದು ಅಸಂಗತವಲ್ಲವೆ ಎಂಬ ಆಶಂಕೆಗೆ ಇಲ್ಲಿ ಪರಿಹಾರ ಹೇಳಿದೆ. "ವಾಚ್ಯ"ದಲ್ಲಿ ಭೇದ ಬರುವುದು ಅವುಗಳ ವಾಚ್ಯತ್ವ ದೃಷ್ಟಿಯಿಂದಲ್ಲ, ವ್ಯಂಗ್ಯವನ್ನು ಅಭಿವ್ಯಕ್ತಿಗೊಳಿಸುವ ಅವುಗಳ ಸಾಮರ್ಥ್ಯದ, ಎಂದರೆ ವ್ಯಂಜಕತ್ವದ, ದೃಷ್ಟಿಯಿಂದ ಮಾತ್ರ—ಲೋ.

6 ಸ್ನಿಗ್ಧಶ್ಯಾಮಲ=ದ್ರವಿಡವನಿತೆಯಂತೆ ಕಪ್ಪುಬಣ್ಣದ. "ಆಕಾಶ ಮೋಡದಿಂದ ತುಂಬಿದೆ, ದಿಕ್ಕೆಲ್ಲ ಕಪ್ಪಾಗಿದೆ, ಗಾಳಿಯಲ್ಲೂ ಮೋಡದ ಹನಿ ಸೇರಿದೆ, ಗುಹೆಯಲ್ಲಿಯಾದರೂ ಹೋಗಿರೋಣ ವೆಂದರೆ ಅಲ್ಲಿಯೂ ಮೋಡದ ಗೆಳೆಯರಾದ ನವಿಲುಗಳ ಕೇಕೆಯ ಸದ್ದು ತಪ್ಪದು. ಹೇಗೂ, ದುಸ್ಸಹವಾದ ಈ ಮೋಡಗಳ ದೆಸೆಯಿಂದ, ಮತ್ತೂ ದುಸ್ಸಹವಾದ ಪ್ರೇಯಸೀವಿರಹಸ್ಮರಣೆ ತಪ್ಪುವಂತಿಲ್ಲ," ಎನ್ನುವಾಗ ಈ ಉದ್ದೀಪನ ವಿಭಾವದಿಂದ ವಿಪ್ರಲಂಭಶೃಂಗಾರವು ಉದ್ಬುದ್ಧ ವಾಗುತ್ತದೆ "ಕಠೋರ ಹೃದಯ" ಎಂಬ ಪದ 'ರಾಮ' ಶಬ್ದದಲ್ಲಿ ಧ್ವನಿ ವಿಶೇಷವನ್ನು ಸೂಚಿಸಲು ಸಹಾಯಮಾಡುತ್ತದೆ ಸ್ವಹೃದಯದಲ್ಲಿ ಪ್ರತ್ಯಕ್ಷಳಾಗಿರುವ ಪ್ರೇಯಸಿ ಸೀತೆಯು ಮೋಡದ ನೋಟವನ್ನು ತಾಳಲಾರದೆ ಹೃದಯಸ್ಫೋಟದಿಂದ ಜೀವ ಬಿಡುವ ದೃಶ್ಯ ರಾಮನ ಕಣ್ಣಿಗೆ ಕಟ್ಟಿ, ನೇರವಾಗಿ ಆಕೆಯನ್ನೇ ಸಂಬೋಧಿಸುತ್ತಾನೆ- "ಹಾ ದೇವಿ", ಎಂದು—ಲೋ.

ಈ ಶ್ಲೋಕದಲ್ಲಿ 'ರಾಮ' ಎಂಬ ಶಬ್ದದ ಪ್ರಯೋಗವು ಧ್ವನಿಗೆ ಲಕ್ಷ್ಯ. ಈ ಶಬ್ದದಿಂದ ಬರುವ ಅರ್ಥವು ಕೇವಲ ಒಂದು ಸಂಜ್ಞೆ ಅಥವಾ ಹೆಸರು (=Proper name) ಮಾತ್ರವಲ್ಲ; ವ್ಯಂಗ್ಯವಾಗಿರುವ ಅನೇಕ ಸ್ವಭಾವ-ವಿಶೇಷಗಳಿಂದ ವಿಶಿಷ್ಟನಾದ ವ್ಯಕ್ತಿ ಎಂಬರ್ಥವೇ ಪ್ರತೀತವಾಗುತ್ತದೆ.[7]

ಇದಕ್ಕೆ ಇನ್ನೊಂದು ಉದಾಹರಣೆಯನ್ನು ನನ್ನ[8] ಕೃತಿಯಾದ '**ವಿಷಮ ಬಾಣ ಲೀಲೆ**'ಯಿಂದಲೇ ಕೊಡಬಹುದು :—

೧೭ "ತಾಲಾ ಜಾಅನ್ತಿ ಗುಣಾ ಜಾಲಾ ದೇ ಸಹಿಅಏಹಿ ಘೇಪ್ಪನ್ತಿ।
ರಇಕಿರಣಾನುಗ್ಗಹಿಅಇಂ ಹೋನ್ತಿ ಕಮಲಾಇಂ ಕಮಲಾಇಂ ॥"

ಗುಣವು ಗುಣವೆನಿಸುವುದು ಸಹೃದಯರು ಕೊಂಡಾಗ।
ರವಿಕಿರಣದಿಂದಹವು ಕಮಲಗಳು **ಕಮಲಗಳು** ॥

ಇಲ್ಲಿ ಎರಡನೆಯ 'ಕಮಲ' ಶಬ್ದವು ಧ್ವನಿಗೆ ಲಕ್ಷ್ಯ.[9]

**'ಅತ್ಯಂತ-ತಿರಸ್ಕೃತ-ವಾಚ್ಯ'**ಕ್ಕೆ ಆದಿಕವಿಯಾದ ವಾಲ್ಮೀಕಿಯಲ್ಲೇ ಉದಾಹರಣೆ ಸಿಕ್ಕುತ್ತದೆ:[10]

೧೮ "ರವಿಸಂಕ್ರಾಂತಸೌಭಾಗ್ಯಸ್ತುಷಾರಾವೃತಮಂಡಲಃ।
ನಿಃಶ್ವಾಸಾಂಧ ಇವಾದರ್ಶಶ್ಚಂದ್ರಮಾ ನ ಪ್ರಕಾಶತೇ ॥[11]

---

7 ರಾಜ್ಯಭ್ರಂಶ ಮುಂತಾದ ಅಸಂಖ್ಯ ಕ್ಲೇಶಗಳನ್ನು ಸಹಿಸುವ ರಾಮನ ಸ್ವಭಾವ ಇಲ್ಲಿ ವ್ಯಂಗ್ಯ. ಅಸಂಖ್ಯವಾದುವನ್ನು ಅಭಿಧಾವ್ಯಾಪಾರದಿಂದ ಹೇಳುವುದೆಂದಿಗೂ ಆಗದ ಮಾತು. ಪಟ್ಟಿ ಮಾಡಿ ಒಂದು ವೇಳೆ ಕ್ಲೇಶಗಳನ್ನೆಲ್ಲ ಹೇಳಿದರೂ ಚಾರುತ್ವಾತಿಶಯವೇನೂ ಬಾರದು ಅದೇ ವ್ಯಂಗ್ಯವಾದಾಗ, ವಿಶೇಷದ ಗಮನವಿಲ್ಲದ ಕಾರಣ, ಪಾನಕರಸ, ಅಥವಾ ಸಿಹಿ ಕಡುಬಿನ ಹಾಗೆ ಸಾಮಾನ್ಯ ರೂಪದಿಂದಲೇ ಆಸ್ವಾದ್ಯವೆನಿಸುತ್ತದೆ. ಇದನ್ನೇ "ಉಕ್ತ್ಯಂತರೇಣಾಶಕ್ಯಂ...." ಎಂಬ ಕಾರಿಕೆಯಲ್ಲಿ ಹಿಂದೆ ಹೇಳಲಾಗಿದೆ. ಉಕ್ತಿಯ ಪ್ರಯೋಜನವು ವ್ಯಂಗ್ಯವಾದಾಗಲೇ ಉತ್ಕರ್ಷಕಾರಿಯಾಗುವುದೆಂಬ ಈ ತತ್ತ್ವವನ್ನು ಎಲ್ಲೆಡೆಗಳಲ್ಲಿಯೂ ಅರಿಯುವುದು—ಲೋ.

8 ನನ್ನ=ಆನಂದವರ್ಧನನ.

9 'ಕಮಲ' ಶಬ್ದಕ್ಕೆ ಇಲ್ಲಿ ಲಕ್ಷ್ಮೀಪಾತ್ರತ್ವ ಮುಂತಾದ ನೂರಾರು ಧರ್ಮಾಂತರಗಳ ವೈಚಿತ್ರ್ಯ ವ್ಯಂಗ್ಯ—ಲೋ.

10 ಇದರಿಂದ ಧ್ವನಿಯ ಲಕ್ಷ್ಯಗಳು ಸುಪ್ರಸಿದ್ಧವೆಂಬುದು ವ್ಯಕ್ತವಾಗುತ್ತದೆ.

11 ಪಂಚವಟಿಯಲ್ಲಿರುವ ರಾಮನು ಹೇಮಂತವನ್ನು ವರ್ಣಿಸುವಾಗ ಹೇಳುವ ಶ್ಲೋಕ ಇದು.

ಇಲ್ಲಿ ಕನ್ನಡಿಯನ್ನು ಕುರುಡೆನ್ನುವ ಲಕ್ಷಣಾ ಪ್ರಯೋಗಕ್ಕೆ ಪ್ರಯೋಜನ—ಅಸಾಮಾನ್ಯ

ಸೌಭಾಗ್ಯವೆಲ್ಲವನು ಸೂರ್ಯನಿಗೆ ತಾ ಕೊಟ್ಟು,
ಹಿಮಕಣದ ಹೊದಿಕೆಯಲಿ ಮಂಡಲವ ಮುಚ್ಚಿ।
ಉಸಿರಿಂದ ಕುರುಡಾದ ದರ್ಪಣದ ರೀತಿಯಲಿ
ಚಂದಿರನು ಬೆಳಕನ್ನು ಬೀರದಿಹನು ॥

ಇಲ್ಲಿ 'ಕುರುಡು' ಎಂಬ ಶಬ್ದವು ಧ್ವನಿಗೆ ಲಕ್ಷ್ಯ.

ಹಾಗೆಯೇ—

೧೯ ಗಅಣಂ ಚ ಮತ್ತಮೇಹಂ ಧಾರಾಲುಲಿಅಜ್ಜುಣಾಇ ಅ ವಣಾಇಂ।
ಣಿರಹಂಕಾರಮಿಅಂಕಾ ಹರನ್ತಿ ಣೀಲಾಓ ವಿ ಣಿಸಾಓ ॥"

ಮತ್ತ ಮೇಘದ ಗಗನ ; ಮಳೆಯಲಿ
ತೊಯ್ದ ಮತ್ತಿಯ ಮರಗಳ
ಕಾಡ ಗಡಣವು, ಗರ್ವವಿಲ್ಲದ
ಚಂದ್ರರಿರುವಾ ನಿಶಿಗಳು—
ನೀಲವೆನಿಸಿಯು ಜನರ ಮನಗಳ
ಬಿಡದೆ ತಾವೇ ಸೆಳೆವುವು ॥

ಇಲ್ಲಿ 'ಮತ್ತ', 'ಗರ್ವವಿಲ್ಲದ' ಈ ಎರಡು ಶಬ್ದಗಳೂ ಧ್ವನಿಗೆ ಲಕ್ಷ್ಯಗಳು.[12]

---

ವಾದ ಕಾಂತಿಹೀನತೆ, ನಿರುಪಯೋಗಿತ್ವ ಮುಂತಾದ ಅಸಂಖ್ಯ ಧರ್ಮಗಳು. "ಪದಾರ್ಥಗಳ ಸ್ಫುಟೀಕರಣಕ್ಕೆ ಅಶಕ್ತ" ಎಂಬುದು ಲಕ್ಷ್ಯಾರ್ಥ.

ಭಟ್ಟನಾಯಕನು ಇಲ್ಲಿ "ಇವ" ಶಬ್ದವಿರುವುದರಿಂದ ಲಕ್ಷಣೆಗೇ ಅವಕಾಶವಿಲ್ಲವೆಂದಿದ್ದಾನೆ. ಆದರೆ ಅದು ಶ್ಲೋಕಾರ್ಥವನ್ನು ಪರಾಮರ್ಶಿಸದೆ ಹೇಳಿರುವ ಮಾತು. "ಇವ" ಎಂಬ ಉಪಮಾ ವಾಚಕವು ಚಂದ್ರ-ಕನ್ನಡಿಗಳಿಗೆ ಸಾದೃಶ್ಯವನ್ನು ಹೇಳುವುದೇ ಹೊರತು ಚಂದ್ರ-ಕುರುಡರ ಸಾದೃಶ್ಯವನ್ನಲ್ಲ. "ಕುರುಡ" ಎಂಬುದು ಕನ್ನಡಿಗೆ ಮಾತ್ರ ವಿಶೇಷಣ. "ಇವ" ಶಬ್ದವನ್ನು ಪುನರುಚ್ಚರಿಸಿಕೊಳ್ಳುವುದು ಕಾವ್ಯವ್ಯಾಖ್ಯಾನದ ಶೈಲಿಯಲ್ಲ, ಪೂರ್ವ ಮೀಮಾಂಸಾವ್ಯಾಖ್ಯಾನದ ಶೈಲಿಯಾಗಬಹುದಷ್ಟೆ! —ಲೋ.

12 "ಮತ್ತ" ಎನ್ನುವಾಗ "ಮತ್ತರಂತೆ ಅಸಮಂಜಸಕಾರಿಗಳು, ದುರ್ನಿವಾರಗಳು" ಎಂದು ಮುಂತಾಗಿ ವ್ಯಂಗ್ಯಾರ್ಥಪರಂಪರೆ. "ನಿರಹಂಕಾರ" ಎನ್ನುವಾಗ "ಪಾರತಂತ್ರ್ಯ, ಕಾಂತಿ ಹೀನತೆ, ಉತ್ಸಾಹಶೂನ್ಯತೆ, ಪರಾನುಸರಣೆ" ಮುಂತಾದ ವ್ಯಂಗ್ಯಾರ್ಥ ಪರಂಪರೆ—ಲೋ.

ಕಾರಿಕೆ

ಅಸಂಲಕ್ಷ್ಯಕ್ರಮೋದ್ದ್ಯೋತಃ[13] ಕ್ರಮೇಣ ದ್ಯೋತಿತಃ ಪರಃ ।
ವಿವಕ್ಷಿತಾಭಿಧೇಯಸ್ಯ ಧ್ವನೇರಾತ್ಮಾ ದ್ವಿಧಾ ಮತಃ ॥ ೨ ॥

'ವಿವಕ್ಷಿತವಾಚ್ಯ'ವೆಂಬ ಧ್ವನಿಯ[14] ಆತ್ಮವು ಕೂಡ 'ಕ್ರಮವು ಅರಿವಾಗದಂತೆ ಭಾಸವಾದುದು' (='ಅಸಂಲಕ್ಷ್ಯಕ್ರಮ') ಮತ್ತು 'ಕ್ರಮವು ಕಾಣುವಂತೆ ಭಾಸವಾದುದು' (='ಸಂಲಕ್ಷ್ಯಕ್ರಮ') ಎಂದು ಎರಡು ಬಗೆಯಾಗಿರುವುದು.

ವೃತ್ತಿ

ಮುಖ್ಯವಾಗಿ ಹೊಳೆಯುವ ವ್ಯಂಗ್ಯಾರ್ಥವೇ ಧ್ವನಿಯ ಆತ್ಮ. ಅದು ಕೆಲವು ವೇಳೆ ಕ್ರಮಭೇದವು ತಿಳಿಯದಂತೆ ವಾಚ್ಯಾರ್ಥದ ಜತೆಯಲ್ಲಿಯೇ[15] ಭಾಸವಾಗುತ್ತದೆ; ಕೆಲವು ವೇಳೆ ಕ್ರಮ ತಿಳಿಯುವಂತೆ ವಾಚ್ಯಾರ್ಥದ ಅನಂತರ ಭಾಸವಾಗುತ್ತದೆ.

ಅವುಗಳಲ್ಲಿ—

ಕಾರಿಕೆ

ರಸಭಾವತದಾಭಾಸತತ್ಪ್ರಶಾನ್ತ್ಯಾದಿರಕ್ರಮಃ ।
ಧ್ವನೇರಾತ್ಮಾಙ್ಗಿಭಾವೇನ ಭಾಸಮಾನೋ ವ್ಯವಸ್ಥಿತಃ ॥ ೩ ॥

ರಸ, ಭಾವ, ರಸಾಭಾಸ, ಭಾವಾಭಾಸ, ರಸಪ್ರಶಮನ, ಭಾವಪ್ರಶಮನ–ಇವೇ ಮೊದಲಾದುವು 'ಅಸಂಲಕ್ಷ್ಯಕ್ರಮ'ಗಳು. ಮುಖ್ಯವಾಗಿ ಇವುಗಳು ಪ್ರಕಾಶಿಸುವುದೇ 'ಧ್ವನಿ'ಯ ಆತ್ಮವೆಂದು ತೀರ್ಮಾನಿಸಿದೆ.[16]

---

13 ಬಹುವ್ರೀಹಿಗರ್ಭವಾದ ಬಹುವ್ರೀಹಿಸಮಾಸವಿದು—ಲೋ

14 ಧ್ವನಿಯ=ವ್ಯಂಗ್ಯದ. ಹಿಂದೆ ವಾಚ್ಯಮುಖೇನ ವ್ಯಂಗ್ಯಭೇದವನ್ನು ಹೇಳಲಾಯಿತು. ಇಲ್ಲಿ ವ್ಯಾಪಾರಮುಖೇನ ವ್ಯಂಗ್ಯದ ಭೇದಗಳನ್ನು ಹೇಳಿದೆ—ಲೋ

15 ವಾಚ್ಯಾರ್ಥಗಳೆಂದರೆ ವಿಭಾವಾದಿಗಳೇ—ಲೋ

16 ಅಂಗಿ ಅಥವಾ ಪ್ರಧಾನವಾಗಿದ್ದಾಗ ಮಾತ್ರ ಅಸಂಲಕ್ಷ್ಯಕ್ರಮಧ್ವನಿ "ರಸಾದಿಧ್ವನಿ" ಹಾಗೂ "ರಸವದಾದಿ ಅಲಂಕಾರ"ಗಳೆರಡಕ್ಕೂ ಅವಕಾಶ ತಪ್ಪದಂತೆ ಮೂಲದಲ್ಲಿ ಈ ಲಕ್ಷಣವನ್ನು ಹೇಳಿದೆ; ರಸಾದಿಧ್ವನಿಯಂತೂ ವ್ಯವಸ್ಥಿತವಾದುದು. ಅದರಿಂದ ಶೂನ್ಯವಾದ ಕಾವ್ಯವೆಂಬುದೇ ಇಲ್ಲ. ಯದ್ಯಪಿ, "ರಸ" ದಿಂದಲೇ ಕಾವ್ಯ ಸಜೀವವಾಗುವುದು; ರಸವು ಏಕಘನವಾದ ಚಮತ್ಕಾರ; ಹೀಗಿದ್ದರೂ ಚಮತ್ಕಾರಕ್ಕೆ ಪ್ರಯೋಜಕವಾದ ಅಂಶಗಳು ವಿಭಿನ್ನವಾದಾಗ ಚಮತ್ಕಾರವೂ ಬೇರೆಯೆನಿಸುವುದು ಅಸಾಧ್ಯವಲ್ಲ. ಉದ್ರಿಕ್ತಾವಸ್ಥೆಯನ್ನು ತಳೆದ ವ್ಯಭಿಚಾರಿಭಾವವು ಚಮತ್ಕಾರಕಾರಿಯಾದಾಗ 'ಭಾವಧ್ವನಿ'. ಉದಾಹರಣೆ — "ತಿಷ್ಠೇತ್

---

ಕೋಪವಶಾತ್...." ಎಂಬ ಪುರೂರವನ ವಾಕ್ಯ (ವಿಕ್ರಮೋರ್ವಶೀಯ.) ಇಲ್ಲಿ "ವಿತರ್ಕ"ವೆಂಬ ವ್ಯಭಿಚಾರಿಭಾವ ಚಮತ್ಕಾರಪೂರ್ಣವೆನಿಸಿ ಆಸ್ವಾದ್ಯವಾಗುತ್ತದೆ. ವ್ಯಭಿಚಾರಿಭಾವಗಳಿಗೆ "ಉದಯ", "ಸ್ಥಿತಿ", "ಪ್ರಶಮ" ಎಂಬ ಮೂರು ಅವಸ್ಥೆಗಳುಂಟು ಈಗ ಉದಾಹೃತವಾದುದು "ಭಾವಸ್ಥಿತಿ" ; "ಯಾತೇ ಗೋತ್ರವಿಪರ್ಯಯೇ...." (ಅಮರು ಶತಕ) ಎಂಬಲ್ಲಿ ಉದಯೋನ್ಮುಖವಾದ, ಆದರೆ ಹೊರಸೂಸದ, ಪ್ರಣಯಕೋಪವು ವರ್ಣಿತವಾಗಿರುವುದರಿಂದ 'ಭಾವೋದಯ'. "ಏಕಸ್ಮಿನ್ ಶಯನೇ . ." (ಅಮರುಶತಕ) ಎಂಬಲ್ಲಿ ಪ್ರಣಯಕೋಪದ ಪ್ರಶಮಾವಸ್ಥೆ . ಆಸ್ವಾದ್ಯವಾದ್ದರಿಂದ 'ಭಾವಪ್ರಶಮ' (ಅಥವಾ ಇಲ್ಲಿ ಈರ್ಷ್ಯಾವಿಪ್ರಲಂಭ ರಸಕ್ಕೂ ಪ್ರಶಮವೆಂದು ನಯನಮಾಡಬಹುದು) ಎರಡು ವ್ಯಭಿಚಾರಿಭಾವಗಳ ಸಂಧಿ ಆಸ್ವಾದ್ಯವಾದಾಗ 'ಭಾವಸಂಧಿ' —"ಈಸಸು . " ಎಂಬ ಲಕ್ಷ್ಯದಲ್ಲಿ ನಾಯಿಕೆಯ ಕೋಪ-ಪ್ರಸಾದಗಳ ಸಂಧಿ ಹೃದ್ಯ. ಒಮ್ಮೊಮ್ಮೆ ವ್ಯಭಿಚಾರಿಭಾವಗಳ ಶಬಲತೆಯೇ ಹೃದಯ ವಿಶ್ರಾಂತಿಸ್ಥಾನವಾಗಬಹುದು. ಉದಾ—"ಕ್ವಾಕಾರ್ಯಂ . . " (ಮೂರನೆಯ "ಉದ್ದ್ಯೋತ"ವನ್ನು ನೋಡಿ). ಇಲ್ಲಿ ವಿತರ್ಕ-ಔತ್ಸುಕ್ಯ, ಮತಿ-ಸ್ಮರಣ, ಶಂಕೆ-ದೈನ್ಯ, ಸ್ಮೃತಿ-ಚಿಂತೆ, ಹೀಗೆ ಪರಸ್ಪರ ವಿರುದ್ಧ ಭಾವದ್ವಂದ್ವಗಳು ಬಂದು ಕಟ್ಟಕಡೆಗೆ ಚಿಂತೆಗೆ ಪ್ರಾಮುಖ್ಯವನ್ನಿತ್ತು ಪರಮಾಸ್ವಾದವನ್ನು ತರುತ್ತವೆ. ಕಾರಿಕೆಯಲ್ಲಿ " . . ಪ್ರಶಾಂತ್ಯಾದಿ" ಎಂದರೆ ಭಾವೋದಯ, ಭಾವಸಂಧಿ, ಭಾವಶಬಲತೆಗಳೆಂದರ್ಥ.

ಹಾಗಾದರೆ ವಿಭಾವಮುಖೇನ ಚಮತ್ಕಾರಾತಿಶಯ ಬಂದಾಗ "ವಿಭಾವಧ್ವನಿ"ಯೆಂದೂ ಅನುಭಾವಮುಖೇನ ಬಂದಾಗ "ಅನುಭಾವಧ್ವನಿ"ಯೆಂದೂ ಹೇಳಬಾರದೇಕೆ? ಎನ್ನಬಹುದು. ಇದು ಸರಿಯಲ್ಲ ಏಕೆಂದರೆ ವಿಭಾವ, ಅನುಭಾವಗಳು ಸ್ವಶಬ್ದವಾಚ್ಯಗಳು, ಅವುಗಳ ಆಸ್ವಾದವಾದರೋ ಚಿತ್ತವೃತ್ತಿಗಳಲ್ಲೇ ಪರ್ಯವಸಾನಗೊಳ್ಳುತ್ತದೆಯಾಗಿ 'ರಸ', 'ಭಾವ'ಗಳಿಗಿಂತ ಭಿನ್ನವಾದ ಮತ್ತೇನೂ ಆಸ್ವಾದ್ಯವಿಲ್ಲ. ವಿಭಾವ, ಅನುಭಾವಗಳು ಕೂಡ ವ್ಯಂಗ್ಯವಾದಾಗ 'ವಸ್ತುಧ್ವನಿಗೆ' ಅವಕಾಶವಿದ್ದೇ ಇದೆ.

ವಿಭಾವ, ಅನುಭಾವಗಳ ಆಭಾಸದಿಂದ ರತ್ಯಾಭಾಸದ ಉದಯವಾದರೆ ಆಗ ಒದಗುವ ಚರ್ವಣಾಭಾಸವು 'ರಸಾಭಾಸ'ವೆನಿಸುವುದು. ಉದಾ:—ರಾವಣನು ಸೀತೆಯನ್ನು ಪ್ರೀತಿಯಿಂದ ನುಡಿಸುವಾಗ ಶೃಂಗಾರಾಭಾಸ. ಶೃಂಗಾರದ ಅನುಕರಣೆ 'ಹಾಸ್ಯ'ವೆಂಬ ಭರತನ ವಿಧಿಯಿರುವುದು ನಿಜ, ಅದು ಆಸ್ವಾದೋತ್ತರ ಕಾಲಕ್ಕೆ ಮಾತ್ರ ಅನ್ವಯಿಸುತ್ತದೆ. 'ದೂರಾಕರ್ಷಣ ಮೋಹ ಮಂತ್ರ ಇವ ಮೇ . ' ಎಂಬ ರಾವಣನ ಪ್ರಣಯೋಕ್ತಿಯು ಆಸ್ವಾದಕಾಲದಲ್ಲಿಯೇ ಹಾಸ್ಯರಸವಿಲ್ಲ ಇಲ್ಲಿರುವುದು ರತಿಯಲ್ಲ, ರತ್ಯಾಭಾಸ. ಹೀಗೆ ಒಬ್ಬರಲ್ಲಿ ಮಾತ್ರ ರತಿಯಿದ್ದು ಇನ್ನೊಬ್ಬರಲ್ಲಿ ಇಲ್ಲದಾಗ ಶೃಂಗಾರಾಭಾಸವನ್ನೇ ನಿರ್ಣಯಿಸಬೇಕು. ಶೃಂಗಾರದಂತೆ ಇತರ ರಸಗಳಲ್ಲಿಯೂ 'ಆಭಾಸ'ಗಳಿಗೆ ಅವಕಾಶವುಂಟು. ವಸ್ತುತಃ 'ರಸಧ್ವನಿ' ಒಂದೇ. 'ಭಾವಧ್ವನಿ' ಮುಂತಾದುವೆಲ್ಲ ಅದರ ರೂಪಾಂತರಗಳು. ಪ್ರಯೋಜನವೊಂದೇ ಆದರೂ ಪ್ರಯೋಜಕದ ಭೇದಗಳ ಮೂಲಕ

ವೃತ್ತಿ

ರಸವೇ ಮೊದಲಾದ ಸಾರಾರ್ಥವು ವಾಚ್ಯಾರ್ಥದ ಜತೆಯಲ್ಲಿಯೇ ಪ್ರಕಾಶಿಸುತ್ತದೆ. ಅದು ಮುಖ್ಯವಾಗಿ ಭಾಸವಾಗುತ್ತಿದ್ದರೆ ಧ್ವನಿಯ ಆತ್ಮವೆನಿಸುತ್ತದೆ.

ಈಗ ಮುಂದೆ 'ರಸವದಲಂಕಾರ'ಕ್ಕೂ 'ಅಲಕ್ಷ್ಯಕ್ರಮ' ಧ್ವನಿಗೂ ವಿಷಯವ್ಯಾಪ್ತಿಯಲ್ಲಿ ಎಷ್ಟೋ ವ್ಯತ್ಯಾಸವುಂಟೆಂಬುದನ್ನು ಪ್ರದರ್ಶಿಸಲಾಗುತ್ತದೆ:—

ಕಾರಿಕೆ

ವಾಚ್ಯವಾಚಕಚಾರುತ್ವಹೇತೂನಾಂ ವಿವಿಧಾತ್ಮನಾಮ್ ।
ರಸಾದಿಪರತಾ ಯತ್ರ ಸ ಧ್ವನೇರ್ವಿಷಯೋ ಮತಃ ॥ ೪ ॥

ಶಬ್ದಾರ್ಥಗಳ ಸೌಂದರ್ಯಕ್ಕೆ ಕಾರಣಗಳಾಗುವ ಬಗೆಬಗೆಯ ಸಾಮಗ್ರಿಗಳೆಲ್ಲವೂ ಎಲ್ಲಿ ರಸಾದಿಗಳ ಪ್ರಕಾಶನದಲ್ಲಿಯೇ ತತ್ಪರವಾಗಿರುವುವೋ[18] ಅದನ್ನು (ಮಾತ್ರ) 'ಧ್ವನಿ'ಯ ಲಕ್ಷ್ಯವೆನ್ನುತ್ತೇವೆ.[19]

---

ಅದರಲ್ಲಿಯೂ ಪ್ರಕಾರಗಳನ್ನು ನಿರ್ದೇಶಿಸಲಾಗಿದೆ. ಸುಗಂಧದ ಅಖಂಡ ಅನುಭವವನ್ನು ಗಂಧವಿಮರ್ಶಕರು ಇದು 'ಪುನುಗು', 'ಕಸ್ತೂರಿ' ಎಂದು ವಿಭಾಗಿಸುವಂತೆ

ಎಲ್ಲಿ ಮುಖ್ಯವಾಗಿ ವಿಭಾವ, ಅನುಭಾವ, ವ್ಯಭಿಚಾರಿಗಳ ಸಂಯೋಗದಿಂದ ಉದಿಸುವ ಸ್ಥಾಯಿಯ ಪ್ರತೀತಿಯೊದಗುವ ಸಹೃದಯನ ಸ್ಥಾಯ್ಯಂಶದ ಚರ್ವಣೆಯಿಂದ ಆಸ್ವಾದಾತಿಶಯ ಸ್ಪಷ್ಟವೋ, ಅದು 'ರಸಧ್ವನಿ.' ಉದಾ—'ಕೃಚ್ಛ್ರೇಣೋರುಯುಗಂ ವ್ಯತೀತ್ಯ . . .' (ರತ್ನಾವಳೀ ನಾಟಕ). ಇಲ್ಲಿ ನಾಯಿಕಾಲಿಖಿತವಾದ ಸ್ವಚಿತ್ರವನ್ನೂ, ಪಕ್ಕದಲ್ಲಿಯೇ ಅನುರಕ್ತೆಯಾದ ನಾಯಿಕೆಯ ಚಿತ್ರವನ್ನೂ ಚಿತ್ರಫಲಕದಲ್ಲಿ ವತ್ಸರಾಜನು ಕಾಣುತ್ತಾನೆ. ಅವನ ರತಿಸ್ಥಾಯಿಭಾವವು ವಿಭಾವಾನುಭಾವ ಸಂಯೋಗದಿಂದ ಆಸ್ವಾದ್ಯವೆನಿಸುತ್ತದೆ.—ಲೋ.

17 ರಸಾದಿಗಳಿಗೆ ಮೇಲೆ ಹೇಳಿದ ಪ್ರಾಧಾನ್ಯದಂತೆ, ಅನ್ಯತ್ರ ಅಂಗತ್ವವೂ ಸಾಧ್ಯ. ಉದಾಹರಣೆಗೆ, 'ರಸವತ್', 'ಪ್ರೇಯ', 'ಊರ್ಜಸ್ವಿ', 'ಸಮಾಹಿತ'—ಈ ಅಲಂಕಾರಗಳಲ್ಲಿ ರಸಾದಿಗಳಿಗೆ ಅಂಗತ್ವವುಂಟು. 'ರಸಾದಿಧ್ವನಿ'ಗೆ 'ರಸವದಾದಿ' ಅಲಂಕಾರಗಳಲ್ಲಿ ಅಂತರ್ಭಾವ ಹೇಳಲು ಶಕ್ಯವಿಲ್ಲವೆಂದು ೪ನೆ ಕಾರಿಕೆ ತೋರಿಸುತ್ತದೆ—ಲೋ.

18 ಹಿಂದೆ ಸಮಾಸೋಕ್ತಿಯೇ ಮುಂತಾದ ಅಲಂಕಾರಗಳಲ್ಲಿ 'ವಸ್ತುಧ್ವನಿ' ಅಂತರ್ಗತವಾಗುವುದಿಲ್ಲವೆಂದು ತೋರಿಸಲಾಯಿತು. 'ವಾಚ್ಯವಾಚಕಚಾರುತ್ವಹೇತೂನಾಂ' ಎಂಬಲ್ಲಿ ವಾಚ್ಯಗಳು ಮತ್ತು ವಾಚಕಗಳು ಮತ್ತು ಅಲಂಕಾರಗಳು ಎಂದು ದ್ವಂದ್ವ ಸಮಾಸವನ್ನಾಶ್ರಯಿಸಬೇಕು—ಲೋ.

19 ಇಲ್ಲಿ ಬಹಳ ವಿಸ್ತಾರವಾಗಿ 'ರಸ'ದ ಬಗೆಗೆ ಭಟ್ಟನಾಯಕನ ಸಿದ್ಧಾಂತವನ್ನು ಪೂರ್ವಪಕ್ಷವಾಗಿ ವಿವರಿಸಿ, ಅದಕ್ಕಿಂತ ಧ್ವನಿಸಿದ್ಧಾಂತವು ಹೇಗೆ ಗ್ರಾಹ್ಯತರವೆಂಬುದನ್ನು ಅಭಿನವ

ವೃತ್ತಿ

ರಸ, ಭಾವ, ಇವುಗಳ ಆಭಾಸ ಮತ್ತು ಪ್ರಶಮನಗಳು—ಈ ಪ್ರಕಾರವಾದ ಮುಖ್ಯಾರ್ಥವನ್ನೇ ಹಿಂಬಾಲಿಸುತ್ತಾ ಎಲ್ಲಿ 'ಶಬ್ದಾಲಂಕಾರ'ಗಳು, 'ಅರ್ಥಾಲಂಕಾರ'ಗಳು ಮತ್ತು 'ಗುಣ'ಗಳು, ಪರಸ್ಪರ ಭಿನ್ನವಾಗಿರುವಂತೆಯೇ ಧ್ವನಿಗಿಂತಲೂ ಭಿನ್ನವಾಗಿರುವುವೆಂದು ತೀರ್ಮಾನಿಸಬಹುದೋ, ಅಂತಹ ಕಾವ್ಯಕ್ಕೆ 'ಧ್ವನಿ'ಯೆಂಬ ಹೆಸರು ಸಲ್ಲುತ್ತದೆ.

ಕಾರಿಕೆ

ಪ್ರಧಾನೇಽನ್ಯತ್ರ ವಾಕ್ಯಾರ್ಥೇ ಯತ್ರಾಙ್ಗಂ ತು ರಸಾದಯಃ ।
ಕಾವ್ಯೇ ತಸ್ಮಿನ್ನಲಂಕಾರೋ ರಸಾದಿರಿತಿ ಮೇ ಮತಿಃ ॥ ೫ ॥

ವಾಕ್ಯದ ತಾತ್ಪರ್ಯವು ಬೇರೊಂದರಲ್ಲಿ[೨೦] ಪ್ರಧಾನವಾಗಿರುವಾಗ, ರಸಾದಿಗಳು ಅಂಗಭೂತವಾಗಿ ಎಲ್ಲಿ ಬರುವುವೋ ಆ ಕಾವ್ಯದಲ್ಲಿ ರಸಾದಿಗಳು ಅಲಂಕಾರವೆಂದೇ ನನ್ನ ಭಾವನೆ.

ವೃತ್ತಿ

ಇತರರು ರಸವದಲಂಕಾರಕ್ಕೆ ಬೇರೆ ವಿಧವಾದ ವ್ಯಾಪ್ತಿಯನ್ನು ಪ್ರದರ್ಶಿಸಿರುವರಾದರೂ, 'ಯಾವ ಕಾವ್ಯದಲ್ಲಿ ಬೇರೊಂದು ಮುಖ್ಯವಾದ ವಾಕ್ಯಾರ್ಥವಾಗಿದ್ದು, ರಸಾದಿಗಳು ಅದಕ್ಕೆ ಅಂಗವಾಗಿ ಮಾತ್ರ ಬರುವುವೊ, ಅಂತಹ ರಸಾದಿಗಳೇ 'ರಸವದಲಂಕಾರ'ಕ್ಕೆ ವಿಷಯಗಳು'—ಎಂಬುದೇ ನನ್ನ ಸಿದ್ಧಾಂತ. ಉದಾಹರಣೆಗೆ 'ಚಾಟು' ಶ್ಲೋಕಗಳಲ್ಲೆಲ್ಲ 'ಪ್ರೇಯೋಽಲಂಕಾರ'ವೇ ಮುಖ್ಯವಾದ ವಾಕ್ಯಾರ್ಥವಾಗಿದ್ದರೂ ರಸಾದಿಗಳು ಅದಕ್ಕೆ ಅಂಗಭೂತವಾಗಿ ಬರುವುದನ್ನು ನೋಡಬಹುದು.[21]

---

ಗುಪ್ತರು ಮಂಡಿಸಿದ್ದಾರೆ ಇವೆರಡೂ ಮತಗಳ ನಮ್ಮ ವಿವರಣೆಗೆ ನೋಡಿ—ಕನ್ನಡ ಕಾವ್ಯ ಪ್ರಕಾಶ, ನಾಲ್ಕನೆಯ ಉಲ್ಲಾಸ, ಅಡಿ ಟಿಪ್ಪಣಿಗಳು.

ಧ್ವನಿಸಿದ್ಧಾಂತದಂತೆ ರಸಗಳು ಅಭಿವ್ಯಂಗ್ಯ, ಮತ್ತು ಪ್ರತೀತಿ ಮಾತ್ರದಿಂದಲೇ ಆಸ್ವಾದ್ಯ. ಅಭಿವ್ಯಕ್ತಿಯು ಪ್ರಧಾನವಾಗಿರಬಹುದು, ಇಲ್ಲವೆ ಅಪ್ರಧಾನವಾಗಿರಬಹುದು. ಪ್ರಧಾನವಾಗಿದ್ದರೆ 'ರಸಧ್ವನಿ', ಅಪ್ರಧಾನವಾಗಿದ್ದರೆ 'ರಸಾದ್ಯಲಂಕಾರ' —ಲೋ.

20 = ವ್ಯಂಗ್ಯರಸ, ವ್ಯಂಗ್ಯ ಅಲಂಕಾರ ಅಥವಾ ವ್ಯಂಗ್ಯ ವಸ್ತುವಿನಲ್ಲಿ —ಲೋ.

21 ಭಾಮಹನ ಅಭಿಪ್ರಾಯದಂತೆ ಚಾಟುಪದ್ಯಗಳಲ್ಲಿ ಪ್ರೇಯೋಽಲಂಕಾರವು ಮುಖ್ಯ; ರಸಾದಿಗಳು ಅಲಂಕಾರಕ್ಕೆ ಅಂಗ. ಗುರು, ದೇವ, ನೃಪತಿ, ಪುತ್ರ—ಇತ್ಯಾದಿಗಳನ್ನು ಕುರಿತು ಪ್ರೀತಿಯ ವರ್ಣನೆ ಪ್ರೇಯೋಽಲಂಕಾರವೆಂದು ಭಾಮಹನ ಲಕ್ಷಣ. (ನೋಡಿ—ಕನ್ನಡ

ಹೀಗೆ 'ಅಲಂಕಾರ'ವೆನಿಸುವ ರಸಾದಿಗಳು 'ಶುದ್ಧ'ವಾಗಿರಬಹುದು[೨೨] ಇಲ್ಲವೆ 'ಸಂಕೀರ್ಣ'(=ಮಿಶ್ರ)ವಾಗಿರಬಹುದು. ಮೊದಲನೆಯದಕ್ಕೆ ಉದಾಹರಣೆ:—

೨೦ "ಕಿಂ ಹಾಸ್ಯೇನ ನ ಮೇ ಪ್ರಯಾಸ್ಯಸಿ ಪುನಃ ಪ್ರಾಪ್ತಶ್ಚಿರಾದ್ದರ್ಶನಂ
ಕೇಯಂ ನಿಷ್ಕರುಣ! ಪ್ರವಾಸರುಚಿತಾ, ಕೇನಾಸಿ ದೂರೀಕೃತಃ।
ಸ್ವಪ್ನಾನ್ತೇಷ್ವಿತಿ ತೇ ವದನ್ ಪ್ರಿಯತಮವ್ಯಾಸಕ್ತಕಂಠಗ್ರಹೋ
ಬುದ್ಧ್ವಾ ರೋದಿತಿ ರಿಕ್ತಬಾಹುವಲಯಸ್ತಾರಂ ರಿಪುಸ್ತ್ರೀಜನಃ" ॥

ಪರಿಹಾಸದಿಂದೇನು ಮತ್ತೆ ಹೋಗಲು ಬಿಡೆನು
ಚಿರಕಾಲ ಕಳೆದಿರಲು ದೊರೆತಿರುವ ನೀನು!
ಅಲಿತವಲಿ ಈ ಹುಚ್ಚು ನಿನಗೆ ಬಂದುದದೆಂತು?
ನಿಷ್ಕರುಣ! ಹೇಳೇಕೆ ಬಹುದೂರನಾದೆ?
ಕನಸಿನೊಳಗಿಂತು ಕನವರಿಸಿ ಪತಿಕಂಠವನು
ತಬ್ಬುತಿರೆ, ಕನಸಿನಿಂದೆಚ್ಚರಾಗುತಲಿ
ಎದ್ದು ನೋಡಲು ತೋಳ ತೆಕ್ಕೆ ಬರಿದಾಗಿರಲು,
ಆರ್ತರೋದನಗೈವುದರಿಯುವತಿಜನವು[೨೩] ॥

---

ಕಾವ್ಯಾಲಂಕಾರ) 'ಪ್ರೇಯಾನ್' ಎಂದರೆ ಪ್ರಿಯತರಾಖ್ಯಾನವೇ ಎಲ್ಲಿ ಅಲಂಕಾರವೋ ಆ ಅಲಂಕಾರ್ಯವಾದ ಕಾವ್ಯವು "ಪ್ರೇಯಸ್". ಹೀಗೆ ಭಾಮಹನೆನ್ನುವಾಗ ಅಲಂಕಾರವೇ 'ವಾಕ್ಯಾರ್ಥ'ವೆಂದು ಸ್ಪಷ್ಟವಾಗಿ ಹೇಳಿದಂತಾಗಲಿಲ್ಲ.

ಆದ್ದರಿಂದ 'ವಾಕ್ಯಾರ್ಥ'ವೆಂದರೆ 'ಪ್ರಧಾನ'ವೆಂಬ ಸಾಮಾನ್ಯಾರ್ಥವನ್ನು ಗ್ರಹಿಸುವುದು ಇನ್ನೊಂದು ವಿವರಣೆ. ಈ ಎರಡನೆ ವಿವರಣೆಯಲ್ಲಿ ಪ್ರಧಾನತ್ವವೇ ಚಮತ್ಕಾರಕಾರಿತ್ವ. ಉದ್ಭಟನ ಅನುಯಾಯಿಗಳು ಈ ವಾಕ್ಯವನ್ನು ಒಡೆದು ಮತ್ತೊಂದು ರೀತಿಯಿಂದ ವಿವರಿಸುತ್ತಾರೆ:— 'ಚಾಟುಷು ವಾಕ್ಯಾರ್ಥತ್ವೇ' =(i) ಚಾಟು ವಿಷಯದಲ್ಲಿ ತಾತ್ಪರ್ಯವಿದ್ದಾಗ ಮತ್ತು (ii) ಚಾಟುಗಳೇ ವಾಕ್ಯಾರ್ಥವಾದಾಗ. ಈ ಎರಡೂ ಪ್ರಸಂಗಗಳಲ್ಲಿ ಪ್ರೇಯೋಽಲಂಕಾರ. ಈ ಉದ್ಭಟ ಮತದಲ್ಲಿ ಭಾವಾಲಂಕಾರಕ್ಕೇ 'ಪ್ರೇಮ'ವೆಂದು ಹೆಸರು. ಅಲ್ಲಿ ಪ್ರೀತಿ ಅಥವಾ ಪ್ರೇಮವು ಇತರ ಭಾವಗಳಿಗೂ ಉಪಲಕ್ಷಣ.

'ರಸಾದಿಗಳು' = ರಸವದಲಂಕಾರದಂತೆ 'ಪ್ರೇಯಸ್' ಮುಂತಾದ ಅಲಂಕಾರಗಳಿಗೂ ವಿಷಯವೆಂದಭಿಪ್ರಾಯ—ಲೋ.

೨೨ 'ಶುದ್ಧ' = ಅಂಗಭೂತವಾದ ರಸಾಂತರದಿಂದ ಇಲ್ಲವೆ ಅಲಂಕಾರಾಂತರದಿಂದ ಮಿಶ್ರಿತವಾಗದ.

೨೩ ರಮಣಿಯು ಕನಸಿನಲ್ಲಿ ನಗುತ್ತಿರುವ ಪ್ರಿಯತಮನನ್ನು ಸಂದರ್ಶಿಸಿದ್ದಾಳೆ. 'ನಿನ್ನ

ಈ ಶ್ಲೋಕದಲ್ಲಿ ಶುದ್ಧವಾದ ಕರುಣರಸವು[24] (ರಾಜಸ್ತುತಿಗೆ) ಅಂಗವಾಗಿರುವುದರಿಂದ ಅದು 'ರಸವದಲಂಕಾರ'ವೆನಿಸುವುದು ಸ್ಪಷ್ಟವಾಗಿದೆ. ಹೀಗೆಯೇ ಇದೇ ವಿಧವಾದ ಬೇರೆ ಕಡೆಗಳಲ್ಲಿಯೂ ಉಳಿದ ರಸಗಳು ಅಂಗಭಾವವನ್ನು ಪಡೆಯುವುವು.[25]

ಇನ್ನು 'ಸಂಕೀರ್ಣ'ವಾದ ರಸಾದಿಗಳು ಅಂಗಭೂತವಾಗುವುದಕ್ಕೆ[26] ಉದಾಹರಣೆ—

---

ಧೂರ್ತತನವನ್ನರಿತಿರುವುದರಿಂದ ಮತ್ತೆ ತಪ್ಪಿಸಿಕೊಳ್ಳದಂತೆ ಬಾಹುಪಾಶದಲ್ಲಿ ಕಟ್ಟಿಹಾಕುವೆನು, ಬಿಡುವುದಿಲ್ಲ', ಎಂಬುದು ಅವಳ ಮಾತು 'ನಿಷ್ಕರುಣ'....ಇತ್ಯಾದಿಗಳು ಅವನ ದೋಷಗಳನ್ನು ಕುರಿತ ಪ್ರಣಯನಿಂದೆ. ತನ್ನ ತಪ್ಪು ಏನೂ ಇಲ್ಲವೆಂಬ ಸೂಚನೆಯಿದೆ. ಎಲ್ಲವೂ ನಿದ್ದೆಯ ಕನವರಿಕೆಯಾದ್ದರಿಂದ, ಎದ್ದೊಡನೆ ಮಾಯವಾಗುತ್ತದೆ

24 ಸ್ವಪ್ನಸಮಾಗಮದಿಂದ ಉದ್ದೀಪಿತವಾಗುವ ಶೋಕಸ್ಥಾಯಿಭಾವವು ಆಸ್ವಾದ್ಯವಾಗಿ 'ಕರುಣರಸ'ವೆನಿಸುತ್ತದೆ. ರಾಜನ ಪ್ರಭಾವಾತಿಶಯದ ಮುಖ್ಯ ತಾತ್ಪರ್ಯಕ್ಕೆ ಅದು ಅಂಗವೆನಿಸುತ್ತದೆಯಾಗಿ ಶುದ್ಧ 'ರಸವದಲಂಕಾರ' 'ನಿನ್ನಿಂದ ಶತ್ರುಗಳು ಹತರಾಗಿರುವರು' ಎಂಬ ನಿರಲಂಕೃತ ವಾಕ್ಯದಂತೆ ಈ ವಾಕ್ಯವಿಲ್ಲ, ಅತ್ಯಂತ ಸುಂದರವಾಗಿದೆ. ಇಲ್ಲಿಯ ಅರ್ಥಸೌಂದರ್ಯವು ಕರುಣರಸದಿಂದಲೇ ಉಂಟಾದುದು. ಚಂದ್ರ ಮುಂತಾದ ವಸ್ತುಗಳಿಂದ 'ಮುಖ' ಮುಂತಾದ ವಸ್ತುಗಳು ಸಾದೃಶ್ಯದ ಮೂಲಕ ಅಲಂಕೃತವಾಗುತ್ತವೆ, ಎಂದರೆ ಪ್ರಕೃತ ವಸ್ತುಗಳ ಸೌಂದರ್ಯ ಪ್ರತೀತಿಗೆ ಉಪಮಾದಿಗಳು ಕಾರಕವಾಗುತ್ತವೆ, ಹಾಗೆಯೇ ರಸದಿಂದ ಕೂಡ ಮತ್ತೊಂದು ವಸ್ತು ಅಥವಾ ಮತ್ತೊಂದು ರಸ ಉಪಕೃತವಾದಾಗ ಸುಂದರವೆನಿಸುತ್ತದೆ. ಆದ್ದರಿಂದ 'ವಸ್ತು' ಅಲಂಕಾರವಾಗುವಂತೆ 'ರಸ'ವೂ ಅಲಂಕಾರವಾಗುವುದರಲ್ಲಿ ವಿರೋಧವೇನೂ ಇಲ್ಲ. ರಸವು ಪ್ರಕೃತ ಅರ್ಥಕ್ಕೆ ಏನು ಮಾಡಿ ಸೌಂದರ್ಯವನ್ನುಂಟುಮಾಡುತ್ತದೆ? ಎಂಬ ಪ್ರಶ್ನೆಗೆ ಪ್ರತಿಯಾಗಿ, ಉಪಮೆಯೇ ಆಗಲಿ, ಏನು ಮಾಡಿ ಸೌಂದಯವನ್ನುಂಟುಮಾಡುತ್ತದೆ ?, ಎಂದು ಪ್ರಶ್ನಿಸಬಹುದು. 'ಉಪಮೆಯು ಹೋಲಿಸುತ್ತದೆ' ಎಂದುತ್ತರಿಸುವುದಾದರೆ 'ರಸವು ಪ್ರಕೃತಾರ್ಥವನ್ನು ಸರಸಗೊಳಿಸುತ್ತದೆ' ಎಂಬುದಾದರೂ ಅಷ್ಟೇ ನಿಜ, ಸ್ವಸಂವೇದ್ಯ. ಆದ್ದರಿಂದ 'ಇಲ್ಲಿ ರಸವು ವಿಭಾವಾದಿಗಳ ನಡುವೆ ಯಾವುದನ್ನು ಅಲಂಕರಿಸುತ್ತದೆ?' ಎಂದು ಕೆಲವರು ಮಾಡಿರುವ ಆಶಂಕೆಗೆ ಎಡೆಯಿಲ್ಲ, ನಾವು ಇಲ್ಲಿ ಪ್ರಸ್ತುತಾರ್ಥವನ್ನೇ "ಅಲಂಕಾರ್ಯ"ವೆಂದು ನಿರ್ಣಯಿಸಿದ್ದೇವೆ; ವಿಭಾವಾದಿಗಳನ್ನಲ್ಲ—ಲೋ

25 ಇಂತಹ ದೇವನೃಪಾದಿ ಪ್ರಭಾವವರ್ಣನೆಯ ಉದಾಹರಣೆಗಳು ಬೇಕಾದಷ್ಟಿವೆಯೆಂದು ತಾತ್ಪರ್ಯ—ಲೋ.

26 ಎಂದರೆ 'ರಸವದಲಂಕಾರ'ವೆನಿಸುವುದಕ್ಕೆ—ಲೋ.

೨೦ ಕ್ಷಿಪ್ತೋ ಹಸ್ತಾವಲಗ್ನಃ ಪ್ರಸಭಮಭಿಹತೋಽಪ್ಯಾದದಾನೋಂಽಶುಕಾನ್ತಂ
ಗೃಹ್ಣನ್ ಕೇಶೇಷ್ವಪಾಸ್ತಶ್ಚರಣನಿಪತಿತೋ ನೇಕ್ಷಿತಃ ಸಂಭ್ರಮೇಣ।
ಆಲಿಂಗನ್ ಯೋಽವಧೂತಸ್ತ್ರಿಪುರಯುವತಿಭಿಃ ಸಾಶ್ರುನೇತ್ರೋತ್ಪಲಾಭಿಃ
ಕಾಮೀವಾರ್ದ್ರಾಪರಾಧಃ ಸ ದಹತು ದುರಿತಂ ಶಾಂಭವೋ ವಃ ಶರಾಗ್ನಿಃ॥

ಕೈವಿಡಿಯೆ ನೂಂಕಿದೊಡೆ, ಪೊಯ್ದರೂ ರೋಷದಲಿ
ಸೆರಗ ತುದಿಯನೆ ಮತ್ತೆ ಸಾರಿ ಪಿಡಿಯುತಲಿ,
ತಳ್ಳಿದೊಡೆ, ಕೂದಲನೆ ಸವರತೊಡಗುತ ಮತ್ತೆ,
ಕಾಲ್ವಿಡಿದರೂ ದುಗುಡದಿಂದದನು ಮರೆತು,
ಅಪ್ಪಲೆಳಸಲು ಮೊದಲೆ ತಪ್ಪಿಸುತ ವೇಗದಲಿ,
ನೇತ್ರಪದ್ಮಗಳಿಂದ ಕಣ್ಣೀರ ಮಿಡಿವ,
ತ್ರಿಪುರಯುವತಿಯರಿಂತು ಧೂರ್ತಕಾಮಿಯ ಪೋಲು
ಕಂಡ ಶ್ರೀಶಂಭುವಿನ ಬಾಣಾಗ್ನಿಯು
ನಮ್ಮ ಪಾಪವನ್ನೆಲ್ಲ ಸುಟ್ಟಿರುಹಲಿ.[27]

ಮೇಲಿನ ಉದಾಹರಣೆಯಲ್ಲಿ ತ್ರಿಪುರಾರಿಯ ಪ್ರಭಾವಾತಿಶಯವೇ ವಾಕ್ಯದ ಮುಖ್ಯ ತಾತ್ಪರ್ಯ. ಶ್ಲೇಷದಿಂದ[28] ಪೋಷಿತವಾದ ಈರ್ಷ್ಯಾ-ವಿಪ್ರಲಂಭ-ಶೃಂಗಾರ-ರಸವು[29] ಅದಕ್ಕೆ ಅಂಗಭೂತವಾಗಿದೆ. ಈ ವಿಧವಾದ ಉದಾಹರಣೆಗಳು ಮಾತ್ರ

---

[27] ಕಾಮಿಯ ಪರವಾಗಿ ಒಂದು ಅರ್ಥ, ಬಾಣಾಗ್ನಿಯ ಪರವಾಗಿ ಇನ್ನೊಂದರ್ಥ—ಹೀಗೆ ಎರಡರ್ಥಗಳು ಕ್ರಿಯಾಪದಗಳಿಗೆಲ್ಲ ಅನ್ವಯಿಸುತ್ತವೆಯಾದ್ದರಿಂದ ಶ್ಲೇಷೆಯಿದೆ. ಕಣ್ಣೀರಿಗೆ ಈರ್ಷ್ಯೆ ಒಂದು ಕಡೆ ಕಾರಣ; ಇನ್ನೊಂದು ಕಡೆ ಪುನಸ್ಸಮಾಗಮದ ಆಶೆಯ ವಿನಾಶ ಕಾರಣ—ಲೋ.

[28] ಎಂದರೆ ಶ್ಲಿಷ್ಟೋಪಮೆಯಿಂದ.

[29] ಹೀಗೆ ಅಲಂಕಾರಸಹಿತವಾದ ರಸ ಇಲ್ಲಿ ಅಂಗ, ಶುದ್ಧ ರಸವಲ್ಲ. ಇಲ್ಲಿ ಕರುಣರಸ ಇದ್ದರೂ ಅದು ಸೌಂದರ್ಯಪ್ರಯೋಜಕವಲ್ಲವಾದ್ದರಿಂದ ಅದನ್ನು ವಿಪ್ರಲಂಭದೊಡನೆ ಮೂಲದಲ್ಲಿ ಉಲ್ಲೇಖಿಸಿಲ್ಲ. ಈರ್ಷ್ಯಾವಿಪ್ರಲಂಭವೊಂದೇ ಸೌಂದರ್ಯ ಪ್ರಯೋಜಕ, 'ಅಲಂಕಾರ;' ಅದು ಮುಖ್ಯವಲ್ಲ, 'ವಾಕ್ಯಾರ್ಥ'ವಲ್ಲ. ಒಂದು ವೇಳೆ ಇದೇ ಮುಖ್ಯವಾಗಿದ್ದರೆ ವಿರುದ್ಧರಸವಾದ ಕರುಣದ ಪ್ರತೀತಿಯ ಛಾಯೆ ಕೂಡ ಇಲ್ಲಿ ಸುಳಿಯುವಂತಿರಲಿಲ್ಲ. ವಿಪ್ರಲಂಭವು ರತಿಯ ಪ್ರಕಾರವಾದ್ದರಿಂದ 'ಸಾಪೇಕ್ಷ'ಭಾವ, ಅಥವಾ ಪ್ರತ್ಯಾಶಾ-ಮೂಲ ಕರುಣವು ಶೋಕದ ಪ್ರಕಾರವಾದ್ದರಿಂದ 'ನಿರಪೇಕ್ಷ ಭಾವ ಅಥವಾ ನಿರಾಶಾಮೂಲ ಹೀಗೆ ಎರಡೂ ಅತ್ಯಂತ ವಿರುದ.—ಲೋ.

ರಸವದಾದಿ ಅಲಂಕಾರಗಳಿಗೆ ನ್ಯಾಯವಾದ ಲಕ್ಷ್ಯಗಳು. ಆದುದರಿಂದಲೇ ಈರ್ಷ್ಯಾ-ವಿಪ್ರಲಂಭ-ಶೃಂಗಾರ-ರಸವೂ ಕರುಣರಸವೂ ಪರಸ್ಪರ ವಿರುದ್ಧವಾದರೂ ಕೂಡ, ಇಲ್ಲಿ ಎರಡೂ ಮುಖ್ಯ ತಾತ್ಪರ್ಯಕ್ಕೆ ಅಂಗವೆಂದು ತೀರ್ಮಾನಿಸಿದ ಕಾರಣ, ಅವುಗಳನ್ನು ಒಂದೇ ಎಡೆಯಲ್ಲಿ ಸಮಾವೇಶಗೊಳಿಸಿದುದೂ ದೋಷವಾಗುವುದಿಲ್ಲ. ಎಲ್ಲಿ ರಸಕ್ಕೇ ವಾಕ್ಯದಲ್ಲಿ ಮುಖ್ಯ ತಾತ್ಪರ್ಯವಿರುವುದೋ ಅಲ್ಲಿ ಅದಕ್ಕೆ ಅಲಂಕಾರತ್ವ ಬರುವುದೆಂತು? ಅಲಂಕಾರವೆಂದರೆ ಸೌಂದರ್ಯಕಾರಣವೆಂಬುದು ಪ್ರಸಿದ್ಧವಾಗಿಯೇ ಇದೆ. ತಾನೇ ತನ್ನ ಸೌಂದರ್ಯಕ್ಕೆ ಕಾರಣವಾಗುವುದು ಅತ್ಯಂತ ಅಸಂಭವ.

ಈ ಎಲ್ಲ ಅಂಶಗಳ ಸಂಗ್ರಹವೇ ಮುಂದಿನ ಶ್ಲೋಕ:—

**ರಸಭಾವಾದಿತಾತ್ಪರ್ಯಮಾಶ್ರಿತ್ಯ ವಿನಿವೇಶನಮ್ ।**
**ಅಲಂಕೃತೀನಾಂ ಸರ್ವಾಸಾಮಲಂಕಾರತ್ವಸಾಧನಮ್ ॥**

'ರಸಭಾವಾದಿಗಳ ತಾತ್ಪರ್ಯವನ್ನು ಮಾತ್ರ ಮನಸ್ಸಿನಲ್ಲಿಟ್ಟು ಮಾಡುವಂತಹ ಅಲಂಕಾರಗಳ ಸಂಯೋಜನೆಯೇ ಎಲ್ಲ ಅಲಂಕಾರಗಳಿಗೂ[30] ಅಲಂಕಾರತ್ವವನ್ನು ಸಾಧಿಸಿಕೊಡುತ್ತದೆ.'

ಆದುದರಿಂದ ಎಲ್ಲಿ ರಸಾದಿಗಳು ವಾಕ್ಯದ ಮುಖ್ಯ ತಾತ್ಪರ್ಯವಾಗಿರುವುವೋ, ಅವೊಂದೂ ರಸವದಲಂಕಾರಕ್ಕೆ ವಿಷಯಗಳಲ್ಲ, ಅದಕ್ಕೆ ಬದಲಾಗಿ 'ಧ್ವನಿ'ಯ ಪ್ರಭೇದವೆಂದೇ ಎನಿಸುತ್ತವೆ. ಉಪಮೆಯೇ ಮೊದಲಾದುವೆಲ್ಲವೂ ಆ ರಸ-ಧ್ವನಿಗೇ ಅಲಂಕಾರಗಳು. ಆದರೆ ಎಲ್ಲಿ ಬೇರೊಂದು ಪ್ರಧಾನವಾದ ವಾಕ್ಯಾರ್ಥವಿರುವುದೋ ಮತ್ತು ಅದಕ್ಕೆ ರಸಾದಿಗಳಿಂದ ಸೌಂದರ್ಯವು ಉಂಟಾಗುತ್ತಿರುವುದೋ ಅದು ಮಾತ್ರ ರಸಾದಿಗಳ 'ಅಲಂಕಾರ'ತ್ವಕ್ಕೆ ಲಕ್ಷ್ಯ[31]

---

30 ಎಂದರೆ ಉಪಮಾದಿಗಳಿಗೂ, ಎಂದರ್ಥ ಉಪಮಾದಿಗಳು 'ಅಲಂಕಾರ'ವೆನಿಸುವುದು ಯಾವ ತತ್ತ್ವದಿಂದಲೋ ಆ ತತ್ತ್ವದಿಂದಲೇ ರಸಾದಿಗಳು ಕೂಡ 'ಅಲಂಕಾರ'ವೆನಿಸಬಹುದು. ತತ್ತ್ವವೆಂದರೆ 'ಅಲಂಕಾರ್ಯ'ವಾದ ಮತ್ತೊಂದರ ಸನ್ನಿಧಾನ. ಯದ್ಯಪಿ 'ಅಲಂಕಾರ್ಯ'ವು ವಸ್ತು ಮಾತ್ರವೇ ಬೇಕಾದರೂ ಆಗಿರಬಹುದು, ಆದರೂ ಆ ವಸ್ತುವು ಮತ್ತೆ ರಸವೊಂದಕ್ಕೆ ವಿಭಾವಾದಿಸ್ವರೂಪವನ್ನು ತಾಳಿಬಿಡುವುದರಿಂದ, ರಸಾದಿ ತಾತ್ಪರ್ಯದಲ್ಲಿ ಪರ್ಯವಸಾನಗೊಳ್ಳುತ್ತದೆ ಹೀಗೆ ಪರ್ಯವಸಾನದಲ್ಲಿ ಎಲ್ಲೆಡೆಗೂ ರಸಧ್ವನಿಯೇ 'ಆತ್ಮ'ವೆನಿಸುತ್ತದೆ—ಲೋ.

31 ತಾತ್ಪರ್ಯವಿಷ್ಟು —(ಆಪಾತತಃ ನೋಡಿದರೆ) ಉಪಮೆಯೆಂಬ ಅಲಂಕಾರಕ್ಕೆ ವಾಚ್ಯಾರ್ಥವೇ 'ಅಲಂಕಾರ್ಯ'ವೆಂಬುದು ನಿಜ, ಆದರೂ ವಸ್ತುತಃ ವ್ಯಂಗ್ಯಾರ್ಥದ ಅಭಿವ್ಯಕ್ತಿಸಾಮರ್ಥ್ಯವೇ 'ಅಲಂಕಾರ'ತ್ವ. ಎಂದರೆ ವಸ್ತುತಃ 'ಅಲಂಕಾರ್ಯ'ವು ಧ್ವನಿಯೇ ಕಡಗ, ಹಾರ, ಮುಂತಾದ ಆಭರಣಗಳು ಶರೀರ ಸಂಯೋಗದಿಂದ 'ಅಲಂಕಾರ'ಗಳೆನಿಸುವುದು ನಿಜ, ಆದರೆ ಅವು

ಹೀಗೆ ತಿಳಿಯುವುದರಿಂದ 'ಧ್ವನಿ', 'ಉಪಮೆ'ಯೇ ಮೊದಲಾದುವು, ಮತ್ತು ರಸವದಲಂಕಾರ— ಇವುಗಳಿಗಿರುವ ಪರಸ್ಪರ ವ್ಯತ್ಯಾಸಗಳು ಸ್ಫುಟವಾಗುತ್ತವೆ.[32] ಒಂದು ಪಕ್ಷ ಯಾರಾದರೂ ಸಚೇತನರ ಮನೋಭಾವಗಳನ್ನು ಮುಖ್ಯ ತಾತ್ಪರ್ಯ ವಾಗಿ ವರ್ಣಿಸುವುದೇ ರಸವದಲಂಕಾರದ ಲಕ್ಷ್ಯವೆಂದು ಹೇಳಿದರೆ,[33] ಆಗ ಉಪಮೆಯೇ ಮೊದಲಾದ ಅಲಂಕಾರಗಳಿಗೆಲ್ಲ ಅತ್ಯಂತ ಸಂಕುಚಿತವಾದ ಕ್ಷೇತ್ರ ಉಳಿಯುತ್ತದೆ; ಅಥವಾ ಯಾವ ಸ್ವತಂತ್ರ ಕ್ಷೇತ್ರವೂ ಉಳಿಯುವುದೇ ಇಲ್ಲವೆಂದಂ ತಾಗುತ್ತದೆ. ಏಕೆಂದರೆ ಅಚೇತನ-ವಸ್ತುವೃತ್ತಾಂತವೇ ಮುಖ್ಯವಾಕ್ಯಾರ್ಥವಾಗಿರುವ ಲಕ್ಷ್ಯದಲ್ಲಿಯೂ ಸಹ ಕವಿ ಒಂದಿಲ್ಲೊಂದು ರೀತಿಯಿಂದ[34] ಚೇತನವಸ್ತು ವೃತ್ತಾಂತವನ್ನು ಯೋಜಿಸಲೇಬೇಕಾಗುತ್ತದೆ. ಮತ್ತು ಚೇತನವಸ್ತು ವೃತ್ತಾಂತವು ಇರುವಾಗಲೂ ಕೂಡ, ಅಲ್ಲಿ ಅಚೇತನ ವೃತ್ತಾಂತವೇ ಮುಖ್ಯ ತಾತ್ಪರ್ಯವಾಗಿರುವ ಪಕ್ಷಕ್ಕೆ ಅದು ರಸವದಲಂಕಾರಕ್ಕೆ ವಿಷಯವಲ್ಲವೆನ್ನಬೇಕಾಗುತ್ತದೆ. ಹೀಗೆ ನಾವು

---

ಗಳಿಂದ ಅಲಂಕೃತವಾಗತಕ್ಕುದು ಕೇವಲ ಅಚೇತನ ಶರೀರವಲ್ಲ, ಧರಿಸುವಾತನ ಚಿತ್ತವೃತ್ತಿ ವಿಶೇಷ, ಅದರ ಪ್ರಕಟನೌಚಿತ್ಯ, ಇವುಗಳ ಸೂಚನೆಗೆ ಆಲಂಬನವಾದ ಚೇತನ ಅಥವಾ ಆತ್ಮವೇ ಅವಕ್ಕೂ ಅಲಂಕಾರ್ಯ. ಅಚೇತನವಾದ ಹೆಣದ ಶರೀರವು ಕುಂಡಲಾದಿಗಳಿಂದ ಅಲಂಕೃತ ವಾಗಿದ್ದರೂ ಶೋಭಿಸದು, ಅಲಂಕಾರ್ಯವಾದ ಚೇತನವೇ ಇಲ್ಲವಾದ್ದರಿಂದ. ಕಡಗ ಮುಂತಾದ ಆಭರಣಗಳಿಂದ ಕೂಡಿದ ಯತಿಯ ಶರೀರವು ಹಾಸ್ಯಾಸ್ಪದವಾಗುತ್ತದೆ, ಅಲಂಕಾರ್ಯವಾದ ಚೇತನದ ಅನೌಚಿತ್ಯದ ದೆಸೆಯಿಂದ, ಅಲ್ಲಿಯೂ ದೇಹದ ಅನೌಚಿತ್ಯವೇನೂ ಇಲ್ಲವೆಂಬುದು ಸ್ಪಷ್ಟ. ಹೀಗೆ ಆತ್ಮವೇ ವಸ್ತುತಃ 'ಅಲಂಕಾರ್ಯ'ವೆಂಬುದು ತತ್ತ್ವ. 'ನಾನು ಅಲಂಕೃತನಾಗಿ ದ್ದೇನೆ' ಎಂಬ ಚೇತನಾತ್ಮನ ಅಭಿಮಾನವಾದರೂ ಇದನ್ನೇ ಸಿದ್ಧಪಡಿಸುತ್ತದೆ.

ರಸಾದಿಗಳ ಅಲಂಕಾರತ್ವ = ರಸಾದಿಕರ್ತೃಕವಾದ ಅಲಂಕರಣಕ್ರಿಯೆಯೇನುಂಟೋ ಅದು —ಲೋ.

32 ಎಲ್ಲಿ ರಸವು ಅಲಂಕಾರ್ಯವಾಗಿ, ಅಂಗಭೂತವಾದ ರಸಾಂತರಗಳು ಕೂಡ ಇಲ್ಲವೋ, ಅಲ್ಲಿ "ಶುದ್ಧ"ವಾದ 'ಉಪಮಾ' ಇತ್ಯಾದಿ ಅಲಂಕಾರಗಳು. ಹೀಗೆ ಭಾವಿಸುವುದರಿಂದ ಉಪಮೆಯ ಕ್ಷೇತ್ರಕ್ಕೆ ಚ್ಯುತಿಯೇನೂ ಬಾರದು. 'ರಸವದಲಂಕಾರ' ಎಂಬ ಶಬ್ದವೇ 'ಪ್ರೇಯಸ್' 'ಊರ್ಜಸ್ವಿ,' 'ಸಮಾಹಿತ' ಮುಂತಾದ ಭಾವಾಲಂಕಾರಗಳಿಗೂ ಉಪಲಕ್ಷಣ.

33 ಮುಖ್ಯವಾಗಿ ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿಯೇ ಗ್ರಂಥಕಾರನು "ಮೇ ಮತಿಃ" (=ನನ್ನ ಭಾವನೆ) ಯೆಂದು ಒತ್ತಿ ಹೇಳಿರುವನೆಂಬುದು ಲೋಚನಕಾರರ ವಿವರಣೆ. ಅಚೇತನ ವಸ್ತುಗಳ ವರ್ಣನೆಯಲ್ಲಿ ಚಿತ್ತವೃತ್ತಿರೂಪವಾದ ರಸಾದಿಗಳ ಪ್ರಸಕ್ತಿಯಿಲ್ಲವಾದ್ದರಿಂದ, ಅಲ್ಲಿ ಮಾತ್ರ ಉಪಮಾದಿಗಳಿಗೆ ಸ್ಥಾನವೆಂಬುದು ಪೂರ್ವಪಕ್ಷ.

34 =ವಿಭಾವಾದಿರೂಪದಿಂದ ವರ್ಣಿಸುವಾಗ—ಲೋ.

ಒಪ್ಪುವುದೇ ಆದರೆ ರಸಕ್ಕೆ ಆಗರವಾಗಿರುವ ಮಹಾಕಾವ್ಯ-ರಾಶಿಯನ್ನೇ ನೀರಸ ವೆಂದು ಕರೆದಂತಾಗುತ್ತದೆ.[35] ಉದಾಹರಣೆಗೆ—

೨೨ "ತರಂಗಭ್ರೂಭಂಗಾ ಕ್ಷುಭಿತವಿಹಗಶ್ರೇಣಿರಶನಾ
ವಿಕರ್ಷನ್ತೀ ಫೇನಂ ವಸನಮಿವ ಸಂರಂಭಶಿಥಿಲಮ್ ।
ಯಥಾವಿದ್ಧಂ ಯಾತಿ ಸ್ಖಲಿತಮಭಿಸಂಧಾಯ ಬಹುಶೋ
ನದೀರೂಪೇಣೇಯಂ ಧ್ರುವಮಸಹನಾ ಸಾ ಪರಿಣತಾ* ॥"

ಅಲೆಗಳ್ ಪುರ್ವಿನ ಗಂಟು ಸಂಕ್ಷುಭಿತಪಕ್ಷಿಶ್ರೇಣಿಯೇ ಡಾಬು ಮೇಣ್
ಬಲವದ್ರೋಷವಿಚಾಲಿತಾತ್ಮವಸನಂಬೋಲಿರ್ಪ ಫೇನಾಳಿಯಂ |
ಸೆಳೆಯುತ್ತುಂ, ಬಗೆಗಾಣದಂತೆಡಹುತುಂ ತಾನೆತ್ತಲುಂ ಪೋಪ ಪೆ-
ರ್ದೊರೆಯಾ ರೂಪಮನಪ್ಪುಕಯ್ದಳಿವಳಕ್ಕುಂ ಮತ್ಕೋಪದಿಂ ಕಾಂತೆಯೇ ||

ಅಥವಾ—

೨೩ "ತನ್ವೀ ಮೇಘಜಲಾರ್ದ್ರಪಲ್ಲವತಯಾ ಧೌತಾಧರೇವಾಶ್ರುಭಿಃ
ಶೂನ್ಯೇವಾಭರಣೈಃ ಸ್ವಕಾಲವಿರಹಾದ್ವಿಶ್ರಾಂತಪುಷ್ಪೋದ್ಗಮಾ ।
ಚಿಂತಾಮೌನಮಿವಾಶ್ರಿತಾ ಮಧುಕೃತಾಂ ಶಬ್ದೈರ್ವಿನಾ ಲಕ್ಷ್ಯತೇ
ಚಂಡೀ ಮಾಮವಧೂಯ ಪಾದಪತಿತಂ ಜಾತಾನುತಾಪೇವ ಸಾ[36] ॥"*

ಕೃಶಕಾಯೆ ; ಮೇಘಜಲ ತೊಯ್ಯಿಸಿರೆ ತಳಿರುಗಳ
ಕಣ್ಣೀರಿನಿಂ ತುಟಿಯ ತೊಳೆಯುವಂತಿಹಳು ;
ಪುಷ್ಪಮಾಸವು ಕಳೆಯೆ ಪುಷ್ಪವಿರಹಿತೆಯೀಗ
ಭೂಷಣವ ಕಳೆದಿಟ್ಟ ಕಾಂತೆಯಂತಿಹಳು ;

---

35 ಎಲ್ಲಿ ರಸವುಂಟೋ ಅಲ್ಲಿ ರಸವದಲಂಕಾರವೆಂಬುದು ಪ್ರತಿವಾದಿಯ ಪಕ್ಷ. 'ರಸವದ ಲಂಕಾರ'ವಿಲ್ಲದ ಸ್ಥಳದಲ್ಲಿ ರಸವೂ ಇಲ್ಲವೆಂದಾಗುತ್ತದೆಯೆಂದು ಪ್ರತಿವಾದಿಯ ದೃಷ್ಟಿಯಿಂದ 'ನೀರಸ'ತ್ವವನ್ನು ಆರೋಪಿಸಲಾಗಿದೆ. ಧ್ವನಿಸಿದ್ಧಾಂತದ ಪ್ರಕಾರ ರಸವದಲಂಕಾರವಿಲ್ಲದ ಸ್ಥಳದಲ್ಲಿ ನೀರಸತ್ವವೇನೂ ಇಲ್ಲ, ಮುಖ್ಯ ರಸ-ಧ್ವನಿಯಿಲ್ಲದಾಗ ಮಾತ್ರ ನೀರಸತ್ವ. ಇಲ್ಲಿಯೂ ರಸ-ಧ್ವನಿಯುಂಟೇ ಉಂಟು—ಲೋ.

* ಎರಡು ಶ್ಲೋಕಗಳೂ ವಿಕ್ರಮೋರ್ವಶೀಯ ನಾಟಕದಿಂದ ಉದಾಹೃತವಾಗಿವೆ.

36 ಈ ಎರಡು ಶ್ಲೋಕಗಳೂ ವಿಕ್ರಮೋರ್ವಶೀಯ ನಾಟಕದಿಂದ ಉದಾಹೃತವಾಗಿವೆ. ನದಿ ಮತ್ತು ಲತೆಯನ್ನು ವರ್ಣಿಸುವ ಈ ಪದ್ಯಗಳು ಪ್ರಿಯಾವಿರಹದಿಂದ ಉನ್ಮತ್ತನಾದ ರಾಜನ ಮಾತುಗಳು.

ಮಧುಪಗಳ ಝೇಂಕೃತಿಯು ಇಲ್ಲದಿಹುದದರಿಂದ
ಚಿಂತೆಯಲಿ ಮೌನವನು ತಾಳಿದಂತಿಹಳು,
ಚರಣತಲದಲಿ ಮತ್ತೆ ಬಿದ್ದಿರುವ ನನ್ನನ್ನು
ಕಡೆಗಣಿಸಿ ಕೋಪದಲಿ ಕೊರಗುವಂತಿಹಳು.

ಅಥವಾ—

೨೪ ತೇಷಾಂ ಗೋಪವಧೂವಿಲಾಸಸುಹೃದಾಂ ರಾಧಾರಹಃ ಸಾಕ್ಷಿಣಾಂ
ಕ್ಷೇಮಂ ಭದ್ರ ಕಲಿಂದಶೈಲತನಯಾತೀರೇ ಲತಾವೇಶ್ಮನಾಮ್ ।
ವಿಚ್ಛಿನ್ನೇ ಸ್ಮರತಲ್ಪಕಲ್ಪನಮೃದುಚ್ಛೇದೋಪಯೋಗೇಽಧುನಾ
ತೇ ಜಾನೇ ಜರಠೀಭವನ್ತಿ ವಿಗಲನ್ನೀಲತ್ವಿಷಃ ಪಲ್ಲವಾಃ ॥[37]

ಕ್ಷೇಮವೇ ಸಜ್ಜನನೆ, ಯಮುನೆಯಾ ದಡದಲ್ಲಿ
ಗೋಪಿಯರ ನೆಚ್ಚಿನಾ ಸಖಿಯರೆನಿಪ,
ರಾಧಾರಹಃಕ್ರೀಡೆಗೆಲ್ಲ ಸಾಕ್ಷಿಗಳಾದ,
ಆಂತೆಸೆವ ಬಳ್ಳಿವನೆಗಡಣಕ್ಕೆಲ್ಲ?
ಸ್ಮರತಲ್ಪಕಲ್ಪನಕೆ ಮೃದುವಾಗಿ ಕೊಯ್ಯುವಾ
ಉಪಯೋಗ ತಪ್ಪಿರಲು ಪಂದಳಿರಿಗೆ,
ಮುದಿಯಾಗಿ, ಹಸಿರೆಲ್ಲ ಹಾಳಾಗಿ ಮುರುಟಿಹುದು
ಎಂದು ನಾಂ ನಂಬುವೆನು ಮನಸಿನಲ್ಲೆ.

ಇವೇ ಮೊದಲಾದ ಲಕ್ಷ್ಯಗಳಲ್ಲಿ ಅಚೇತನಗಳೇ ವರ್ಣನಾ ವಿಷಯವಾಗಿದ್ದರೂ, ಚೇತನವಸ್ತು ವೃತ್ತಾಂತದ ಯೋಜನೆಯಿದ್ದೇ ಇರುವುದು. ಹೀಗೆ ಚೇತನವಸ್ತುವೃತ್ತಾಂತದ ಯೋಜನೆಯಿದ್ದೆಡೆಯಲ್ಲಿ 'ರಸವದಲಂಕಾರ'ವು ಉಂಟೆಂದೇ ಒಪ್ಪುತ್ತೇವೆಂದು ಒಂದು ವೇಳೆ ವಾದಿಸಬಹುದು. ಹಾಗೆಂದರೆ ಉಪಮಾದಿಗಳಿಗೆ ಸ್ವತಂತ್ರವಾದ ಕ್ಷೇತ್ರವೇ ಉಳಿಯುವುದಿಲ್ಲ ಅಥವಾ ಉಳಿದರೂ ಅತ್ಯಂತ ಸಣ್ಣದಾದ ಕ್ಷೇತ್ರ ಮಾತ್ರ ಉಳಿಯುತ್ತದೆ. ಏಕೆಂದರೆ ಯಾವುದಾದರೂ ಒಂದು ಪ್ರಕಾರದಿಂದ,

37 ಬೃಂದಾವನದಿಂದ ಬಂದ ಗೋಪನನ್ನು ಕಂಡು, ದೂರದ ದ್ವಾರಕೆಯಲ್ಲಿರುವ ಕೃಷ್ಣನು ಹೇಳುವ ಮಾತಿದು. ಗೋಪನನ್ನು ಕಂಡೊಡನೆ ಯಮುನಾ ತೀರದ ಸ್ಮೃತಿಯುಕ್ಕಿ, ತನ್ನ ರಾಧಾ ವಿರಹದ ಔತ್ಸುಕ್ಯ ತುಂಬಿಬರುತ್ತದೆ ಏಕೆಂದರೆ ಪೂರ್ವದಲ್ಲಿ ತನ್ನ ರತಿಭಾವಕ್ಕೆ ಯಮುನಾತೀರದ ಲತಾಗೃಹಗಳು ಉದ್ದೀಪಕ ವಿಭಾವಗಳಾಗಿಯೂ, ಗೋಪಿಯರು ಮತ್ತು ರಾಧೆ ಆಲಂಬನ ವಿಭಾವಗಳಾಗಿಯೂ ಇದ್ದರು. ಅವುಗಳ ಸ್ಮರಣೆ ಕೂಡ ಈಗ ಅವನನ್ನು ಮತ್ತೆ ಪರ್ಯುತ್ಸುಕನನ್ನಾಗಿ ಮಾಡುತ್ತದೆ— ಲೋ.

ಹಯಕಂಠನಲಿ ನಿಂದ ಸದ್ಗುಣಗಳೆಲ್ಲವನು
ಪೇಳಲಾಪನದಾರು ಸಾಗರವನೆ ।
ಒಂದೊಂದು ಕೊಡವಾಗಿ ನೀರೆಲ್ಲ ಬಿಡದಳೆದು
ಅದರಳತೆಯಿನಿತೆಂದು ನಿರ್ಧರಿಪನೋ ॥

ಇಲ್ಲಿ ವಾಚ್ಯವಾದ ಅತಿಶಯೋಕ್ತಿಯಿಂದ, ಹಯಗ್ರೀವನ ಗುಣಗಳು ಅವರ್ಣನೀಯವೆಂದು ಪ್ರತಿಪಾದಿಸುವ, ಮತ್ತು ಅವನ ಅಸಾಧಾರಣವಾದ ವೈಶಿಷ್ಟ್ಯವನ್ನು ಸೂಚಿಸುವ, ಆಕ್ಷೇಪಾಲಂಕಾರವು ಧ್ವನಿತವಾಗುತ್ತದೆ.

ಅರ್ಥಾಂತರನ್ಯಾಸ - ಧ್ವನಿಯು ಶಬ್ದಶಕ್ತಿಮೂಲ - ಅನುರಣನರೂಪ-ವ್ಯಂಗ್ಯ ಮತ್ತು ಅರ್ಥಶಕ್ತಿಮೂಲ-ಅನುರಣನರೂಪ-ವ್ಯಂಗ್ಯ—ಈ ಎರಡು ಪ್ರಕಾರಗಳಲ್ಲಿಯೂ ಬರುತ್ತದೆ. ಮೊದಲನೆಯದಕ್ಕೆ ಉದಾಹರಣೆ :—

೬೨ ದೆಇವ್ವಾಐತ್ತಮ್ಮಿ ಫಲೇ ಕಿಂ ಕೀರಇ ಏತ್ತಿಅಂ ಪುಣೋ ಭಣಿಮೋ ।
ಕಂಕಿಲ್ಲಪಲ್ಲವಾಃ ಪಲ್ಲವಾಣಿ ಅಣ್ಣಾಣಿ ಣ ಸರಿಚ್ಛಾ ॥

ಫಲವು ದೈವಾಯತ್ತ ! ನಾವು ಮಾಡುವುದೇನು ? ।
ಆದರೂ ಪೇಳುವೆವು ಇನಿತೊಂದನು ।
ಕೆಂಪಸುಗೆ ತಳಿರುಗಳು ಮಿಕ್ಕೆಲ್ಲ ತಳಿರ್ಗಳಿಗೆ
ತಾವೆಂದಿಗೂ ಸದೃಶವೆಂದೆನಿಸವು ॥

ಇಲ್ಲಿ 'ಫಲ'143ವೆಂಬ ಪದದಲ್ಲಿ ಅರ್ಥಾಂತರನ್ಯಾಸಾಲಂಕಾರದ ಧ್ವನಿಯಿರುವುದರಿಂದ ಒಟ್ಟು ವಾಕ್ಯವು ಬೇರೊಂದನ್ನು (=ಅಪ್ರಸ್ತುತಪ್ರಶಂಸೆಯನ್ನು) ಬೋಧಿಸುತ್ತಿದ್ದರೂ ಪರಸ್ಪರ ವಿರೋಧವೇನೂ ಬರುವುದಿಲ್ಲ.

ಎರಡನೆಯದಕ್ಕೆ ಉದಾಹರಣೆ :—

೬೩ ಹಿಅಅಟ್ಠಾವಿಅಮಣ್ಣುಂ ಓರುಣ್ಣಮುಹಂ ಹಿ ಮಂ ಪಸಾಅನ್ತ ।
ಅವರದ್ಧಸ್ಸ ವಿ ಣ ಹು ದೇ ವಹುಜಾಣಅ ರೋಸಿಉಂ ಸಕ್ಕಮ್ ॥

ಮುಳಿಸನೆಲ್ಲವು ನುಂಗಿ ಮನದಲೆ ಮುಖದಿ ರೋಷವ ತೋರದೆ
ನಾನು ಸುಮ್ಮನೆ ಇರುತಲಿದ್ದರು ; ಅನುನಯವ ನೀನೊರೆಯುತೆ ।
ನಿಜದೊಳಪರಾಧವನೆ ಗೈದಿಹೆಯಾದರೂ ಕಡುಜಾಣನೆ,
ನಿನ್ನ ಕೋಪಿಸಲೆನಗೆ ಹೇಗೂ ಶಕ್ಯವಿಲ್ಲವು ತಾನಹಾ ! ॥

---

143 ಹಣ್ಣು ಮತ್ತು ಕಾರ್ಯಸಿದ್ಧಿ.

ಇಲ್ಲಿ ವ್ಯಂಗ್ಯವಾಗಿರುವ 'ದೋಷಿಯಾದರೂ ಜಾಣನ ಮೇಲೆ ಕೋಪಿಸುವುದು ಅಶಕ್ಯ' ಎಂಬ ಸಾಮಾನ್ಯವಾಕ್ಯವು ಪ್ರಕೃತಕ್ಕೆ ಸಂಬಂಧಿಸಿದ ವಿಶೇಷವಾಕ್ಯವನ್ನು ಧ್ವನಿಯ ಮೂಲಕ ಸಮರ್ಥಿಸುತ್ತದೆ.

ಹೀಗೆಯೇ ವ್ಯತಿರೇಕಾಲಂಕಾರ-ಧ್ವನಿಯೂ ಎರಡು ವಿಧ. ಮೊದಲನೆಯದಕ್ಕೆ ಉದಾಹರಣೆಯನ್ನು ಹಿಂದೆಯೇ ಕೊಟ್ಟಿದೆ.[144] ಎರಡನೆಯದಕ್ಕೆ ಉದಾಹರಣೆ :—

೬೪ ಜಾಏಜ್ಜ ವಣುದ್ದೇಸೇ ಖುಜ್ಜ ವ್ವಿಅ ಪಾಅವೋ ಗಡಿಅವತ್ತೋ ।
ಮಾ ಮಾಣುಸಮ್ಮಿ ಲೋಏ ತಾಏಕ್ಕರಸೋ ದರಿದ್ದೋ ಅ ॥

ಕಾಡಿನಲಿ ಬೋಳಾದ ಕೀಳಾದ ಮರವಾಗಿ
ಪುಟ್ಟಿದರು ಪುಟ್ಟುವೆನು ವ್ಯಥೆಯಿಲ್ಲದೆ !
ತ್ಯಾಗಬುದ್ಧಿಯ ಜತೆಗೆ ದಾರಿದ್ರ್ಯ ನೇರಿರುವ
ಮನುಜಜನ್ಮವದೆನಗೆ ಬೇಡವೆಂದೂ ॥

ಇಲ್ಲಿ ತ್ಯಾಗಶೀಲನೂ ದರಿದ್ರನೂ ಆದವನ ಜನ್ಮವನ್ನು ತೆಗಳುವುದೂ, ಎಲೆಯಿರದೆ ಬೋಳಾದ ಕುರುಚಲುಗಿಡದ ಜನ್ಮವನ್ನು ಹೊಗಳುವುದೂ, ನೇರವಾಗಿ ಶಬ್ದಗಳಿಂದ ವಾಚ್ಯವಾಗುವ ಅರ್ಥ. ಆ ಗಿಡಕ್ಕೂ ಮನುಷ್ಯನಿಗೂ ಒಂದು ಉಪಮಾನೋಪಮೇಯ ಭಾವವು ತೋರುವುದರ ಮೂಲಕ ಉಪಮಾನವು ಉಪಮೇಯಕ್ಕಿಂತಲೂ ಉತ್ತಮ ಎಂಬ 'ವ್ಯತಿರೇಕ'ವು ಧ್ವನಿತವಾಗುತ್ತದೆ. ಅಂತಹ ಮನುಷ್ಯನು ಅತ್ಯಂತ ಶೋಚ್ಯನು ಎಂಬುದೇ ತಾತ್ಪರ್ಯ.

ಉತ್ಪ್ರೇಕ್ಷಾಲಂಕಾರ-ಧ್ವನಿಗೆ ಉದಾಹರಣೆ :—

೬೫ ಚನ್ದನಾಸಕ್ತಭುಜಗನಿಃಶ್ವಾಸಾನಿಲಮೂರ್ಛಿತಃ ।
ಮೂರ್ಛಯತ್ಯೇಷ ಪಥಿಕಾನ್ ಮಧೌ ಮಲಯಮಾರುತಃ ॥

ಚಂದನದ ತರುಗಳೊಳಗಾಶ್ರಯಿಸಿ ಪಡೆದಿರುವ
ಸರ್ಪಗಳ ನಿಶ್ವಾಸದಿಂದ ಮೂರ್ಛಿತನಾದ ।
ಮಲಯಮಾರುತನಿವನು ಪಥಿಕರೆಲ್ಲರನಿಂದು
ಮೂರ್ಛೆವೋಗಿಸುತಿಹನು ಮಧುಮಾಸ ಬಂದಿರಲು ॥

ಇದು ವಸಂತಕಾಲದ ವರ್ಣನೆಯಾದುದರಿಂದ ಪಥಿಕರು ಮೂರ್ಛೆಹೋಗುವುದಕ್ಕೆ ಅವರ ಕಾಮವು ಉದ್ದೀಪಿತವಾಗುವುದೇ ನಿಜವಾದ ಕಾರಣ. ಆದನ್ನೇ

---

144 ಪುಟ ೯೬ನ್ನು ನೋಡಿ, (ಪದ್ಯ ೪೮) ಮತ್ತು ಪುಟ ೮೩-ಪದ್ಯ ೩೧.

ಕವಿಯು ಉತ್ಪ್ರೇಕ್ಷೆಮಾಡಿ ಚಂದನಾಸಕ್ತವಾದ ಹಾವುಗಳ ವಿಷವಾತವು ಮಲಯ ಮಾರುತದಲ್ಲಿ ಸೇರಿಕೊಂಡುದು ಕಾರಣವೆಂದು ವರ್ಣಿಸಿದ್ದಾನೆ. ವಾಚ್ಯವಾಗಿ ಉತ್ಪ್ರೇಕ್ಷೆಯನ್ನು ('ಇವ' ಮೊದಲಾದ ಶಬ್ದಗಳಿಂದ)ಹೇಳದಿರುವುದರಿಂದ ಅದನ್ನು ವಾಕ್ಯಾರ್ಥದ ಸಾಮರ್ಥ್ಯದಿಂದ ಗಮ್ಯವಾಗುವ ಅನುರಣನರೂಪಧ್ವನಿಯೆಂದೇ ಒಪ್ಪಬೇಕು. ಅಲ್ಲದೆ, ಇಂತಹ ಸ್ಥಳಗಳಲ್ಲಿ 'ಇವ' ಮೊದಲಾದ ಉತ್ಪ್ರೇಕ್ಷಾವಾಚಕ ಶಬ್ದಗಳಿಲ್ಲದಿರುವಾಗ ಉತ್ಪ್ರೇಕ್ಷೆಯ ಸಂಬಂಧವೇ ಬರುವಂತಿಲ್ಲವೆನ್ನುವುದು ಸರಿಯಲ್ಲ; ಏಕೆಂದರೆ ಇಲ್ಲಿ ಉತ್ಪ್ರೇಕ್ಷೆಗೆ ಸರಿಯಾದ 'ಗಮಕ'ಗಳಿವೆ. ಹೀಗೆಯೇ ವಾಚಕ ಶಬ್ದಗಳಿಲ್ಲದಿದ್ದರೂ ಉತ್ಪ್ರೇಕ್ಷೆಯ ತಿಳಿವಳಿಕೆಯು ನಮಗೆ ಬರುವಂತಹ ಎಷ್ಟೋ ಉದಾಹರಣೆಗಳು ಸಿಕ್ಕುತ್ತವೆ. ಹೇಗೆಂದರೆ—

೬೬ ಈಸಾಕಲುಸಸ್ಸ ವಿ ತುಹ ಮುಹಸ್ಸ ಣಂ ಏಸ ಪುಣ್ಣಿಮಾಚನ್ದೋ ।
ಅಜ್ಜ ಸರಿಸತ್ತಣಂ ಪಾವಿಊಣ ಅಙ್ಗೇ ಚ್ಚಿಅ ಣ ಮಾಇ ॥

ಕೋಪಕಲುಷಿತವಾದ ನಿನ್ನ ಮುಖಸಾಮ್ಯವದು
ದೊರೆತಿರಲು ಕೊನೆಗೊಮ್ಮೆ ಹುಣ್ಣಿಮೆಯಲಿ ।
ಅನಿತರಿಂದಲೆ ನೋಡು ತನ್ನಂಗದಳತೆಯನು
ಮೀರಿಹನು ಹಿಡಿಸದೆಯೆ ಚಂದ್ರನಿಂದು ॥

ಅಥವಾ—

೬೭ ತ್ರಾಸಾಕುಲಃ ಪರಿಪತನ್ ಪರಿತೋ ನಿಕೇತಾನ್
ಪುಂಭಿರ್ನ ಕೈಶ್ಚಿದಪಿ ಧನ್ವಿಭಿರನ್ವಬಂಧಿ ।
ತಸ್ಥೌ ತಥಾಪಿ ನ ಮೃಗಃ ಕ್ವಚಿದಂಗನಾಭಿ-
ರಾಕರ್ಣಪೂರ್ಣನಯನೇಷು ಹತೇಕ್ಷಣಶ್ರೀಃ ॥[145]

ಮನೆಗಳೆಡೆಯೊಳಗೆ ಭಯದಿಂದ ಪರಿಯುತಿಹ ಹರಿ-
ಣನಂ ಬೆಂಬಳಿವಿಡಿದು ಬಿಲ್ಲುಗಳ ಕೈಕೊಂಡ
ಜನರು ಯಾರೂ ಅಲ್ಲಿ ಬರದಿದ್ದರೂ ತಾನು ಪರಿವುದನು ನಿಲಿಸಲಿಲ್ಲ ।
ತನಗಿದ್ದ ಕಣ್ಣ ಚೆಲುವನ್ನೆಲ್ಲ ಸುಂದರಾಂ-
ಗನೆಯರಂತು ತಮ್ಮಯ ಕಿವಿವರೆಗೆ ತಾಗಿ ನೀ-
ಳ್ದ ನಯನಂಗಳ ಬಾಣಘಾತದಿಂ ತಳುವದೆಯೆ ಗಾಸಿಗೊಳಿಸುತ್ತಲಿರಲು ॥

ಈ ಶಬ್ದಗಳಿಂದ ಉತ್ಪ್ರೇಕ್ಷೆಗೆ ಪೋಷಕವಾದ ಅರ್ಥವೇ ಧ್ವನಿತವಾಗಿದೆಯೆಂದು ನಾವು ಹೇಳುವುದಕ್ಕೆ ಪ್ರಸಿದ್ಧವಾದ ಕವಿಸಂಪ್ರದಾಯವೇ ಪ್ರಮಾಣ.

---

145 ಪದ್ಯ ಮಾಘನ ಶಿಶುಪಾಲವಧದಿಂದ ಉದಾಹೃತ.

ಶ್ಲೇಷಾಲಂಕಾರ-ಧ್ವನಿಗೆ ಉದಾಹರಣೆ:—

೬ಅ ರಮ್ಯಾ ಇತಿ ಪ್ರಾಪ್ತವತೀಃ ಪತಾಕಾಃ
ರಾಗಂ ವಿವಿಕ್ತಾ ಇತಿ ವರ್ಧಯನ್ತೀಃ ।
ಯಸ್ಯಾಮಸೇವನ್ತ ನಮದ್ವಲೀಕಾಃ
ಸಮಂ ವಧೂಭಿರ್ವಲಭೀರ್ಯುವಾನಃ ॥

ರಮಣೀಯತಾಗುಣಪತಾಕೆ[146]ಯನೆ ಪಡೆಯುತ್ತ,
ವಿವಿಕ್ತತಾ[147]ಕಾರಣದೆ ರಾಗ[148]ವನು ಪೆರ್ಚಿಸುತ |
ಪರಿನಮ್ರವಲಿ[149]ಗಳಿಂ ಸೊಗಯಿಸುವ ವಲಭಿಗಳ
ವಧುಗಳೊಂದಿಗೆ ಸೇವಿಸಿದರಲ್ಲಿ ಯುವಜನರು ||

ಇಲ್ಲಿ 'ವಧುಗಳೊಂದಿಗೆ ವಲಭಿಗಳನ್ನು ಸೇವಿಸಿದರು' ಎಂಬ ವಾಕ್ಯಾರ್ಥದ ಪ್ರತೀತಿಯ ಅನಂತರ 'ವಧುಗಳಂತೆಯೇ ವಲಭಿಗಳಿವೆ' ಎಂಬ ಶ್ಲಿಷ್ಟಾರ್ಥದ ಪ್ರತೀತಿಯು ಶಬ್ದತಃ ಮುಖ್ಯವಾಗಿ ತೋರದಿದ್ದರೂ, ಅರ್ಥ-ಸಾಮರ್ಥ್ಯದಿಂದ ಮುಖ್ಯವಾಗಿಯೇ ಧ್ವನಿತವಾಗುತ್ತದೆ.

ಯಥಾಸಂಖ್ಯಾಲಂಕಾರ-ಧ್ವನಿಗೆ ಉದಾಹರಣೆ :—

೬೯ ಅಂಕುರಿತಃ ಪಲ್ಲವಿತಃ ಕೋರಕಿತಃ ಪುಷ್ಪಿತಶ್ಚ ಸಹಕಾರಃ ॥
ಅಂಕುರಿತಃ ಪಲ್ಲವಿತಃ ಕೋರಕಿತಃ ಪುಷ್ಪಿತಶ್ಚ ಹೃದಿ ಮದನಃ ॥

ಅಂಕುರಿಸಿ ಪಲ್ಲವಿಸಿ ಕೋರಕಿಸಿ ಕುಸುಮಿಸಲು
ಸಹಕಾರತರುನಿವಹವಲ್ಲಿ ಕ್ರಮದಿ |
ಅಂಕುರಿಸಿ ಪಲ್ಲವಿಸಿ ಕೋರಕಿಸಿ ಕುಸುಮಿಸಿದ-
ನೆಲ್ಲ ಹೃದಯದಲಂದು ರತಿಕಾಂತನು ||

ಇಲ್ಲಿ 'ಮನ್ಮಥ' ಮತ್ತು 'ಸಹಕಾರತರು'—ಎರಡೂ ಪ್ರಸ್ತುತವಾದುದರಿಂದ 'ತುಲ್ಯಯೋಗಿತಾ' ಮತ್ತು 'ಸಮುಚ್ಚಯ' ಎಂಬಲಂಕಾರಗಳು ವಾಚ್ಯವಾಗಿವೆ. ಆದರೆ ಈ ಅಲಂಕಾರಗಳ ಸೊಗಸಿಗಿಂತಲೂ ಹೆಚ್ಚಾಗಿ, ವಿಶೇಷಣಗಳನ್ನು ಸಹಕಾರ ತರುವಿಗೆ ಕೊಟ್ಟ ಕ್ರಮದಲ್ಲೇ ಮನ್ಮಥನಿಗೂ ಕೊಟ್ಟಿರುವುದರಿಂದ ಅನುರಣನರೂಪ

---

146 ಧ್ವಜ ಅಥವಾ ಪ್ರಸಿದ್ಧಿ.

147 ನಿರ್ಜನತೆ ಅಥವಾ ಅಂಗಸೌಷ್ಠವ.

148 ಕೆಂಪು ಅಥವಾ ಪ್ರೀತಿ.

149 ಸೂರುಕಟ್ಟು ಅಥವಾ ಸ್ತ್ರೀಯರ ತ್ರಿವಲಿಗಳು.

ವಾಗಿ ಬರುವ ಸೊಗಸು ಮೇಲಾದುದು. ಹೀಗೆಯೇ ಉಳಿದ ಅಲಂಕಾರಧ್ವನಿಗಳಿಗೂ ಯಥೋಚಿತವಾಗಿ ಉದಾಹರಣೆಗಳನ್ನು ವಾಚಕರೇ ಊಹಿಸಿಕೊಳ್ಳಬೇಕು [150]

ಹೀಗೆ 'ಅಲಂಕಾರ-ಧ್ವನಿ'ಯ ಮಾರ್ಗವನ್ನು ಪ್ರತಿಪಾದಿಸಿಯಾದಮೇಲೆ, ಈಗ ಅದರ ಪ್ರಯೋಜನವನ್ನು ಪ್ರಶಂಸೆಮಾಡಲು ಮುಂದಿನ ಕಾರಿಕೆಯನ್ನು ಹೇಳಿದೆ.

### ಕಾರಿಕೆ

ಶರೀರೀಕರಣಂ ಯೇಷಾಂ ವಾಚ್ಯತ್ವೇ ನ ವ್ಯವಸ್ಥಿತಮ್ ।
ತೇಽಲಂಕಾರಾಃ ಪರಾಂ ಛಾಯಾಂ ಯಾನ್ತಿ ಧ್ವನ್ಯಂಗತಾಂ ಗತಾಃ ॥ ೨೮ ॥

ಯಾವ ಅಲಂಕಾರಗಳಿಗೆ ಅವು ವಾಚ್ಯವೆನಿಸಿದಾಗ (ಕಾವ್ಯಾರ್ಥಕ್ಕೆ) ಸುಂದರವಾದ ಶರೀರಾಂಶತ್ವವು ಕೂಡ ವ್ಯವಸ್ಥಿತವಲ್ಲವೋ, ಅವೇ ಅಲಂಕಾರಗಳೇ ಧ್ವನಿಯ ಅಂಗಗಳಾದಾಗ ನೂತನವಾದ ಒಂದು ಸೌಂದರ್ಯಾತಿಶಯವನ್ನು[151] ಹೊಂದುತ್ತವೆ.

### ವೃತ್ತಿ

ಧ್ವನಿಗೆ ಅಂಗತ್ವವು ಎರಡು ವಿಧಗಳಿಂದಾಗಬಹುದು :—(೧) ವ್ಯಂಜಕತ್ವದಿಂದ, ಇಲ್ಲವೆ (೨) ವ್ಯಂಗ್ಯತ್ವದಿಂದ. ಅದು ಇಲ್ಲಿ ಸಂದರ್ಭೋಚಿತವಾಗಿ 'ವ್ಯಂಗ್ಯತ್ವದಿಂದ' ಎಂದು ತಿಳಿಯಬೇಕು. ಅಲಂಕಾರಗಳಿಗೆ ವ್ಯಂಗ್ಯತ್ವವಿರುವುದರ ಜತೆಗೆ ಅದರಲ್ಲಿಯೇ ಪ್ರಾಧಾನ್ಯವಿವಕ್ಷೆಯೂ ಇರುವಾಗ ಮಾತ್ರ 'ಧ್ವನಿಯಲ್ಲಿ ಅವು ಅಂತರ್ಗತವಾಗುತ್ತವೆ. ಇಲ್ಲದಿದ್ದರೆ ಅವು 'ಗುಣೀಭೂತವ್ಯಂಗ್ಯ'ದಲ್ಲಿ ಸೇರುವುವೆಂದು

---

150 'ದೇವದತ್ತನು ದಪ್ಪವಾಗಿದ್ದಾನೆ, ಹಗಲು ಉಣ್ಣುವುದಿಲ್ಲ' ಎಂಬ ಅರ್ಥಾಪತ್ತಿಯಲ್ಲಿ ಅನುರಣನಧ್ವನಿಯುಂಟೆ? ಎಂದು ಕೇಳಬಹುದು. ಅಲ್ಲಿ ಅಭಿಧೆಯೇ ಸ್ವಾರ್ಥವಿಶ್ರಾಂತವಲ್ಲ; ಅಭಿಧೆಯು ಉಪಪನ್ನವಾಗಿದ್ದರೂ, ಮುಂದೆ ಅರ್ಥಾಂತರ ಪ್ರತೀತವಾದಾಗ ಮಾತ್ರ ಅನುರಣನಧ್ವನಿ—ಲೋ.

151 ಎಂದರೆ ಆತ್ಮರೂಪತ್ವವನ್ನು ಎಂದರ್ಥ. ಸುಂದರಿಯು ಹಣೆಗಿಟ್ಟುಕೊಳ್ಳುವ ಕುಂಕುಮದ ಬೊಟ್ಟು ಅವಳ ಶರೀರವೇ ಎನಿಸುವಂತಿದ್ದರೂ, ಶರೀರಕ್ಕಿಂತ ಬೇರೆಯಾಗಿ ತೋರುತ್ತದೆ. ಸುಕವಿಯು ಬಹಳ ಚಾತುರ್ಯದಿಂದ ಒಪ್ಪುವಂತಹ ಅಲಂಕಾರಗಳನ್ನೇ ಉಪಯೋಗಿಸಿದರೂ ಅದು ಕಾವ್ಯದ ಶರೀರದ ಒಂದು ಭಾಗವೆನಿಸುವುದೇ ದುಷ್ಕರ. ಎಂದಮೇಲೆ ಇನ್ನು ಆತ್ಮವೆನಿಸುವದೆಂತು? ಆದರೆ ವ್ಯಂಗ್ಯವು ಅಪ್ರಧಾನವಾಗಿದ್ದರೂ ಕೂಡ ಅಲಂಕಾರಗಳಿಗೆ ವಾಚ್ಯದಶೆಯಲ್ಲಿಲ್ಲದ ಚಮತ್ಕಾರವನ್ನೀಯುವುದು. ಹುಡುಗರ ಆಟದಲ್ಲಿಯಾದರೂ 'ರಾಜ'ನೆನಿಸುವವನಿಗೆ ಗೌರವ ಹೇಗೆ ಹೆಚ್ಚೋ ಹಾಗೆ—ಲೋ

ಮುಂದೆ ವಿವರಿಸಲಾಗುತ್ತದೆ. ವ್ಯಂಗ್ಯತ್ವವಿದ್ದರೂ ಸಹ ಅಲಂಕಾರಗಳೇ ಪ್ರಧಾನವೆನಿಸುವೆಡೆಯಲ್ಲಿಯೂ ಅಷ್ಟೆ (='ಗುಣೀಭೂತವ್ಯಂಗ್ಯ'ವೇ).

ಅಲಂಕಾರಗಳಿಗೆ (ಧ್ವನಿಪ್ರಪಂಚದಲ್ಲಿ) ಇರುವ ನೆಲೆಗಳು ಎರಡು:—(೧) 'ವಸ್ತು'ಮಾತ್ರದಿಂದ ವ್ಯಂಗ್ಯವಾಗುವೆಡೆಗಳು ಮತ್ತು (೨) 'ಅಲಂಕಾರ'ದಿಂದ ವ್ಯಂಗ್ಯವಾಗುವೆಡೆಗಳು. ಅವುಗಳಲ್ಲಿ—

ಕಾರಿಕೆ

ವ್ಯಜ್ಯನ್ತೇ ವಸ್ತುಮಾತ್ರೇಣ ಯದಾಲಂಕೃತಯಸ್ತದಾ ।
ಧ್ರುವಂ ಧ್ವನ್ಯಂಗತಾ ತಾಸಾಂ

ಯಾವಾಗ ಅಲಂಕಾರಗಳು ವಸ್ತುಮಾತ್ರದಿಂದಲೇ ವ್ಯಂಗ್ಯವಾಗಿರುವುವೋ ಆಗ ಅವು ಸರ್ವಥಾ ಧ್ವನಿಯ ಅಂಗಗಳೇ.

ವೃತ್ತಿ

ಅದಕ್ಕೆ ಕಾರಣವೇನೆಂದರೆ—

ಕಾರಿಕೆಯ ಕೊನೆಯ ಪಾದ

ಕಾವ್ಯವೃತ್ತಿಸ್ತದಾಶ್ರಯಾ ॥ ೨೯ ॥

ಕಾವ್ಯದ ಪ್ರವೃತ್ತಿಯೇ ಅದನ್ನು ಆಶ್ರಯಿಸಿದೆ.

ವೃತ್ತಿ

ಇಂತಹ ವ್ಯಂಗ್ಯಾಲಂಕಾರಗಳನ್ನು ಅಳವಡಿಸಿಕೊಳ್ಳಬೇಕೆಂದೇ ಕಾವ್ಯವು ಹೊರಡುವುದು. ಇಲ್ಲದಿದ್ದರೆ ಅದು ಸುಮ್ಮನೆ ವಾಕ್ಯವಾಗುತ್ತದೆ. ಆ ಅಲಂಕಾರಗಳಿಂದಲೇ—

ಕಾರಿಕೆ

ಅಲಂಕಾರಾನ್ತರವ್ಯಂಗ್ಯಭಾವೇ

ಬೇರೆ ಅಲಂಕಾರಗಳು ವ್ಯಂಗ್ಯವಾಗುತ್ತಿದ್ದರೆ

ವೃತ್ತಿ

ತಿರುಗಿಯೂ

ಕಾರಿಕೆ

ಧ್ವನ್ಯಂಗತಾ ಭವೇತ್ ।
ಚಾರುತ್ವೋತ್ಕರ್ಷತೋ ವ್ಯಂಗ್ಯಪ್ರಾಧಾನ್ಯಂ ಯದಿ ಲಕ್ಷ್ಯತೇ ॥ ೩೦ ॥

ರಮಣೀಯತಾತಿಶಯದ ದೃಷ್ಟಿಯಿಂದ ವ್ಯಂಗ್ಯವೇ ಪ್ರಧಾನವಾಗಿ ಕಾಣು ತ್ತಿದ್ದರೆ, ಧ್ವನಿಯ ಅಂಗತ್ವವು ಬರುತ್ತದೆ.

ವೃತ್ತಿ

ವಾಚ್ಯ ವ್ಯಂಗ್ಯಗಳಲ್ಲಿ ಪ್ರಾಧಾನ್ಯವು ಯಾವುದಕ್ಕೆ ಎಂಬ ವಿಷಯವು ಸೌಂದರ್ಯಾತಿಶಯವನ್ನೇ ಅವಲಂಬಿಸಿರುವುದೆಂದು ಹಿಂದೆಯೇ ಹೇಳಲಾಯಿತು. ವಸ್ತುಮಾತ್ರದಿಂದ ವ್ಯಂಗ್ಯವಾದ ಅಲಂಕಾರಗಳಿಗೂ ಈಗಾಗಲೇ ಕೊಟ್ಟ ಉದಾ ಹರಣೆಗಳಿಂದಲೇ ವಿಷಯವನ್ನಾರಿಸಿಕೊಳ್ಳಬಹುದು. ಹೀಗೆ ವಸ್ತುಮಾತ್ರದಿಂದಾಗಲಿ, ಇಲ್ಲವೆ ವಿಶಿಷ್ಟಾಲಂಕಾರ ಸಹಿತವಾದ ವಸ್ತುವಿನಿಂದಾಗಲೀ, ಬೇರೊಂದು ವಸ್ತುವೋ ಇಲ್ಲವೇ ಅಲಂಕಾರವೋ ವ್ಯಂಗ್ಯವಾಗಿದ್ದು, ಸೌಂದರ್ಯಾತಿಶಯವು ಮುಖ್ಯವಾಗಿ ಆ ವ್ಯಂಗ್ಯಾಂಶದಲ್ಲಿಯೇ ಇರುವುದಾದರೆ ಆಗ ಅರ್ಥಶಕ್ತ್ಯುಮೂಲ-ಅನುರಣನರೂಪ-ವ್ಯಂಗ್ಯವೆಂಬ ಧ್ವನಿಗೆ ಅದು ಉದಾಹರಣೆಯೆಂದು ತಿಳಿದುಕೊಳ್ಳಬೇಕು.

ಹೀಗೆ ಧ್ವನಿಯ ಪ್ರಭೇದಗಳನ್ನು ಪ್ರತಿಪಾದಿಸಿ, ಈಗ ಧ್ವನಿಯಲ್ಲದಿದ್ದರೂ ಧ್ವನಿಯೆಂಬ ಭ್ರಮೆಗೆ ಎಲ್ಲಿ ಅವಕಾಶವುಂಟೋ ಅಂತಹ ಕಡೆಗಳಲ್ಲಿ ದಾರಿತಪ್ಪದಂತೆ ಮಾಡಲು ಮುಂದಿನ ಕಾರಿಕೆಯನ್ನು ಹೇಳಿದ್ದಾನೆ—

ಕಾರಿಕೆ

ಯತ್ರ ಪ್ರತೀಯಮಾನೋಽರ್ಥಃ ಪ್ರಕ್ಲಿಷ್ಟತ್ವೇನ ಭಾಸತೇ ।
ವಾಚ್ಯಸ್ಯಾಂಗತಯಾ ವಾಪಿ ನಾಸ್ಯಾಸೌ ಗೋಚರೋ ಧ್ವನೇಃ ॥ ೩೧ ॥

ಎಲ್ಲಿ ವ್ಯಂಗ್ಯಾರ್ಥವು ಕ್ಲಿಷ್ಟಕಲ್ಪನೆಯಿಂದ ಮಾತ್ರ ಕಾಣುವುದೋ, ಅಥವಾ ವಾಚ್ಯಾರ್ಥಕ್ಕೆ ಅಂಗವಾಗಿ ಬರುವುದೋ, ಅದು ಧ್ವನಿಯಲ್ಲಿ ಸೇರುವುದಿಲ್ಲ.

ವೃತ್ತಿ

ವ್ಯಂಗ್ಯಾರ್ಥವು ಎರಡು ವಿಧ—ಸ್ಫುಟ ಮತ್ತು ಅಸ್ಫುಟ, ಎಂದು. ಅದರಲ್ಲಿ ಶಬ್ದಶಕ್ತಿಯಿಂದಾಗಲಿ ಅಥವಾ ಅರ್ಥಶಕ್ತಿಯಿಂದಾಗಲಿ, ಸ್ಫುಟವಾಗಿ ಯಾವುದು ಭಾಸವಾಗುವುದೋ, ಅದು ಮಾತ್ರ ಧ್ವನಿಯಲ್ಲಿ ಸೇರುವುದು ; ಅಸ್ಫುಟವಾದುದು ಸೇರುವುದಿಲ್ಲ. ಸ್ಫುಟವಾಗಿದ್ದರೂ ಸಹ ವ್ಯಂಗ್ಯಾರ್ಥವು ವಾಚ್ಯಾರ್ಥಕ್ಕೆ ಅಂಗವಾಗುವು ದಾದರೆ, ಆಗ ಅದೂ ಈ ಅನುರಣನರೂಪ-ವ್ಯಂಗ್ಯವಾದ ಧ್ವನಿಯಲ್ಲಿ ಸೇರುವುದಿಲ್ಲ. ಉದಾಹರಣೆ :—

೭೦ ಕಮಲಾಅರಾ ಣ ಮಲಿಆ ಹಂಸಾ ಉಡ್ಡಾವಿಆ ಣ ಅ ಪಿಉಚ್ಛಾ ।
ಕೇಣ ವಿ ಗಾಮತಡಾಏ ಅಬ್ಭಂ ಉತ್ತಾಣಅಂ ಫಲಿಹಮ್ ॥

ಕಮಲರಾಜಿಯ ಕಾಂತಿ ಕಂದಿಲ್ಲವೊಂದಿನಿತು,
ಹಂಸಗಳು ಹಾರಿಹೋಗಿಲ್ಲವತ್ತೆ !
ಅವನಾರೊ ನಾ ಕಾಣೆ ನಮ್ಮೂರ ಕೆರೆಯಲ್ಲಿ
ಮೋಡವನೆ ಬಿಸುಡಿಹನು ತಲೆಕೆಳಗೆನೆ ||

ಇಲ್ಲಿ ವ್ಯಂಗ್ಯವಾಗಿರುವ ಅಂಶ—'ಮುಗ್ಧವಧುವು ಮೋಡದ ಪ್ರತಿಬಿಂಬವನ್ನು ನೋಡಿದಳು', ಎಂದು. ಇದು ವಾಚ್ಯಕ್ಕೆ ಅಂಗವಾಗಿಯೇ ಇದೆ. ಇತರ ಕಡೆಗಳಲ್ಲಿಯೂ ಹೀಗೆ ವ್ಯಂಗ್ಯಕ್ಕಿಂತಲೂ ವಾಚ್ಯದಲ್ಲಿಯೇ ಸೌಂದರ್ಯಾತಿಶಯವು ಪ್ರತೀತವಾಗುತ್ತಿದ್ದು, ಅದೇ ಪ್ರಧಾನವೆಂದು ಕಾಣುತ್ತಿದ್ದರೆ, ಅಲ್ಲಿ ವ್ಯಂಗ್ಯವು ಅಂಗವಾಗಿ ಮಾತ್ರ ಬರುವುದರಿಂದ ಅದು ಧ್ವನಿಗೆ ವಿಷಯವಲ್ಲ. ಉದಾಹರಣೆ :—

೭೧ ವಾಣೀರಕುಡಂಗೊಡ್ಡೀಣ ಸಉಣಿ ಕೋಲಾಹಲಂ ಸುಣನ್ತೀಏ ।
ಘರಕಮ್ಮವಾವಡಾಏ ಬಹುಏ ಸೀಅನ್ತಿ ಅಂಗಾಇಂ ॥

ಒತ್ತಾಗಿ ತಾ ಬೆಳೆದ ಬೆತ್ತಗಳ ಹತ್ತಿರವೆ
ಹಕ್ಕಿಗಳ ಕೂಗಾಟ ಕೇಳಿಬರಲು |
ಮನೆಗೆಲಸದಲಿ ನಿರತಳಾಗಿದ್ದ ಹೆಂಗಸಿಗೆ
ತನ್ನಂಗಗಳ ಸತ್ವವುಡುಗುತಿಹುದು ||[152]

ಇಂತಹ ಸ್ಥಲಗಳೆಲ್ಲ 'ಗುಣೀಭೂತವ್ಯಂಗ್ಯ'ಕ್ಕೆ ಉದಾಹರಣೆಗಳೆಂದು ಮುಂದೆ ಹೇಳಲಾಗುತ್ತದೆ. ಆದರೆ ಎಲ್ಲಿ ಸಂದರ್ಭವನ್ನು ಪರ್ಯಾಲೋಚಿಸಿ ವಿಶೇಷಾರ್ಥವನ್ನು ನಿರ್ಧರಿಸಿಯಾದಮೇಲೆ, ವಾಚ್ಯಾರ್ಥವು ಮತ್ತೆ ವ್ಯಂಗ್ಯಾರ್ಥಕ್ಕೆ ಅಂಗವಾಗಿಯೇ ಕಾಣುವುದೋ, ಅದು ಮಾತ್ರ ಈ ಅನುರಣನರೂಪ-ವ್ಯಂಗ್ಯವಾದ ಧ್ವನಿಗೇ ಲಕ್ಷ್ಯ. ಉದಾಹರಣೆ :—

೭೨ ಉಚ್ಚಿಣಸು ಪಡಿಅ ಕುಸುಮಂ ಮಾ ಧುಣ ಸೇಹಾಲಿಅಂ ಹಲಿಅಸುಹ್ಣೇ ।
ಅಹ ದೇ ವಿಸಮವಿರಾವೋ ಸಸುರೇಣ ಸುಓ ವಲಅಸದ್ದೋ ॥

ಬಿದ್ದಿರುವ ಹೂಗಳನೆ ಆರಿಸಿಕೊ ಗೌಡಸೊಸೆ
ಶೇಫಾಲಿಕೆಯ ನೀನಲ್ಲಾಡಿಸದೆಯೆ |
ಬಲವಾಗಿ ಬರುತಿರುವ ನಿನ್ನ ಬಳೆಯುಲಿಯನ್ನು
ಕೇಳುತಿರುವನು ನೋಡು ನಿನ್ನ ಮಾವ ||

152 ಸಂಕೇತವನ್ನು ಗೊತ್ತುಮಾಡಿದ್ದ ನಲ್ಲನು ಸಂಕೇತಸ್ಥಾನಕ್ಕೆ ಬಂದಾಯಿತೆಂಬುದು ವ್ಯಂಗ್ಯ. ಅದು ವಾಚ್ಯವನ್ನೆಲ್ಲಾ ಪೋಷಿಸುತ್ತದೆ—ಲೋ

ಇಲ್ಲಿ ವಿನಯರಹಿತನಾದ ಪತಿಯೊಡನೆ ರಮಿಸುತ್ತಿರುವ ಸಖಿಯೊಬ್ಬಳು ಹೊರಗೆ ಬಳೆಯ ಕಲಕಲವನ್ನು ಕೇಳಿದ ತನ್ನ ಸಖಿಯಿಂದ ಎಚ್ಚರಿಸಲ್ಪಡುತ್ತಾಳೆ. ವಾಚ್ಯಾರ್ಥವನ್ನು ತಿಳಿಯಬೇಕಾದರೆ ಇಷ್ಟನ್ನು ನಾವು ಗ್ರಹಿಸಲೇಬೇಕು. ಹೀಗೆ ವಾಚ್ಯಾರ್ಥವನ್ನು ನಾವು ನಿರ್ಣಯಿಸಿದಮೇಲೆ, ಅವನ ಅವಿನಯವನ್ನು ಮರೆಸಬೇಕೆಂಬ ತಾತ್ಪರ್ಯವೂ ಇಲ್ಲಿದೆಯೆಂದು ತಿಳಿಯುವುದರಿಂದ ಮತ್ತೆ ಅದು ವ್ಯಂಗ್ಯಕ್ಕೆ ಅಂಗವೇ ಆಗುತ್ತದೆ. ಆದುದರಿಂದ ಇದು ಅನುರಣನರೂಪ-ವ್ಯಂಗ್ಯ-ಧ್ವನಿಯಲ್ಲಿ ಅಂತರ್ಗತವಾಗುತ್ತದೆ.

ಹೀಗೆ ವಿವಕ್ಷಿತವಾಚ್ಯ-ಧ್ವನಿಯ ಆಭಾಸ-ವಿವೇಕವನ್ನು ಮಾಡಿಕೊಟ್ಟಮೇಲೆ ಈಗ ಅವಿವಕ್ಷಿತವಾಚ್ಯ-ಧ್ವನಿಗೂ ಅದನ್ನೇ ಮಾಡಿಕೊಡಲು ಹೇಳುತ್ತಾನೆ—

ಕಾರಿಕೆ

ಅವ್ಯುತ್ಪತ್ತೇರಶಕ್ತೇರ್ವಾ ನಿಬಂಧೋ ಯಃ ಸ್ಖಲದ್ಗತೇಃ ।
ಶಬ್ದಸ್ಯ ಸ ಚ ನ ಜ್ಞೇಯಃ ಸೂರಿಭಿರ್ವಿಷಯೋ ಧ್ವನೇಃ ॥ ೩೨ ॥

ವ್ಯುತ್ಪತ್ತಿಯಿಲ್ಲದೆ ಇರುವುದರಿಂದಾಗಲಿ[153] ಅಥವಾ ಪ್ರತಿಭೆಯಿಲ್ಲದೆ ಇರುವುದರಿಂದಾಗಲಿ ಮುಖ್ಯಾರ್ಥವು ಬಾಧಿತವಾಗಿರುವಂತಹ ಶಬ್ದಗಳ ಪ್ರಯೋಗವನ್ನು (ಕವಿಯು) ಮಾಡಿದರೆ, ಅದನ್ನು 'ಧ್ವನಿ'ಯೆಂದು ವಿಮರ್ಶಕರು ತಿಳಿಯಲಾಗದು.

ವೃತ್ತಿ

ಲಾಕ್ಷಣಿಕವಾದ ಶಬ್ದದ ಪ್ರಯೋಗವು ಅವ್ಯುತ್ಪತ್ತಿ ಅಥವಾ ಅಶಕ್ತಿಯಿಂದ ಉಂಟಾಗಿದ್ದಲ್ಲಿ ಅದು ಧ್ವನಿಗೆ ವಿಷಯವಲ್ಲ. ಏಕೆಂದರೆ—

ಕಾರಿಕೆ

ಸರ್ವೇಷ್ವೇವ ಪ್ರಭೇದೇಷು ಸ್ಫುಟತ್ವೇನಾವಭಾಸನಮ್ ।
ಯದ್ವ್ಯಂಗ್ಯಸ್ಯಾಂಗಿಭೂತಸ್ಯ ತತ್ಪೂರ್ಣಂ ಧ್ವನಿಲಕ್ಷಣಮ್ ॥ ೩೩ ॥

ಎಲ್ಲ ಪ್ರಭೇದಗಳಲ್ಲಿಯೂ, ವ್ಯಂಗ್ಯವು ಪ್ರಧಾನವಾಗಿ ಸ್ಫುಟವಾಗಿರುವಂತೆ ಭಾಸವಾಗುತ್ತಿರುವುದೇ ಧ್ವನಿಯ ಪೂರ್ಣವಾದ ಲಕ್ಷಣ[154]

---

153 ಅನುಪ್ರಾಸಾದಿಗಳನ್ನು ತರಲೇಬೇಕೆಂಬ ಹಟವೇ ಅವ್ಯುತ್ಪತ್ತಿ—ಲೋ
154 ಧ್ವನಿಯ ಸ್ವರೂಪ ಮತ್ತು ಧ್ವನಿಯಿರುವುದಕ್ಕೆ ಪ್ರಮಾಣ

ವೃತ್ತಿ

ಇದುವರೆಗೆ ಕೊಡಲಾದ ಉದಾಹರಣೆಗಳಿಗೆಲ್ಲ ಅನ್ವಯಿಸುವ ಲಕ್ಷಣವೇ ಇದು.

ಇಲ್ಲಿಗೆ ಶ್ರೀ ರಾಜಾನಕ-ಆನಂದವರ್ಧನಾಚಾರ್ಯ-ವಿರಚಿತವಾದ
ಧ್ವನ್ಯಾಲೋಕ'ದಲ್ಲಿ ಎರಡನೆಯ ಉದ್ದ್ಯೋತದ ಕನ್ನಡ ಅನುವಾದವು ಮುಗಿದುದು.

---

ಆದಿಯಖಂಡೋಲ್ಲಾಸಂ
ಭೇದಂಗಳನಾಂತು ಭಾಸಿಪಂತಾಗಿಸುತೀ |
ಮೇದಿನಿಯುಂ ತೋರಿಪ ವಾಗ್-
ವಾದಿನಿಗಾಂ ವಂದಿಸಿರ್ಪೆನಭಿನವಗುಪ್ತಂ ||

# ಮೂರನೆಯ ಉದ್ಯೋತ

ಇಲ್ಲಿಯವರೆಗೂ 'ಧ್ವನಿ'ಯ ಸ್ವರೂಪ ಮತ್ತು ಪ್ರಭೇದಗಳನ್ನು 'ವ್ಯಂಗ್ಯ'ದ ದೃಷ್ಟಿಯಿಂದ ತೋರಿಸಲಾಯಿತು; ಈಗ ಅದನ್ನೇ 'ವ್ಯಂಜಕ'ದ ದೃಷ್ಟಿಯಿಂದ ತೋರಿಸಲಾಗುತ್ತದೆ—1

**ಕಾರಿಕೆ**

**ಅವಿವಕ್ಷಿತವಾಚ್ಯಸ್ಯ ಪದವಾಕ್ಯಪ್ರಕಾಶತಾ ।**
**ತದನ್ಯಸ್ಯಾನುರಣನರೂಪವ್ಯಂಗ್ಯಸ್ಯ ಚ ಧ್ವನೇಃ ॥ ೧ ॥**

'ಅವಿವಕ್ಷಿತವಾಚ್ಯ' ಮತ್ತು 'ಅನುರಣನರೂಪವ್ಯಂಗ್ಯ'—ಇವೆರಡು ಧ್ವನಿ ಪ್ರಕಾರಗಳೂ 'ಪದ' ಮತ್ತು 'ವಾಕ್ಯ'ಗಳಿಂದ ಧ್ವನಿಸಲ್ಪಡುತ್ತವೆ.

---

1 ಸ್ಮರಸಂಹಾರದ ಲೀಲಾ
ಪರಿಪಾಟವಶಾಲಿಯಪ್ಪ ಪರಮೇಶ್ವರಾ।
ವರದೇಹಾರ್ಧಮನೊಯ್ಯನೆ
ಧರಿಸುವಳಂ ನೆನೆವೆನಿಲ್ಲಿ ಪರಮೇಶ್ವರಿಯಂ॥

ಎರಡನೆಯ ಉದ್ಯೋತಕ್ಕೂ ಈ ಉದ್ಯೋತಕ್ಕೂ "ಸಂಗತಿ" ಅಥವಾ ಸಮನ್ವಯವನ್ನು ಇಲ್ಲಿ ಹೇಳುತ್ತದೆ ವೃತ್ತಿಗ್ರಂಥ "ಅವಿವಕ್ಷಿತವಾಚ್ಯ" ಮುಂತಾದ ಧ್ವನಿಭೇದಗಳನ್ನು ಹಿಂದಿನ ಉದ್ಯೋತದಲ್ಲಿ ಹೇಳಿದೆಯಷ್ಟೆ. ಆ ಹೆಸರುಗಳಲ್ಲಿಯೇ "ವಾಚ್ಯ" ಅಡಕವಾಗಿದ್ದು, ಅದರ ಭೇದಗಳನ್ನು ಉಂಟುಮಾಡುವ ವಿಶೇಷಣಗಳೂ ಇವೆ. ಈ ಸ್ಥೂಲದೃಷ್ಟಿಯಿಂದ "ವಾಚ್ಯಭೇದಗಳನ್ನೇ ಹಿಂದೆ ಹೇಳಿದೆಯೆನ್ನಬಹುದು. ಸ್ವಲ್ಪ ವಿಚಾರ ಮಾಡಿದರೆ, ವಾಚ್ಯವು ಅಲ್ಲೆಲ್ಲೂ ಸ್ವವಿಶ್ರಾಂತವಲ್ಲ; ವ್ಯಂಗ್ಯಪರ, ಎಂದರೆ ವ್ಯಂಗ್ಯಕ್ಕೆ ವ್ಯಂಜಕ ಮಾತ್ರ ಎಂದು ತಿಳಿಯುತ್ತದೆ. ಇದನ್ನೇ ಲಕ್ಷ್ಯದಲ್ಲಿಟ್ಟರೆ ಉಕ್ತಭೇದಗಳನ್ನು "ವ್ಯಂಜಕ-ಮುಖೇನ ಭೇದಗಳು" ಎನ್ನುವುದೂ ಶಕ್ಯವೇ. ಆದರೆ ಮತ್ತೂ ವಿಮರ್ಶೆ ಮಾಡಿದಾಗ ವಾಚ್ಯಾರ್ಥದಲ್ಲಿ ಭೇದವಿರಲು "ವ್ಯಂಗ್ಯಮುಖೇನ" ಭೇದವೇ ಕಾರಣವೆಂದು ಗೊತ್ತಾಗುತ್ತದೆ. ಏಕೆಂದರೆ "ಅವಿವಕ್ಷಿತ-ವಾಚ್ಯ-ಧ್ವನಿ" ಯೆಂಬ ಸಮಾಸದಲ್ಲಿ "ಧ್ವನಿ" ಯೆಂದರೆ ವ್ಯಂಗ್ಯಾರ್ಥವೇ, ಸಮಾಸದಲ್ಲಿ ಅದೇ ಉತ್ತರ ಪದವಾದ್ದರಿಂದ ಪ್ರಧಾನ, ಉಳಿದವು ವಿಶೇಷಣ, ಹೀಗೆ ಮುಖ್ಯವಾಗಿ ವ್ಯಂಗ್ಯಾರ್ಥಭೇದಗಳೇ ಅವಿವಕ್ಷಿತವಾಚ್ಯಾದಿಗಳು. ವ್ಯಂಗ್ಯವಾದ ಅರ್ಥ ಅಲ್ಲಿ ಇರುವಂತೆ, ವ್ಯಂಜಕವಾದ ಅರ್ಥವೂ ಉಂಟಲ್ಲವೇ, ಎನ್ನಬಹುದು, ನಿಜ, ಆದರೆ ಧ್ವನಿವಿಭಾಗಕ್ಕೆ ವ್ಯಂಗ್ಯಾರ್ಥ ಪ್ರಾಧಾನ್ಯವನ್ನು ಮಾತ್ರ ಪ್ರಯೋಜಕವೆಂದು ಅಲ್ಲಿ ತಿಳಿಯಲಾಗಿದೆ; ಅರ್ಥವ್ಯಂಜಕತ್ವ ಪ್ರಾಸಂಗಿಕವಾಗಿ ಅಲ್ಲಿ ಬರುತ್ತದೆ. ಆದರೆ ಶಬ್ದವು ವ್ಯಂಜಕವಾಗಬಲ್ಲುದೇ ಹೊರತು ಎಂದೆಂದೂ ವ್ಯಂಗ್ಯವೆನಿಸಲೇ ಆರದು. ಈ ವ್ಯಂಜಕತ

ವೃತ್ತಿ

'ಅವಿವಕ್ಷಿತವಾಚ್ಯ'ದ ಪ್ರಭೇದವಾದ ಅತ್ಯಂತತಿರಸ್ಕೃತವಾಚ್ಯಧ್ವನಿಯಲ್ಲಿ ಪದ-ವ್ಯಂಜಕತ್ವಕ್ಕೆ ಉದಾಹರಣೆಗಳು—(೧) ವ್ಯಾಸಮಹರ್ಷಿಗಳ ಪ್ರಯೋಗ—'ಸಪ್ತೈತಾಃ ಸಮಿಧಃ ಶ್ರಿಯಃ' (=ಇವೇಳೂ ಸಂಪತ್ತಿಗೆ ಸಮಿತ್ತುಗಳು).[2] (೨) ಕಾಳಿದಾಸನ ಪ್ರಯೋಗ—'ಕಃ ಸನ್ನದ್ಧೇ ವಿರಹವಿಧುರಾಂ ತ್ವಯ್ಯುಪೇಕ್ಷೇತ ಜಾಯಾಂ'[3] (=ನೀನು ಸನ್ನದ್ಧನಾಗಿರಲು, ವಿರಹವಿಹ್ವಲೆಯಾದ ಕಾಂತೆಯನ್ನು ಯಾರು ತಾನೆ ಉಪೇಕ್ಷಿಸಿಯಾರು!). (೩) ಕಾಳಿದಾಸನದೇ ಇನ್ನೊಂದು ಪ್ರಯೋಗ—'ಕಿಮಿವ ಹಿ ಮಧುರಾಣಾಂ ಮಂಡನಂ ನಾಕೃತೀನಾಂ'[4] (=ಮಧುರವಾದ

---

ವನ್ನೇ ಪ್ರಧಾನವಾಗಿ ದೃಷ್ಟಿಯಲ್ಲಿಟ್ಟುಕೊಂಡು ಮಾಡುವ ಧ್ವನಿವಿಬಾಗಗಳು ಈ ಉದ್ದ್ಯೋತದಲ್ಲಿ ಬಂದಿವೆ. ಇಲ್ಲಿರುವುವು ಶುದ್ಧ ವ್ಯಂಜಕ ಭೇದಗಳು ಮಾತ್ರ. ಇಲ್ಲಿ ಬರುವ ಪದ, ವಾಕ್ಯ, ವರ್ಣ, ಪದಭಾಗ, ಸಂಘಟನೆ, ಮಹಾವಾಕ್ಯ—ಈ ಭೇದಗಳೆಲ್ಲ ವ್ಯಂಜಕಶಬ್ದದ ಸ್ವಗತ ಭೇದಗಳು, ವ್ಯಂಗ್ಯಕೃತವಾದ ಭೇದಗಳಲ್ಲ. ಇವನ್ನು ಮಾತ್ರ ಈ ಉದ್ದ್ಯೋತದ ವಿಭಾಗ ನಿರೂಪಣೆಯಲ್ಲಿ ಆಶ್ರಯಿಸಲಾಗಿದೆ.

ಆದರೆ ಚಂದ್ರಿಕಾಕಾರನು ಈ ಅಭಿಪ್ರಾಯವನ್ನರಿಯದೆ, "ವ್ಯಂಗ್ಯದೃಷ್ಟಿಯಿಂದ"= ವ್ಯಂಗ್ಯವಾದ 'ವಸ್ತು', 'ಅಲಂಕಾರ', 'ರಸ' ಗಳ ಮೂಲಕ" ಎಂದು ವಿವರಿಸಿದ್ದಾನೆ. ಅವನನ್ನು ಹೀಗೆ ಕೇಳಬೇಕಾಗಿದೆ-ಈ ತ್ರಿಭೇದವನ್ನು ಹಿಂದೆ ಮಾಡಿದವರಾರು ? ಕಾರಿಕಾಕಾರನಲ್ಲ ; ವೃತ್ತಿಕಾರನೇ. ಈಗ ಮೂಲಗ್ರಂಥದಲ್ಲಿ ವಿಭಾಗ ಮಾಡುತ್ತಿರುವವನು ವೃತ್ತಿಕಾರನಲ್ಲ, ಕಾರಿಕಾಕಾರ. ಎಂದ ಮೇಲೆ 'ಹಿಂದೆ ಮಾಡಲಾಯಿತು', 'ಈಗ ಮಾಡಲಾಗುತ್ತದೆ' ಎಂಬೆರಡು ಕ್ರಿಯೆಗಳಿಗೆ ಭಿನ್ನಕರ್ತೃಪದಗಳೊಡನೆ ಅನ್ವಯವಾಗುವಂತಾದರೆ, "ಸಂಗತಿ" ಅಥವಾ ಸಮನ್ವಯ ಹೇಗೆ ತಾನೆ ಸಾಧ್ಯ ? 'ಸಕಲ ಪ್ರಾಕ್ತನ ಗ್ರಂಥದೊಡನೆ ಸಮನ್ವಯ ಹೇಳುತ್ತಿದ್ದೇವೆ ; ಕೇವಲ ಹಿಂದಿನ ಉದ್ದ್ಯೋತದೊಡನೆ ಮಾತ್ರವಲ್ಲ' ಎಂದು ಕೂಡ ಅವನು ಹೇಳಲವಕಾಶವಿಲ್ಲ. ಏಕೆಂದರೆ ಅವಿವಕ್ಷಿತವಾಚ್ಯಾದಿ ಭೇದಗಳನ್ನೂ ಪ್ರಾಕ್ತನ ಗ್ರಂಥದಲ್ಲಿ ಹೇಳಿರುವುದನ್ನು ಅಲ್ಲಗಳೆಯುವುದು ಶಕ್ಯವೆ?—ಲೋಚನ.

2 "ಧೃತಿಃ ಕ್ಷಮಾ ದಯಾ ಶೌಚಂ ಕಾರುಣ್ಯಂ ವಾಗನಿಷ್ಠುರಾ।
ಮಿತ್ರಾಣಾಂ ಚಾನಭಿದ್ರೋಹಃ ಸಪ್ತೈತಾಃ ಸಮಿಧಃ ಶ್ರಿಯಃ॥"—ಮಹಾಭಾರತ.

ಅಸಾಧಾರಣ ಲಕ್ಷ್ಮೀ ಪ್ರಾಪಕತ್ವವು 'ಸಮಿಧಃ' ಎನ್ನುವುದರಿಂದ ವ್ಯಂಗ್ಯ—ಲೋ.

3 ಮೇಘದೂತ. ಇಲ್ಲಿ 'ಸನ್ನದ್ಧ' ಪದದಿಂದ ನಿಷ್ಕಾರುಣಿಕತ್ವ, ಅಪ್ರತೀಕಾರ್ಯತ್ವ, ಇತ್ಯಾದಿ ವಕ್ತ್ರಭಿಪ್ರಾಯ ವ್ಯಂಗ್ಯ—ಲೋ.

4 ಅಭಿಜ್ಞಾನ ಶಾಕುನ್ತಲ. ಇಲ್ಲಿ 'ಮಧುರ' ಶಬ್ದದಿಂದ ಸರ್ವವಿಷಯರಂಜಕತ್ವ ಮುಂತಾದ ಲಕ್ಷ್ಯಾರ್ಥಗಳನ್ನೊಳಗೊಳ್ಳುವ ಸಾತಿಶಯ ಅಭಿಲಾಷವಿಷಯತ್ವವೆಂಬ ವಕ್ತ್ರಭಿಪ್ರಾಯ ವ್ಯಂಗ್ಯ—ಲೋ.

ಆಕೃತಿಗಳಿಗೆ ಯಾವುದು ತಾನೆ ಭೂಷಣವಲ್ಲ?). ಈ ಉದಾಹರಣೆಗಳಲ್ಲಿ 'ಸಮಿತ್ತು', 'ಸನ್ನದ್ಧ', 'ಮಧುರ' ಎಂಬ ಪದಗಳು ವ್ಯಂಜಕತ್ವದ ಅಭಿಪ್ರಾಯದಿಂದಲೇ ಪ್ರಯುಕ್ತ ವಾಗಿವೆ.

ಇದಕ್ಕೇ ಅರ್ಥಾಂತರ-ಸಂಕ್ರಮಿತ-ವಾಚ್ಯಧ್ವನಿ-ಯಲ್ಲಿ ಉದಾಹರಣೆ— 'ರಾಮೇಣ ಪ್ರಿಯಜೀವಿತೇನ ತು ಕೃತಂ ಪ್ರೇಮ್ಣಃ ಪ್ರಿಯೇ ನೋಚಿತಮ್' (=ಪ್ರಿಯೆ, ಪ್ರಾಣದಲ್ಲಿ ಬಹಳ ಪ್ರೀತಿಯನ್ನಿಟ್ಟ ರಾಮನು ಪ್ರೇಮಕ್ಕೆ ಉಚಿತವಾದುದನ್ನು ಮಾಡಲಿಲ್ಲ).[5] ಇಲ್ಲಿ ಸಾಹಸೈಕಪ್ರಿಯತ್ವವೇ ಮೊದಲಾದ ವ್ಯಂಗ್ಯಾರ್ಥಗಳನ್ನು ಕೊಡುವ 'ರಾಮನು' ಎಂಬ ಪದವು ವ್ಯಂಜಕ. ಅಥವಾ ಇನ್ನೊಂದು ಉದಾಹರಣೆ:-

೭೩ ಏಮೇಅ ಜಣೋ ತಿಸ್ಸಾ ದೇಉ ಕವೋಲೋಪಮಾಇ ಸಸಿಬಿಂಬಮ್ ।
ಪರಮತ್ಥವಿಆರೇ ಉಣ ಚನ್ದೋ ಚನ್ದೋ ವಿಅ ವರಾಓ ॥[6]

---

5 ಇಡಿಯ ಶ್ಲೋಕದ ಪಾಠ ಹೀಗಿದೆ:-

ಪ್ರತ್ಯಾಖ್ಯಾನರುಷಃ ಕೃತಂ ಸಮುಚಿತಂ ಕ್ರೂರೇಣ ತೇ ರಕ್ಷಸಾ
ಸೋಢಂ ತಚ್ಚ ತಥಾ ತ್ವಯಾ ಕುಲಜನೋ ಧತ್ತೇ ಯಥೋಚ್ಚೈಃ ಶಿರಃ ।
ವ್ಯರ್ಥಂ ಸಂಪ್ರತಿ ಬಿಭ್ರತಾ ಧನುರಿದಂ ತ್ವದ್ವ್ಯಾಪದಃ ಸಾಕ್ಷಿಣಾ
ರಾಮೇಣ ಪ್ರಿಯಜೀವಿತೇನ ತು ಕೃತಂ ಪ್ರೇಮ್ಣಃ ಪ್ರಿಯೇ ನೋಚಿತಮ್ ॥

'ನಿರಾಕರಣದಿಂದ ಹುಟ್ಟಿದ ತನ್ನ ಅಸದಳ ಕೋಪಕ್ಕೆ ಅನುಸಾರವಾಗಿ ದುರುಳ ರಾಕ್ಷಸನು ಗೈದನು; ಕುಲಸ್ತ್ರೀಯರು ತಲೆಯೆತ್ತಿ ತಿರುಗುವಂತೆ ನೀನಾದರೂ ಅದನ್ನೆಲ್ಲ ಸಹಿಸಿದೆ; ಆದರೆ ನಿನ್ನ ಆಪತ್ತನ್ನೆಲ್ಲ ನೋಡಿ ನೋಡಿಕೊಂಡು ವ್ಯರ್ಥವಾಗಿ ಬಿಲ್ಲನ್ನು ಹಿಡಿದಿರುವ ಈ ಜೀವಗಳ್ಳ ರಾಮ ಮಾತ್ರ ಪ್ರೇಮಕ್ಕೆ ಒಪ್ಪತಕ್ಕದ್ದನ್ನು ಮಾಡಲಿಲ್ಲ'

ಇಲ್ಲಿ 'ರಾಮ' ಶಬ್ದ ಅಸಮಸಾಹಸತ್ವ, ಸತ್ಯಸಂಧತ್ವ, ಮುಂತಾದ ವ್ಯಂಗ್ಯ ಧರ್ಮಾಂತರ ಗಳನ್ನು ಅಭಿವ್ಯಂಜಿಸುತ್ತದೆ; ಕೆಲವರು ಹೇಳುವಂತೆ 'ಕಾಪುರುಷತ್ವ' ಮುಂತಾದುವನ್ನಲ್ಲ. ಏಕೆಂದರೆ ಕಾಪುರುಷನಾದವನಿಗೆ ಕರ್ತವ್ಯ ವಿಸ್ಮೃತಿ ಉಚಿತವಾಗಿ, ಸಹಜ ಸ್ವಭಾವವಾಗುತ್ತದೆ; ಇಲ್ಲಿರುವಂತೆ ಅನುಚಿತತ್ವಕೃತ ವಿಷಾದಕ್ಕೆ ಅವಕಾಶವಿರದು

'ಪ್ರಿಯ' ಶಬ್ದಕ್ಕೆ ಮೂಲಭೂತವಾದ ಪ್ರೇಮಕ್ಕೇ ಈಗ ಅನೌಚಿತ್ಯ ಕಲಂಕ ಅಂಟಿದೆಯಲ್ಲಾ; ಎಂಬ ಉದ್ದೀಪಕ ಸಾಮಗ್ರಿಯಿಂದ ರಾಮನ ಕರುಣರಸ ಸ್ಫುಟವಾಗಿದೆ.

6 'ಏವಮೇವ' (< ಏಮೇಅ) ಎಂಬುದು ಜನರು ಅವಿವೇಕದಲ್ಲಿ ಮುಳುಗಿರುವುದನ್ನೂ, 'ಜನ' (< ಜಣೋ) ಎಂಬುದು ಲೋಕವಿದಿತವಾದ ಅವರ ಗತಾನುಗತಿಕ ಸ್ವಭಾವ ವನ್ನೂ, 'ತಸ್ಯಾಃ' (< ತಿಸ್ಸಾ) ಎಂಬುದು ನಾಯಿಕೆಯ ಅಸಾಧಾರಣ ಗುಣಪರಿಪೂರ್ಣವಾದ ಸೌಂದರ್ಯವನ್ನೂ ಧ್ವನಿಸುತ್ತವೆ 'ಕಪೋಲೋಪಮಾಯಾಂ' (< ಕವೋಲೋಪಮಾಇ) ಎಂಬುದು 'ನಿರ್ವ್ಯಾಜ ಲಾವಣ್ಯ ಸರ್ವಸ್ವ'ವೆನಿಸುವ ಮುಖದ ನಡುವೆ ಪ್ರಧಾನವಾದ ಆ

ಆಕೆಯ ಕಪೋಲದುಪಮೆಗೆ
ರಾಕಾಪತಿಬಿಂಬವೊಂದೆಯೆಂಬೀ ನುಡಿಯಂ |
ಲೋಕವೆ ಪೇಳ್ದೊಡಮದನಾ-
ಲೋಕಿಸೆ ಮೇಣ್ ಶಶಿಯೆ ಶಶಿಸಮಾನವರಾಕಂ ||

ಇಲ್ಲಿ ಎರಡನೆಯ 'ಶಶಿ' ಎಂಬ ಪದವು ಅರ್ಥಾಂತರಸಂಕ್ರಮಿತವಾಚ್ಯ

ಅವಿವಕ್ಷಿತವಾಚ್ಯಧ್ವನಿಯ ಅತ್ಯಂತತಿರಸ್ಕೃತವಾಚ್ಯವೆಂಬ ಪ್ರಭೇದದಲ್ಲಿ ವಾಕ್ಯ ಧ್ವನಿಗೆ ಉದಾಹರಣೆ:—

೭೪ ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ।
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ॥[7]

ಇರುಳೆಂದು ಸರ್ವಭೂತಗ-
ಳಿರುವಂದೆಚ್ಚರದಿನಿರುವನಾ ಸಂಯಮಿ ತಾಂ |
ಪೆರರೆಲ್ಲರ್ ಜಾಗರದಿಂ-
ದಿರುವಾಗಳ್ ರಾತ್ರಿಯದುವೆ ಕಾಣುವ ಮುನಿಗೇ ||

ಈ ವಾಕ್ಯದಲ್ಲಿ ಇರುಳೆಂಬರ್ಥವಾಗಲಿ ಜಾಗರಣವೆಂಬರ್ಥವಾಗಲಿ ವಿವಕ್ಷಿತವಲ್ಲ.[8] ಹಾಗಾದರೆ ವಿವಕ್ಷಿತವಾದ ಅರ್ಥವೇನು? ತತ್ತ್ವಜ್ಞಾನದಲ್ಲಿ ಅವಧಾನವಿರುವಿಕೆ ಮತ್ತು ತತ್ತ್ವವಿಮುಖತೆ-ಇವು ಮುನಿಯಲ್ಲಿ ಹೇಗೆ ಇರುವುವೆಂಬುದು.[9] ಆದುದರಿಂದ ತಿರಸ್ಕೃತವಾಚ್ಯವು ಇಲ್ಲಿ ವ್ಯಂಜಕ.

---

ಕಪೋಲಕ್ಕೆ ಉಪಮಾನ ಕೊಡುವುದಾದರೆ ಅದಕ್ಕಿಂತ ಹೆಚ್ಚಿನ ವಸ್ತುವನ್ನು ಅಲ್ಲವೆ ಹೇಳಬೇಕು? ಆದರೆ ಅದಕ್ಕಿಂತ ಎಷ್ಟೋ ಹೀನವಾದ, ಕಲಂಕದಿಂದ ದೂಷಿತವಾದ ಚಂದ್ರಬಿಂಬವನ್ನು ಹೇಳಿದರೆ ಸರಿಯೆ? ಇದು ಜನರ ಕುರಿಬುದ್ಧಿಯನ್ನು ಮಾತ್ರ ತೋರಿಸುತ್ತದೆ. ಆದರೆ ಯೋಗ್ಯ ವಿಮರ್ಶಕರು ಪರಿಶೀಲಿಸಿದರೆ ಆ ಶೋಚನೀಯನಾದ ಚಂದ್ರನು ಚಂದ್ರನೇ ಸರಿ, ಎಂದರೆ ಕ್ಷಯಿತ್ವ, ವಿಲಾಸಶೂನ್ಯತ್ವ, ಮಲಿನತ್ವ ಮುಂತಾದ ಅವಗುಣಗಳಿಂದ ನಿಕೃಷ್ಟನೇ ಸರಿಯೆಂಬ ವ್ಯಂಗ್ಯಧರ್ಮ ಸಂಕ್ರಾಂತವಾದ ಅರ್ಥ ಹೊರಡುತ್ತದೆ. ಹೀಗೆಯೇ ಮುಂದೆಯೂ ಸಹೃದಯರು ಊಹಿಸಿಕೊಳ್ಳಬೇಕು—ಲೋ.

7 ಭಗವದ್ಗೀತೆ, II 69. ಇದು ವಾಕ್ಯಪ್ರಕಾಶಿತವಾದ ಧ್ವನಿಗೆ ಉದಾಹರಣೆ.

8 ಹಾಗೆ ವಿವಕ್ಷಿತವಾಗಿದ್ದ ಪಕ್ಷದಲ್ಲಿ, ಶಿಷ್ಯನಿಗೆ ಮಾಡಹೊರಟ ಉಪದೇಶವನ್ನು ಮಾಡಿದಂತೆಯೇ ಆಗುತ್ತಿರಲಿಲ್ಲ. 'ರಾತ್ರೆ ಎಚ್ಚರವಾಗಿರಬೇಕು, ಹಗಲು ರಾತ್ರೆಯಲ್ಲಿರುವಂತಿರಬೇಕು' ಎಂದರೆ ಏನು ತಾನೆ ಸಾಫಲ್ಯ? ಆದುದರಿಂದ ವಾಕ್ಯದ ನೇರವಾದ ಅರ್ಥ ಬಾಧಿತವಾಗಿದೆ.

9 ಸಂಯಮಿಯ ವರ್ತನೆ ಲೋಕವಿಲಕ್ಷಣವಾದುದು, ಅವನು ತತ್ತ್ವದೃಷ್ಟಿಯಲ್ಲಿ ಸದಾ

ಅರ್ಥಾಂತರಸಂಕ್ರಮಿತವಾಚ್ಯದಲ್ಲಿ ವಾಕ್ಯ-ಧ್ವನಿಗೆ ಉದಾಹರಣೆ :—

೭೫ ವಿಸಮಇಓ ಚ್ಚಿಅ ಕಾಣ ವಿ ಕಾಣ ವಿ ವಾಲೇಇ ಅಮಿಅಣಿಮ್ಮಾಓ ।
ಕಾಣ ವಿ ವಿಸಾಮಿಅಮಓ ಕಾಣ ವಿ ಅವಿಸಾಮಓ ಕಾಲೋ ॥

ವಿಷಮಯವು ತಾನೆನಿಸಿ ಕೆಲವರಿಗೆ ಕಳೆಯುವುದು
ಅಮೃತಮಯದಂತೆ ಕೆಲವರಿಗೆ ಕಾಲ ।
ಉಳಿದರಿಗೆ ವಿಷವಮೃತವೆರಡರಾ ಮಿಶ್ರವೆನೆ
ಅಮೃತವಿಷವೇನಿರದು ಕೆಲಜನರಿಗೆ ॥

ಇಲ್ಲಿ 'ದುಃಖ', 'ಸುಖ', ಎಂಬರ್ಥದಲ್ಲಿ 'ವಿಷ', 'ಅಮೃತ' ಎಂಬ ಶಬ್ದಗಳು ಸಂಕ್ರಮಿತವಾಚ್ಯಗಳಾಗಿರುವ ಕಾರಣ ಅರ್ಥಾಂತರಸಂಕ್ರಮಿತವಾಚ್ಯಕ್ಕೆ ವ್ಯಂಜಕತ್ವವನ್ನು ಉದಾಹರಿಸಿದಂತಾಯಿತು.[10]

---

ಜಾಗರೂಕನಾಗಿಯೂ ಮಿಥ್ಯಾದೃಷ್ಟಿಯಲ್ಲಿ ವಿಮುಖನಾಗಿಯೂ ಇರುವನೆಂಬುದನ್ನು ವಾಕ್ಯ ಧ್ವನಿಸುತ್ತದೆ. ಇಲ್ಲಿ 'ಸರ್ವ' ಶಬ್ದದಿಂದಲೇ ಈ ಧ್ವನಿಯೆನ್ನುವಂತಿಲ್ಲ; ಏಕೆಂದರೆ ಅದಕ್ಕೆ ಅಪೇಕ್ಷಿತಾರ್ಥ ಕಷ್ಟವಲ್ಲ; ಅದು ಸರ್ವಥಾ ಅನುಪಪನ್ನವೆಂಬಂತಿಲ್ಲ ಬ್ರಹ್ಮನಿಂದ ಹಿಡಿದು ಜಡವಸ್ತುಗಳವರೆಗೆ ಇರುವ ಹದಿನಾಲ್ಕು ಬಗೆಯ ಭೂತಗಳಿಗೆ ಎಲ್ಲಕ್ಕೂ ಯಾವುದು ರಾತ್ರಿಯೋ, ಎಂದರೆ ವ್ಯಾಮೋಹ ಜನನಿಯಾದ ಪರಾತ್ಪರ ತತ್ತ್ವದೃಷ್ಟಿಯೋ, ಅದರಲ್ಲಿ ಸಂಯಮಿಯು ಎಚ್ಚರವಾಗಿರುತ್ತಾನೆ, ಹೇಗೆ ಸಾಧಿಸಿಯೇನು ಎಂದು ವಿಷಯಗಳ ವರ್ಜನ ಮಾತ್ರದಿಂದಲೇ ಸಂಯಮಿಯಾಗಲಾರನು, ಎಂದಭಿಪ್ರಾಯ. ಅಥವಾ ಸರ್ವ ಭೂತಗಳಿಗೂ ವ್ಯಾಮೋಹವನ್ನುಂಟುಮಾಡುವ ಮಾಯೆಯ ವಿಷಯದಲ್ಲಿ ಇದನ್ನು ಹೇಗೆ ತೊರೆಯಲಿ, ಎಂದು ಎಚ್ಚರವಾಗಿರುತ್ತಾನೆ. ಯಾವ ಮಿಥ್ಯಾದೃಷ್ಟಿಯಲ್ಲಿ ಸರ್ವ ಜೀವಜಾತಗಳೂ ಎಚ್ಚರವಾಗಿರುತ್ತವೋ ಅದು ಸಂಯಮಿಗೆ ರಾತ್ರಿ ಅಥವಾ ಗಮನದ ವಿಷಯವಲ್ಲ ಲೋಕವು ಎಚ್ಚೆತ್ತಿರುವಾಗ ಇವನು ಎಚ್ಚರವಾಗಿರುವುದಿಲ್ಲ. ಲೋಕೋತ್ತರವಾದ ವರ್ತನೆಯಲ್ಲಿ ನೆಲೆಗೊಂಡ ಯೋಗಿ ನೋಡುವುದೂ ಅರಿಯುವುದೂ ಹೀಗೆ. ಅವನ ಅಂತಃಕರಣ ಬಾಹ್ಯೇಂದ್ರಿಯಗಳು ಆದ್ದರಿಂದಲೇ ಸಫಲ. ಮಿಕ್ಕವರು ನೋಡುವುದೂ ಇಲ್ಲ, ಅರಿಯುವುದೂ ಇಲ್ಲ. ಒಟ್ಟಿನಮೇಲೆ, ಎಲ್ಲರೂ ತತ್ತ್ವದೃಷ್ಟಿಪರರಾಗಿ ಇರಬೇಕು ಎಂದು ತಾತ್ಪರ್ಯ. ಹೀಗೆ 'ಪಶ್ಯತಃ' (=ಕಾಣುವ), 'ಮುನೇಃ' (=ಮುನಿಗೆ) ಎಂಬ ಶಬ್ದಗಳಿಗೆ ಕೂಡ ಇಲ್ಲಿ ವಾಚ್ಯಾರ್ಥದಲ್ಲಿ ವಿಶ್ರಾಂತಿಯಿಲ್ಲ; ವ್ಯಂಗ್ಯಾರ್ಥದಲ್ಲೇ ವಿಶ್ರಾಂತಿ. ಇಲ್ಲಿ ಒಟ್ಟು ಪದ ಸಮೂಹವಾದ ವಾಕ್ಯವೇ ವ್ಯಂಜಕ—ಲೋ.

10 'ಕೇಷಾಂಚಿತ್' (=ಕೆಲವರಿಗೆ) ಎಂದರೆ ಕೆಟ್ಟವರಿಗೆ ಅಥವಾ ಅವಿವೇಕಿಗಳಿಗೆ ಕಾಲ ವಿಷಮಯ. ಮತ್ತೆ 'ಕೆಲವರಿಗೆ' ಎಂದರೆ ಸುಕೃತಿಗಳಿಗೆ ಅಥವಾ ವಿವೇಕಿಗಳಿಗೆ ಅದೇ ಕಾಲ ಅಮೃತಮಯ. ಉಳಿದ ಮಿಶ್ರಜನರಿಗೆ ಎಂದರೆ ವಿವೇಕಾವಿವೇಕವೆರಡೂ ಕೂಡಿದವರಿಗೆ ವಿಷ ಮತ್ತು ಅಮೃತ. ಎಲ್ಲೋ ಕೆಲಮಂದಿ ಪರಮ ಮೂರ್ಖರಿಗೆ ಅಥವಾ ಪರಮಯೋಗಿಗಳಿಗೆ

ಇನ್ನು ವಿವಕ್ಷಿತವಾಚ್ಯಧ್ವನಿಯಲ್ಲಿ ಬರುವ ಶಬ್ದಶಕ್ತಿಮೂಲ-ಅನುರಣನರೂಪ-ವ್ಯಂಗ್ಯವೆಂಬ ಪ್ರಭೇದದಲ್ಲಿ ಪದ-ವ್ಯಂಜಕತ್ವಕ್ಕೆ ಉದಾಹರಣೆ :

೭೬ ಪ್ರಾತುಂ ಧನೈರರ್ಥಿಜನಸ್ಯ ವಾಂಛಾಂ
ದೈವೇನ ಸೃಷ್ಟೋ ಯದಿ ನಾಮ ನಾಸ್ಮಿ।
ಪಥಿ ಪ್ರಸನ್ನಾಂಬುಧರಸ್ತಡಾಗಃ
ಕೂಪೋಽಥವಾ ಕಿಂ ನ ಜಡಃ ಕೃತೋಽಹಮ್ ॥

ಬೇಡುವರ ಮನದಾಸೆಯನು ನಾ
ನೀಡಿ ಸಲಿಸಲು ದೈವವೆನ್ನನು
ನಾಡೊಳಗೆ ಪುಟ್ಟಿಸದೆ ಪೋದುದದೆಂದು ನಂಬಿದರೂ।
ನೋಡುವೊಡೆ ವಿಧಿಯೇತಕೆನ್ನನು
ನಾಡೆ ನಿರ್ಮಲಸಲಿಲದಿಂದಲಿ
ಕೂಡಿರುವ ಕೆರೆಬಾವಿಯಾಗಿಯೆ ಜಡನ ನಿರ್ಮಿಸನು ॥

ಇಲ್ಲಿ 'ಜಡ' ಎಂಬ ಪದವನ್ನು ನಿರ್ವಿಣ್ಣನಾದ ಕವಿಯು ತನಗೆ ಅನ್ವಯಿಸುವಂತೆ ಪ್ರಯೋಗಿಸಿದ್ದಾನೆ. ಅನುರಣನರೂಪವಾಗಿ ಅದು ಬಾವಿಗೂ ತನ್ನ ಶಕ್ತಿಯಿಂದಲೇ ಅನ್ವಯಿಸುತ್ತದೆ.[11]

---

ವಿಷವೂ ಅಲ್ಲ, ಅಮೃತವೂ ಅಲ್ಲ. 'ವಿಷ', 'ಅಮೃತ' ಎಂಬ ಶಬ್ದಗಳು ಇಲ್ಲಿ 'ಲಾವಣ್ಯ' ಇತ್ಯಾದಿ ಶಬ್ದಗಳಂತೆ 'ದುಃಖಸಾಧನ', 'ಸುಖಸಾಧನ' ಎಂಬರ್ಥಗಳನ್ನು ರೂಢಿ ಲಕ್ಷಣೆಯಿಂದ ಬೋಧಿಸುತ್ತವೆ. 'ಬೇವು ವಿಷ'. 'ಬೇಲ ಅಮೃತ' ಎಂಬ ಪ್ರಯೋಗಗಳಲ್ಲಿ ನಾವು ನೋಡುವಂತೆ ಇಲ್ಲಿ 'ದುಃಖಸಾಧನ', 'ಸುಖಸಾಧನ' ಎಂಬ ಲಕ್ಷ್ಯಾರ್ಥಗಳಲ್ಲಿ ಕೂಡ ತಾತ್ಪರ್ಯವಿಲ್ಲ ಪರ್ಯವಸನ್ನವಾದ ದುಃಖ, ಸುಖಗಳಲ್ಲಿಯೇ 'ವಿಷಾಮೃತ' ಶಬ್ದಗಳಿಗೆ ವಿಶ್ರಾಂತಿಯಿರುವುದು. ಸಾಧನಾರ್ಥವು ಸಂಪೂರ್ಣವಾಗಿ ಅವಿವಕ್ಷಿತವಲ್ಲವೆಂದು ಕೂಡ ಹೇಳುವಂತಿಲ್ಲ, ಸಾಧನವಿಲ್ಲದೆ ಫಲೋದಯವಾಗದ ಕಾರಣ. ಆದ್ದರಿಂದ ಇವು 'ಸಂಕ್ರಮಿತ-ವಾಚ್ಯ'ಗಳು.

11 ಜಡ=ಕಿಂಕರ್ತವ್ಯತಾ-ಮೂಢ ಬಾವಿಯು ಜಡ, ಯಾವ ಯಾಚಕನಿಗೆ ಏನು ಬೇಕೆಂಬ ಪರಿಜ್ಞಾನ ಅದಕ್ಕಿಲ್ಲ. ಆದ್ದರಿಂದಲೇ ಜಡ ಅಥವಾ ತಣ್ಣಗಿರುವುದೂ, ನಿರ್ವೇದಾದಿ ಸಂತಾಪಗಳೊಂದೂ ಇಲ್ಲದೆ. ತಣ್ಣೀರಿಂದ ಕೂಡಿರುವ ಪ್ರಯುಕ್ತ ಪರೋಪಕಾರ ಶಕ್ತಿಯನ್ನುಳ್ಳುದೆಂದೂ ಅರ್ಥ. ಈ ಮೂರನೆಯ ಅರ್ಥವು ಕೆರೆಗೂ ಸಮಾನವಾದರೆ ಪುನರುಕ್ತವಾಗುವುದೆಂದು—ಕೆರೆಗೂ 'ಪ್ರಸನ್ನಾಂಬುಧರ' ಎಂದು ಶಬ್ದಾಂತರದಿಂದ ತಣ್ಣೀರಿರುವುದನ್ನು ಆಗಲೇ ಹೇಳಿರುವುದರಿಂದ—ಗ್ರಂಥಕಾರನು 'ಜಡ' ಶಬ್ದವನ್ನು ಬಾವಿಗೆ ಮಾತ್ರ ಅನ್ವಯಿಸಿದ್ದಾನೆ ವೃತ್ತಿಯಲ್ಲಿ—ಲೋ.

ಇದೇ ಪ್ರಭೇದದಲ್ಲೇ ವಾಕ್ಯಧ್ವನಿಗೆ ಉದಾಹರಣೆಯು (ಬಾಣಭಟ್ಟನ) ಹರ್ಷ ಚರಿತೆಯಲ್ಲಿ ಬರುವ ಸಿಂಹನಾದನ ವಾಕ್ಯಗಳಲ್ಲಿ ಸಿಕ್ಕುತ್ತದೆ—

೭೭ 'ವೃತ್ತೇಽಸ್ಮಿನ್ಮಹಾಪ್ರಲಯೇ ಧರಣೀಧಾರಣಾಯಾಧುನಾ ತ್ವಂ ಶೇಷಃ'

(='ಈ ಹರ್ಷವಿನಾಶ ಪ್ರಸಂಗವು ಒದಗಿರುವಾಗ ರಾಜ್ಯಭಾರವನ್ನು ವಹಿಸಿ ಕೊಳ್ಳಲು ಈಗ ಉಳಿದಿರುವವನು ನೀನೇ'—'ಪ್ರಲಯಕಾಲವು ಬಂದೊದಗಿದಾಗ ಭೂಮಿಯ ಭಾರವನ್ನು ಹೊರಲು ಆದಿಶೇಷನೊಬ್ಬನೇ ಹೇಗೆ ಸಮರ್ಥನೋ ಹಾಗೆ.')

ಈ ವಾಕ್ಯವು ಅನುರಣನರೂಪವಾದ ಅರ್ಥಾಂತರವನ್ನು ಸ್ಫುಟವಾಗಿ ಶಬ್ದ ಶಕ್ತಿಯಿಂದಲೇ ಧ್ವನಿಸುತ್ತದೆ.[12]

ಇನ್ನು ಕವಿಪ್ರೌಢೋಕ್ತಿಸಿದ್ಧವಾದ ಅರ್ಥಶಕ್ತಿಮೂಲ-ಧ್ವನಿಯೆಂಬ ಪ್ರಭೇದ ದಲ್ಲಿ ಪದ-ಧ್ವನಿಗೆ ಉದಾಹರಣೆ:

೭೮ ಚೂಅಂಕುರಾವಅಂಸಂ ಛಣಪಸರಮಹಗ್ಘಣಮಣಹರಸುರಾಮೋಅಮ್ ।
ಅಸಮಪ್ಪಿಅಂ ಪಿ ಗಹಿಅಂ ಕುಸುಮಸರೇಣ ಮಹುಮಾಸಲಚ್ಛಿಮುಹಮ್ ॥
—ಹರಿವಿಜಯಕಾವ್ಯ.

ಅಸಮರ್ಪಿತಮಾದೊಡಮಾ
ರಸಾಲಾಂಕುರಾವತಂಸಮಂ ಬಂಧುರಗಂ- |
ಧಸುರಭಿಯುಂ ಕೈಕೊಂಡಂ
ಕುಸುಮಶರಂ (ಸು)ಮಧುಮಾಸಲಕ್ಷ್ಮೀಮುಖಮಂ ||

'ಮಧುಮಾಸಲಕ್ಷ್ಮಿಯ ಮುಖವನ್ನು ಕುಸುಮಶರನು ಸಮರ್ಪಿತವಾಗದಿದ್ದರೂ ಕೈಕೊಂಡನು' ಎನ್ನುವಾಗ, 'ಅಸಮರ್ಪಿತಂ' ಎಂಬ ಸ್ಥಿತಿಮಾತ್ರ-ವಾಚಕವಾದ ಪದವು ಅರ್ಥಶಕ್ತಿಯಿಂದ ಕುಸುಮಶರನ ಬಲಾತ್ಕಾರವನ್ನು ಧ್ವನಿಸುತ್ತದೆ.[13]

---

12 'ಮಹಾಪ್ರಲಯ=(೧) 'ಮಹ'=ಉತ್ಸವದ 'ಅಪ್ರಲಯ'=ಸರ್ವನಾಶ.
(೨) ಯುಗಾಂತ್ಯದ ಪ್ರಳಯಕಾಲ.

ಕಲ್ಪಾಂತಕಾಲದಲ್ಲಿ ದಿಗ್ಗಜಗಳೆಲ್ಲಾ ನಿರ್ನಾಮವಾದಾಗ ಭೂಭಾರವನ್ನು ಹೊರಲು ನಾಗರಾಜನೊಬ್ಬನೇ ಹೇಗೆ ಸಮರ್ಥನೋ ಹಾಗೆ ಎಂಬುದು ಅರ್ಥಾಂತರ—ಲೋ

13 ಮುಖ=ಪ್ರಾರಂಭ ಮತ್ತು ವದನ. ಸುರಾಮೋದ=ದಿವ್ಯಗಂಧ ಮತ್ತು ಆಸವಗಂಧ. ವಸಂತೋದಯದಲ್ಲಿ ಮನ್ಮಥನು ಚಿತ್ತವಿಕಾರವನ್ನುಂಟುಮಾಡುವನೆಂಬ ವಿಷಯವು ಇಲ್ಲಿ ಕವಿಯ ಪ್ರೌಢೋಕ್ತಿಯಿಂದ ಅರ್ಥಾಂತರಕ್ಕೆ ವ್ಯಂಜಕವಾಗಿದೆ.

ಇಲ್ಲಿ ಕವಿನಿಬದ್ಧ-ವಕ್ತೃ-ಪ್ರೌಢೋಕ್ತಿ-ಸಿದ್ಧ ಧ್ವನಿಗೆ ಪದ-ವ್ಯಂಗ್ಯ, ವಾಕ್ಯ-ವ್ಯಂಗ್ಯಗಳ

ಈ ಪ್ರಭೇದದಲ್ಲಿ ವಾಕ್ಯ-ಧ್ವನಿಗೆ ಈಗಾಗಲೇ ಕೊಟ್ಟಿರುವ 'ಸಜ್ಜೇಇ ಸುರಹಿ ಮಾಸೋ'[14] ಎಂಬ ಶ್ಲೋಕವೇ ಉದಾಹರಣೆ. ಆ ಶ್ಲೋಕದಲ್ಲಿ 'ವಸಂತಮಾಸವು ಬಾಣಗಳನ್ನು ಸಜ್ಜುಗೊಳಿಸುವುದೇ ಹೊರತು ಮನ್ಮಥನ ಕೈಗಿನ್ನೂ ಕೊಡುವುದಿಲ್ಲ' ಎಂಬ ವಾಕ್ಯಾರ್ಥವು ಕವಿಯ ಪ್ರೌಢೋಕ್ತಿಯ ಪ್ರಭಾವದಿಂದ ಮಾತ್ರ ಸಿದ್ಧ ವಾದುದು. ಅದು ವಸಂತಸಮಯದ ಕಾಮೋದ್ದೀಪಕತೆಯನ್ನು ಧ್ವನಿಸುತ್ತದೆ.

ಸ್ವತಃ-ಸಂಭವಿಯೆಂಬ ಅರ್ಥಶಕ್ತಿ-ಮೂಲಧ್ವನಿಯ ಪ್ರಭೇದದಲ್ಲಿ ಪದ-ಧ್ವನಿಗೆ **ಉದಾಹರಣೆ :**

೭೯ ವಾಣಿಅಅ ಹತ್ಥಿದನ್ತಾ ಕುತೋ ಅಮ್ಹಾಣ ವಾಘಕಿತ್ತೀ ಅ।
ಜಾವ ಲುಲಿಆಲಅಮುಹೀ ಘರಮ್ಮಿ ಪರಿಸಕ್ಕಏ ಸುಣ್ಹಾ ॥

ಸೆಟ್ಟಿ, ನಮಗಿನ್ನೆಲ್ಲಿ ಆನೆದಂತಗಳಿರವು,
ಅಂತೆಯೇ ಹುಲಿಯ ತೊಗಲುಗಳ ಮಾತು।
ಮುಂಗುರುಳು ಕೆದರಿಕೊಂಡಿರುತಿರುವ ಸೊಸೆಯಿವಳು
ಮನೆಯಲ್ಲಿಯೇ ಸುಳಿವವರೆಗು ಇಂತು॥

ಇಲ್ಲಿ 'ಮುಂಗುರುಳು ಕೆದರಿಕೊಂಡಿರುವ ಮುಖವುಳ್ಳ' ಎನ್ನುವುದಕ್ಕೆ ಮೂಲದಲ್ಲಿ ಪ್ರಯುಕ್ತವಾಗಿರುವ 'ಲುಲಿಆಲಅಮುಹೀ' ಎಂಬ ಪದವು ಸ್ವತಃ ಸಂಭವಿಯಾಗಿರುವುದಲ್ಲದೆ[15] ಅರ್ಥಶಕ್ತಿಯಿಂದ ಆಕೆಯ ಸುರತಕ್ರೀಡಾಸಕ್ತಿಯನ್ನೂ ರಮಣನ ಸತತ ಸಂಭೋಗಜನಿತ ತನುಕ್ಷಯವನ್ನೂ ಧ್ವನಿಸುತ್ತದೆ.

ಇದೇ ಪ್ರಭೇದದ ವಾಕ್ಯಧ್ವನಿಗೆ ಉದಾಹರಣೆ: "ಸಿಹಿಪಿಂಛ...." ಎಂಬ

---

ಲಕ್ಷ್ಯಗಳನ್ನು ಪ್ರತ್ಯೇಕವಾಗಿ ಉದಾಹರಿಸಿಲ್ಲ 'ಸತ್ಯಂ ಮನೋರಮಾಃ ಕಾಮಾಃ ...' ಎಂಬುದು ಪದ-ವ್ಯಂಗ್ಯಕ್ಕೆ ಉದಾಹರಣೆ. (ಮುಂದೆ ಇದೇ ಉದ್ದ್ಯೋತದಲ್ಲಿ ೩೦ನೆಯ ಕಾರಿಕೆಯ ಕೆಳಗೆ ನೋಡಿ) 'ಬಡ ಇಂದ್ರಿಯಗಳನ್ನು ಬೈದಾಗುವುದೇನು ; ನಶ್ವರವಾದ ಜೀವನದ್ದೇ ದೋಷ'ವೆಂದು ಜೀವನದಲ್ಲಿ ವೈರಾಗ್ಯ ಇಲ್ಲಿ ವ್ಯಂಗ್ಯ. 'ಶಿಖರಿಣಿ....' (ಉದಾಹರಣ ಪದ್ಯ ೧೦, ಪುಟ-೪೦) ಎಂಬುದು ವಾಕ್ಯ-ವ್ಯಂಗ್ಯಕ್ಕೆ ಉದಾಹರಣೆ—ಲೋ.

14 ಉದಾಹರಣ ಪದ್ಯ ೫೩, ಪುಟ-೧೦೦

15 ಇಲ್ಲಿ ಬೇಕಾದರೆ ವಿಶೇಷಣವನ್ನು ಆಕೆಯ ಸ್ವಭಾವಮಾತ್ರಕ್ಕೆ ನಿರ್ದೇಶಕವೆಂದೂ ತಿಳಿಯಬಹುದು, ಹಸ್ತಿದಂತವನ್ನು ಬೇಡನು ತರಲು ಆತನ ಗರ್ವವೇ ಮೊದಲಾದ ಬೇರೆ ಕಾರಣಗಳನ್ನು ಕೂಡ ಹೇಳಬಹುದು. ಆದ್ದರಿಂದ ಇಲ್ಲಿ ವಾಕ್ಯಕ್ಕೆ ಅನುಪಪತ್ತಿಯಿದೆಯೆನ್ನುವಂತಿಲ್ಲ. ಅದಕ್ಕೇ ಈ ಧ್ವನಿ 'ಸ್ವತಃಸಂಭವಿ'—ಲೋ

ಈಗಾಗಲೇ ಉದಾಹೃತವಾಗಿರುವ ಶ್ಲೋಕ. [16] ಈ ವಾಕ್ಯದಿಂದಲೂ, ನವಿಲುಗರಿಯ ಕರ್ಣಪೂರದಿಂದ ಶೋಭಿಸುವ ಮತ್ತು ನವೋಢೆಯಾದ ಬೇಡರ ಯುವತಿಯೊಬ್ಬಳ ಸೌಭಾಗ್ಯಾತಿಶಯವು ಧ್ವನಿತವಾಗುತ್ತದೆ. ಅಷ್ಟೇ ಅಲ್ಲದೆ, ಆಕೆಯ ಸಂಭೋಗನಿರತನಾದ ರಮಣನಿಗೆ ಈಗ ನವಿಲನ್ನು ಹೊಡೆಯುವಷ್ಟು ಮಾತ್ರ ತ್ರಾಣವುಳಿದಿದೆಯೆಂದೂ ಸೂಚಿತವಾಗುವುದರಿಂದ, ಹಿಂದೆ ಮದುವೆಯಾದವರಿಗೆ ಮುತ್ತಿನ ಅಲಂಕಾರಗಳಿದ್ದರೂ —ಇದೇ ವ್ಯಾಧನೇ ಹಿಂದೆ ದೊಡ್ಡ ದೊಡ್ಡ ಆನೆಗಳನ್ನು ಹೊಡೆದು ಮುತ್ತುಗಳನ್ನು ತರುವಷ್ಟು ವಿರಾಮವುಳ್ಳವನಾಗಿದ್ದನು—ಇಂದು ಅವರ ದೌರ್ಭಾಗ್ಯಾತಿಶಯವು ಎಷ್ಟೆಂದು ಬಣ್ಣಿಸಿದಂತೆಯೂ ಆಗುತ್ತದೆ.

ಯಾರಾದರೂ ಹೀಗೆ ಆಕ್ಷೇಪಿಸಬಹುದು: 'ಧ್ವನಿಯ ಲಕ್ಷಣವನ್ನು ಹಿಂದೆ ಹೇಳುವಾಗ, ಕಾವ್ಯವಿಶೇಷವೇ ಧ್ವನಿಯೆನ್ನಲಾಯಿತು. ಆದುದರಿಂದ ಅದು ಪದದಲ್ಲಿ ಪ್ರಕಾಶಗೊಳ್ಳುವುದೆಂತು? ಕಾವ್ಯವಿಶೇಷವೆನ್ನುವುದು ಒಂದು ವಿಶಿಷ್ಟಾರ್ಥವನ್ನು ಬೋಧಿಸಬಲ್ಲ ಪದಸಮೂಹವೆಂದು ತಿಳಿಯಬೇಕಲ್ಲವೆ? ಒಂದು ಪದದ ಮೂಲಕ ಅದು ಪ್ರಕಾಶಿಸುವುದೆನ್ನುವಾಗ ಈ ಅರ್ಥವು ಸಮಂಜಸವಾಗುವುದಿಲ್ಲ. ಏಕೆಂದರೆ ಪದಗಳು ವಾಕ್ಯದ ಅರ್ಥಕ್ಕೆ ಸ್ಮಾರಕಗಳೇ ಹೊರತು ವಾಚಕಗಳಲ್ಲ.'

ಇದಕ್ಕೆ ಸಮಾಧಾನವಿಷ್ಟೆ: ಧ್ವನಿಯ ವ್ಯವಹಾರಕ್ಕೆ ವಾಚಕತ್ವವು ನಿಯಾಮಕವಾಗಿದ್ದರೆ ಮೇಲೆ ಹೇಳಿದ ದೋಷ ಬರಬಹುದಾಗಿತ್ತು. ಆದರೆ ವಸ್ತುತಃ ಹೀಗಿಲ್ಲ; [17] ವ್ಯಂಜಕತ್ವವು ಮಾತ್ರ ಧ್ವನಿವ್ಯವಹಾರಕ್ಕೆ ನಿಯಾಮಕವೆಂದು ನಿರ್ಣಯಿಸಲಾಗಿದೆ.

---

16 ಉದಾಹರಣ ಪದ್ಯ ೫೫, ಪುಟ-೧೦೧

17 ಪದವು ಪ್ರತೀಯಮಾನಾರ್ಥಕ್ಕೆ ವಾಚಕವಲ್ಲವೆಂಬ ಪೂರ್ವಪಕ್ಷಿಯ ವಾದವನ್ನು ಇಲ್ಲಿ 'ಛಲ' ಎಂದರೆ ಅನುದ್ದಿಷ್ಟಾರ್ಥದ ಕಲ್ಪನೆಯ ಮೂಲಕ ನಿರಾಕರಿಸಲಾಗಿದೆ " 'ವಾಚಕ'ವೆಂದು ಯಾರೆಂದರು? ವ್ಯಂಜಕವೆಂದಲ್ಲವೆ ನಾವು ಹೇಳಿದ್ದು?" ಎಂಬುದು ಈ ತರ್ಕದ ಪ್ರಕಾರ

ವಸ್ತುದೃಷ್ಟಿಯಿಂದ ನಿರಾಕರಣೆ ಮುಂದೆ ಬಂದಿದೆ ಪ್ರತಿವಾದಿ ಮತ್ತೆ ಹೇಳಬಹುದು 'ನಾನಿಲ್ಲಿ ಧ್ವನಿಯ ನಿರಾಕರಣೆಗೆ ಅವಾಚಕತ್ವವೆಂಬ ಕಾರಣವನ್ನು ಹೇಳುತ್ತಿಲ್ಲ. ಹೇಳುತ್ತಿರುವುದೆಂದರೆ ಕಾವ್ಯ ಮಾತ್ರವೇ ಧ್ವನಿ, ಪದಾದಿಗಳಲ್ಲ ಅರ್ಥಬೋಧಕವಾದ ಸಾಕಾಂಕ್ಷ ಪದಗಳ ಸಮೂಹವೇ ವಾಕ್ಯ, ವಾಕ್ಯಗಳ ಸಮುದಾಯವೇ ಕಾವ್ಯ ಹೀಗೆ ಸಮುದಾಯದಲ್ಲಿ ಧ್ವನಿಯಿರಬಹುದೇ ಹೊರತು, ಬಿಡಿ ಪದಗಳಲ್ಲಲ್ಲ' ಈ ವಾದಕ್ಕೆ ಉತ್ತರವಿಷ್ಟೆ: 'ನಾವು ಕೂಡ ಪದವೇ ಧ್ವನಿಯೆನ್ನುವುದಿಲ್ಲ ನಿಜವಾಗಿ ಧ್ವನಿಯಿರುವುದು ಸಮುದಾಯದಲ್ಲೇ. ಆದ್ದರಿಂದಲೇ ಪದ 'ಪ್ರಕಾಶ'ವಾದ ಧ್ವನಿಯೆಂದು ಪದಕ್ಕೆ ಗೌಣತ್ವವನ್ನು ಆರೋಪಿಸಿ ಶಬ್ದವನ್ನು ಪ್ರಯೋಗಿಸಲಾಗಿದೆ ಪದಕ್ಕೆ ಕಾವ್ಯಧ್ವನಿ(ಅಥವಾ ವಾಕ್ಯಧ್ವನಿ)ಯನ್ನು ಪ್ರಕಾಶಿಸುವ ಸಾಮರ್ಥ್ಯವುಂಟೆಂದು ಮಾತ್ರ ಇದರ ಅಭಿಪ್ರಾಯ'—ಲೋ.

ಅದೂ ಎಲ್ಲದೆ, ರಮಣೀಯತೆಯಿಂದೊಡಗೂಡಿದ ಬೇರೆ ಬೇರೆ ಅವಯವಗಳೆಲ್ಲವುಗಳ ಸಮುದಾಯವೇ ಶರೀರಸೌಷ್ಠವಕ್ಕೆ ನಿಜವಾದ ಕಾರಣವಾದರೂ, ಆ ಪ್ರತ್ಯೇಕಾವಯವಗಳಲ್ಲಿ ರಮಣೀಯತೆಯುಂಟೆಂದು ನಾವು ರೂಢಿಯಲ್ಲಿ ಹೇಳುವುದಿಲ್ಲವೆ? ಹಾಗೆಯೇ ಕಾವ್ಯಗಳಲ್ಲಿಯೂ ಕೂಡ, ಇದೇ ಅನ್ವಯ–ವ್ಯತಿರೇಕ ನಿಯಮವನ್ನು ಮನಸ್ಸಿನಲ್ಲಿಟ್ಟು, ಪದಸಮುದಾಯದಿಂದ ಬರುವ ರಮಣೀಯತೆಗೆ ಪ್ರತ್ಯೇಕಪದಗಳೂ ವ್ಯಂಜಕಗಳೆಂದು ತಿಳಿದು, ಧ್ವನಿ ವ್ಯವಹಾರವನ್ನು ನಿರ್ಣಯಿಸುವೆವಾದುದರಿಂದ ಯಾವ ವಿರೋಧಕ್ಕೂ ಅವಕಾಶವಿಲ್ಲ.

ಇದನ್ನೇ ಕೆಳಗಿನ ಪರಿಕರಶ್ಲೋಕಗಳು ಸಂಗ್ರಹವಾಗಿ ಪ್ರತಿಪಾದಿಸುತ್ತವೆ;

**ಅನಿಷ್ಟಸ್ಯ ಶ್ರುತಿರ್ಯದ್ವದಾಪಾದಯತಿ ದುಷ್ಟತಾಮ್ ।**
**ಶ್ರುತಿದುಷ್ಟಾದಿಷು ವ್ಯಕ್ತಂ ತದ್ವದಿಷ್ಟಸ್ಮೃತಿರ್ಗುಣಮ್ ॥**
**ಪದಾನಾಂ ಸ್ಮಾರಕತ್ವೇಽಪಿ ಪದಮಾತ್ರಾವಭಾಸಿನಃ ।**
**ತೇನ ಧ್ವನೇಃ ಪ್ರಭೇದೇಷು ಸರ್ವೇಷ್ವೇವಾಸ್ತಿ ರಮ್ಯತಾ ॥**
**ವಿಚ್ಛಿತ್ತಿಶೋಭಿನೈಕೇನ ಭೂಷಣೇನೇವ ಕಾಮಿನೀ ।**
**ಪದದ್ಯೋತ್ಯೇನ ಸುಕವೇರ್ಧ್ವನಿನಾ ಭಾತಿ ಭಾರತೀ ॥**

'ಶ್ರುತಿದುಷ್ಟ'ವೇ ಮೊದಲಾದ ದೋಷಗಳಲ್ಲಿ ಉದ್ದೇಶವಿರದಿದ್ದರೂ ಬರುವ ಅಸುಂದರಾರ್ಥದ ಸ್ಮಾರಕತ್ವವು ಹೇಗೆ ದೋಷವೆನಿಸುವುದು ವ್ಯಕ್ತವೋ, ಹಾಗೆಯೇ ಉದ್ದೇಶಪೂರ್ವಕವಾಗಿ ಸುಂದರಾರ್ಥದ ಸ್ಮಾರಕತ್ವವಿರುವುದಾದರೆ ಅದನ್ನು ಗುಣವೆನ್ನಬೇಕು. ಪದಗಳು ಕೇವಲ ಸ್ಮಾರಕಗಳೇ ಆದರೂ, ಪದದಿಂದ ಪ್ರಕಾಶಿತವಾಗುವ ಧ್ವನಿಯು ಎಲ್ಲ ಪ್ರಭೇದಗಳಲ್ಲಿಯೂ ರಮಣೀಯತೆಯಿದ್ದೇ ಇರುವುದು. ರಮಣೀಯವಾದ ಕಾಂತಿಯಿಂದ ಕೂಡಿದ ಒಂದೇ ಒಂದು ಆಭರಣದಿಂದ ಶೋಭಿಸುವ ಕಾಮಿನಿಯಂತೆ, ಸುಕವಿಯ ವಾಣಿಯು ಪದಪ್ರಕಾಶಿತವಾದ ಧ್ವನಿಯಿಂದ ಶೋಭಿಸುತ್ತದೆ.

**ಕಾರಿಕೆ**

**ಯಸ್ತ್ವಲಕ್ಷ್ಯಕ್ರಮವ್ಯಂಗ್ಯೋ ಧ್ವನಿರ್ವರ್ಣಪದಾದಿಷು ।**
**ವಾಕ್ಯೇ ಸಂಘಟನಾಯಾಂ ಚ ಸ ಪ್ರಬಂಧೇಽಪಿ ದೀಪ್ಯತೇ ॥೨॥**

ಆದರೆ ಅಲಕ್ಷ್ಯಕ್ರಮವೆನಿಸುವ ಧ್ವನಿಯು ಅಕ್ಷರ, ಪದವೇ ಮೊದಲಾದುವು, ವಾಕ್ಯ, ಸಂಘಟನೆ, ಪ್ರಬಂಧ[18]— ಈ ಎಲ್ಲವುಗಳಲ್ಲೂ ಪ್ರಕಾಶಿತವಾಗುತ್ತದೆ.

---

18 ವರ್ಣಸಮುದಾಯವೇ ಪದ, ಪದಗಳ ಸಮುದಾಯವೇ ವಾಕ್ಯ ಸಂಘಟನೆಯು ಪದಗತ ಹಾಗೂ ವಾಕ್ಯಗತವೆಂದು ಎರಡು ಬಗೆಯಾಗಿರುತ್ತದೆ. ಸಂಘಟಿತ ವಾಕ್ಯಗಳ ಸಮು

ವೃತ್ತಿ

ಇವುಗಳಲ್ಲಿ ಅಕ್ಷರಗಳಿಗೆ ಅರ್ಥವಿಲ್ಲದ ಕಾರಣ ಅವು ವ್ಯಂಜಕಗಳಾಗುವುದು ಅಸಂಭವವೆಂಬ ಆಶಂಕೆಗೆ ಮುಂದಿನ ಕಾರಿಕೆಯು ಸಮಾಧಾನವನ್ನು ಹೇಳುತ್ತದೆ.

ಕಾರಿಕೆ

ಶಷೌ ಸರೇಫಸಂಯೋಗೋ ಢಕಾರಶ್ಚಾಪಿ ಭೂಯಸಾ ।
ವಿರೋಧಿನಃ ಸ್ಯುಃ ಶೃಂಗಾರೇ ತೇನ ವರ್ಣಾ ರಸಚ್ಯುತಃ ॥೩॥
ತ ಏವ ತು ನಿವೇಶ್ಯನ್ತೇ ಬೀಭತ್ಸಾದೌ ರಸೇ ಯದಾ ।
ತದಾ ತಂ ದೀಪಯನ್ತ್ಯೇವ ತೇನ ವರ್ಣಾ ರಸಚ್ಯುತಃ ॥೪॥

ಹೆಚ್ಚಾಗಿ ಶಕಾರ ಷಕಾರಗಳು, ರೇಫದೊಡನೆ ಸಂಯುಕ್ತವಾದ ಅಕ್ಷರಗಳು, ಢಕಾರ—ಇವೆಲ್ಲವೂ ಶೃಂಗಾರರಸದಲ್ಲಿ ವಿರೋಧಿಗಳಾಗುವುವು.[19] ಆದುದರಿಂದ ಅಕ್ಷರಗಳಿಗೆ ರಸವನ್ನು ಧ್ವನಿಸುವ ಶಕ್ತಿಯುಂಟು.

ಇವೇ ಅಕ್ಷರಗಳೇ ಬೀಭತ್ಸವೇ ಮೊದಲಾದ ರಸಗಳಲ್ಲಿ ಪ್ರಯುಕ್ತವಾದಾಗ ರಸಪುಷ್ಟಿಯನ್ನು ತರುತ್ತವೆ. ಆದುದರಿಂದಲೂ ಅಕ್ಷರಗಳಿಗೆ ರಸವ್ಯಂಜಕತ್ವವುಂಟು.

ವೃತ್ತಿ

ಈ ಎರಡು ಶ್ಲೋಕಗಳಲ್ಲಿ ಅನ್ವಯ ವ್ಯತಿರೇಕಗಳಿಂದ ಅಕ್ಷರಗಳಿಗೆ ವ್ಯಂಜಕತ್ವ ವಿರುವುದನ್ನು ತೋರಿಸಿದಂತಾಯಿತು.[20]

---

ದಾಯವೇ ಪ್ರಬಂಧ ಈ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟು ಇವನ್ನು ಈ ಅನುಕ್ರಮದಲ್ಲಿ ಹೇಳಲಾಗಿದೆ—ಲೋ

19 ರೇಫಸಂಯೋಗ ಎಂದರೆ—ರ್ಕ, ಹ್ರ, ದ್ರ, ಮುಂತಾದುವು ಪರುಷಾವೃತ್ತಿಯು ಶೃಂಗಾರರಸಕ್ಕೆ ವಿರೋಧಿಯಾದ ಕಾರಣ, ಈ ವರ್ಣಗಳು ಹೆಚ್ಚಾಗಿ ಪ್ರಯುಕ್ತವಾದಾಗ ರಸಗಳನ್ನು ಸುರಿಸಲಾರವು. ಅಥವಾ ವರ್ಣಗಳು ಶೃಂಗಾರಾದಿರಸಗಳಿಂದ ದೂರವಾಗುವವೆಂದೂ ಅರ್ಥಮಾಡಬಹುದು. ಇದು ವ್ಯತಿರೇಕ ದೃಷ್ಟಾಂತ (negative example).

20 ಇಲ್ಲಿ ಅನ್ವಯದೃಷ್ಟಾಂತ (positive example) ವನ್ನು ಹೇಳಿದೆ. ಶೃಂಗಾರರಸವನ್ನು ಚಿತ್ರಿಸುವಾಗ ಯಶಸ್ಕಾಮನಾದ ಕವಿ ಶಷಾದಿ ವರ್ಣಗಳನ್ನು ಬಿಡಬೇಕೆನ್ನುವುದು ಉಪದೇಶದ ಮುಖ್ಯಾಂಶವಾದ್ದರಿಂದ, ಕಾರಿಕೆಯಲ್ಲಿ ಮೊದಲು ವ್ಯತಿರೇಕವನ್ನು ಹೇಳಿದೆ. ಆದರೆ ಎಲ್ಲೆಡೆಯಲ್ಲಿಯೂ ಬಿಡಬೇಕೆಂದಲ್ಲ; ಬೀಭತ್ಸಾದಿಗಳಲ್ಲಿ ಪ್ರಯೋಗಿಸಬಹುದೆಂದು ಅನಂತರ ಅನ್ವಯವನ್ನು ಹೇಳಿದೆ. ಆದರೆ ವೃತ್ತಿಯಲ್ಲಿ ಮೊದಲು ಅನ್ವಯ, ಆಮೇಲೆ ವ್ಯತಿರೇಕ, ಎಂಬ ತರ್ಕಶೈಲಿಯನ್ನು ಅನುಸರಿಸಿ ವಿವರಿಸಿದೆ.

ಅಲಕ್ಷ್ಯಕ್ರಮವ್ಯಂಗ್ಯಧ್ವನಿಯ ಪದದಲ್ಲಿ ವ್ಯಂಜಕತ್ವಕ್ಕೆ[21] ಉದಾಹರಣೆ :—

೮೦ ಉತ್ಕಂಪಿನೀ ಭಯಪರಿಸ್ಖಲಿತಾಂಶುಕಾಂತಾ
ತೇ ಲೋಚನೇ ಪ್ರತಿದಿಶಂ ವಿಧುರೇ ಕ್ಷಿಪನ್ತೀ ।
ಕ್ರೂರೇಣ ದಾರುಣತಯಾ ಸಹಸೈವ ದಗ್ಧಾ
ಧೂಮಾನ್ಧಿತೇನ ದಹನೇನ ನ ವೀಕ್ಷಿತಾಸಿ ॥[22]

---

ಒಟ್ಟು ತಾತ್ಪರ್ಯವಿಷ್ಟು :—ನಿಜವಾಗಿ ವಿಭಾವ, ಅನುಭಾವ, ವ್ಯಭಿಚಾರಿಗಳ ಪ್ರತೀತಿ ಸಂಪತ್ತೇ ರಸಾಸ್ವಾದಕ್ಕೆ ನಿಯಾಮಕ ಆದರೂ ವಿಭಾವಾದಿಗಳು ರಸಪೋಷಕವಾಗಲು ವಿಶಿಷ್ಟ ಶ್ರುತಿಯ ವರ್ಣಾದಿಗಳೇ ಬೇಕಾಗುತ್ತವೆಂಬುದು ಸ್ವಾನುಭವವೇದ್ಯ ಆದ್ದರಿಂದ ಕಿವಿಗೆ ಮಾತ್ರ ತಿಳಿಯುವ ವರ್ಣಗುಣಗಳು—ಮೃದುತ್ವ, ಪುರುಷತ್ವ ಇತ್ಯಾದಿ—ಅರ್ಥನಿರಪೇಕ್ಷವಾಗಿಯೇ ರಸಾಸ್ವಾದಕ್ಕೆ ಸಹಕಾರಿಗಳಾಗುತ್ತವೆ. ಈ ಸಹಕಾರಿತ್ವವನ್ನು ತೋರಿಸುವುದಕ್ಕಾಗಿಯೇ (೨ನೆಯ) ಕಾರಿಕೆಯಲ್ಲಿ 'ವರ್ಣಪದಾದಿಷು' ಎನ್ನುವಾಗ ನಿಮಿತ್ತ ಸಪ್ತಮಿಯನ್ನು ಬಳಸಲಾಗಿದೆ. ವರ್ಣಗಳಿಂದಲೇ ನೇರವಾಗಿ ರಸಾಭಿವ್ಯಕ್ತಿಯಿಲ್ಲ, ವಿಭಾವಾದಿಸಂಯೋಗದಿಂದ ಮಾತ್ರ ರಸನಿಷ್ಪತ್ತಿ. ಇದನ್ನು ಈಗಾಗಲೇ ಎಷ್ಟೋ ಬಾರಿ ಹೇಳಿಯಾಯಿತು ಶ್ರೋತ್ರಮಾತ್ರವೇದ್ಯವಾದ ಅಂಶ ಕೂಡ ರಸಪುಷ್ಟಿಗೆ ಪ್ರಯೋಜಕವೆಂಬುದನ್ನು ಪದರೂಪವಲ್ಲದ ಸಂಗೀತ ಧ್ವನಿಯಲ್ಲಿ ನೋಡಬಹುದು ತಬಲದ ತಾಳಕ್ಕೆ ಕೊಡುವ ನಾದ, ಅಥವಾ ಬಾಯಿ ಮುಚ್ಚಿ ಮೂಗಿನಿಂದಲೇ ಉಚ್ಚರಿಸುವ ಹಾಡುಗಳನ್ನು ಇಲ್ಲಿ ಉದಾಹರಿಸಬಹುದು—ಲೋ.

21 ಪದದ ಸಹಕಾರಿತ್ವವಿದ್ದರೆ ಎಂದರ್ಥ ವಸ್ತುತಃ ವಿಭಾವಾದಿಯಿಂದಲೇ ರಸಪ್ರತೀತಿ ಆದರೆ ಆ ವಿಭಾವಾದಿಗಳು ವಿಶಿಷ್ಟಪದಗಳಲ್ಲಿ ಅರ್ಪಿತವಾದಾಗ ರಸಚಮತ್ಕಾರವನ್ನು ತರುತ್ತಿದ್ದರೆ ಆಗ ಪದಕ್ಕೆ ಆ ಸಾಮರ್ಥ್ಯವನ್ನು ಕಲ್ಪಿಸಲಾಗುತ್ತದೆ—ಲೋ.

22 ವಾಸವದತ್ತೆ ಸುಟ್ಟು ಸತ್ತಳೆಂಬ ಸುದ್ದಿಯನ್ನು ಕೇಳಿ, ತೀವ್ರ ಶೋಕದಿಂದ ಗೋಳಾಡುತ್ತಿರುವ ವತ್ಸರಾಜನ ವಾಕ್ಯವಿದು ಇಷ್ಟಜನರ ವಿನಾಶದಿಂದ ಹುಟ್ಟುವುದೇ ಶೋಕ ಆ ವಿನಷ್ಟ ಪ್ರೇಯಸಿಯ ಹುಬ್ಬು, ಕಡೆಗಣ್ಣು ಮುಂತಾದ ಒಂದೊಂದೂ ಹಿಂದೆ ರತಿಗೆ ವಿಭಾವವಾಗಿದ್ದುದು, ಈಗ ಸತ್ತಮೇಲೆ ಸ್ಮೃತಿ ಪಥದಲ್ಲಿ ತೇಲಿ ಬಂದು ನಿರಪೇಕ್ಷಭಾವವನ್ನೇ ಪೋಷಿಸುತ್ತಾ, ಕರುಣರಸವನ್ನು ಉದ್ದೀಪಿಸುತ್ತದೆ

'ತೇ ಲೋಚನೇ' ಎನ್ನುವಾಗ ಆಕೆಯ ಕಣ್ಣುಗಳನ್ನು ಕುರಿತು ನಾಯಕನ ಮನಸ್ಸಿನಲ್ಲಿ ಮಾತ್ರ ಮೂಡುವ, ವರ್ಣನೆಗೆ ಅಶಕ್ಯವಾದ, ಅನಂತ ಗುಣಗಣಗಳ ಧ್ವನಿಯಿರುವುದರಿಂದ ರಸಾಭಿವ್ಯಕ್ತಿಗೆ ಅಸಾಧಾರಣವಾದ ನಿಮಿತ್ತತ್ವವನ್ನು ಆ ಪದ ಪಡೆದಿದೆ. ಆದ್ದರಿಂದ ಏನೇನೋ ಪೂರ್ವಪಕ್ಷ ಸಮಾಧಾನಗಳನ್ನು ಇತರರು ಮಾಡಿರುವುದೆಲ್ಲ ತಪ್ಪು. ಪೂರ್ವಪಕ್ಷ—'ಪೂರ್ವನಿರ್ದೇಶಕ ಸರ್ವನಾಮವಾದ 'ತತ್' ಶಬ್ದಕ್ಕೆ ಇಷ್ಟೆಲ್ಲ ಸಾಮರ್ಥ್ಯವೆಂತು?' ಉತ್ತರ—'ಇಲ್ಲಿ ಪರಾಮರ್ಶಕನು ರಸಾವೇಶದಲ್ಲಿರುವವನು' ಇವೆರಡಕ್ಕೂ ಇಲ್ಲಿ ಪ್ರಸಕ್ತಿಯೇ ಇಲ್ಲ. ಎಲ್ಲಿ ಮೊದಲು ಹೇಳಿದ್ದನ್ನೇ ಕುರಿತು ಮತ್ತೆ ಅನ್ವಯಿಸಿ ಹೇಳುವಾಗ ಯತ್-ತತ್ ಶಬ್ದಗಳು ಬರುತ್ತವೋ ಅಲ್ಲಿ

ನಡುಗುತೆ ನೀನಿರಲ್ಕೆ ಭಯದಿಂದೆ ಪರಿಸ್ಖಲಿತಾಂಶುಕಾಂತೆಯಾ–
ಗೆಡೆಗಳನೆಲ್ಲ ದಿಕ್ಕುಗಳ ತೀವಿರೆ ದೈನ್ಯದೊಳಾ ವಿಲೋಕನಂ ।
ಬಿಡದೆಯೆ ಸುಟ್ಟನಗ್ನಿ ದಯೆಯಿಲ್ಲದೆ ದಾರುಣಮಾಗಿ ಧೂಮಮಂ-
ದೆಡೆವಿಡದಂತೆ ಬಂದು ಕುರುಡಾಗಿಸೆ ಕಾಣದೆವೋಗುತೇಸುಮಂ ॥

ಇಲ್ಲಿ 'ಆ' ಎಂಬ ಪದವು ರಸಮಯವಾಗಿರುವುದು ಸಹೃದಯರಿಗೆ ಸ್ಫುಟವಾಗಿಯೇ ಕಾಣಿಸುತ್ತದೆ.

ಪದದ ಅವಯವದಲ್ಲಿ ಬರುವ ಧ್ವನಿಗೆ ಉದಾಹರಣೆ :—

೮೧ ವ್ರೀಡಾಯೋಗಾನ್ನತವದನಯಾ ಸನ್ನಿಧಾನೇ ಗುರೂಣಾಂ
ಬದ್ಧೋತ್ಕಂಪಂ ಕುಚಕಲಶಯೋರ್ಮನ್ಯುಮನ್ತರ್ನಿಗೃಹ್ಯ ।
ತಿಷ್ಠೇತ್ಯುಕ್ತಂ ಕಿಮಿವ ನ ತಯಾ ಯತ್ಸಮುತ್ಸೃಜ್ಯ ಬಾಷ್ಪಂ
ಮಯ್ಯಾಸಕ್ತಶ್ಚಕಿತಹರಿಣೀಹಾರಿನೇತ್ರತ್ರಿಭಾಗಃ ॥

ಗುರುಸಾನ್ನಿಧ್ಯದೊಳಾಕೆ ನಾಣ ಕತದಿಂ ತನ್ನಾನನಂ ತಗ್ಗಿರಲ್
ಭರದಿಂ ಕುಂಭಕುಚಂಗಳಂ ನಡುಗಿಪಾ ದುಃಖಾಳಿಯಂ ನುಂಗುತಾ- ।
ದರದಿಂದೆನ್ನೊಳೆ ಕಣ್ಣ ನೀರ ಮಿಡಿಯುತ್ತುಂ ನೆಟ್ಟ ವಿತ್ರಸ್ತಮಾ
ಹರಿಣೀನೇತ್ರೆಯಪಾಂಗದೋರೆಕುಡಿಯೇ ನಿಲ್ಲೆಂದು ಪೇಳಿಲ್ಲಮೇಂ ॥

ಮೇಲೆ ಮೂಲಶ್ಲೋಕದಲ್ಲಿ (ಕಡೆಗೆ ಬರುವ ದೀರ್ಘಸಮಾಸವು ಒಂದೇ ಪದ, ಆ ಸಮಾಸಪದದ ಅವಯವವಾದ) 'ತ್ರಿಭಾಗಃ' ಎಂಬಲ್ಲಿ ವ್ಯಂಜಕತ್ವವಿದೆ.[23] (ಹಾಗೆಯೇ ಕನ್ನಡದ ಭಾಷಾಂತರದಲ್ಲಿ 'ಓರೆಕುಡಿ' ಎಂಬ ಪದಭಾಗದಲ್ಲಿ ವ್ಯಂಜಕತ್ವ ವಿದೆ.)

---

ಮಾತ್ರ, ಅವು ಪೂರ್ವಪರಾಮರ್ಶಕವಾದ ಸರ್ವನಾಮಗಳು ಆದರೆ ನಿಮಿತ್ತ ವಿಶೇಷದಿಂದ ಸ್ಮರಣವಿಶೇಷವನ್ನು ತೋರಿಸಲು ಬಂದಾಗ ತತ್ ಶಬ್ದಕ್ಕೆ ಪೂರ್ವಪರಾಮರ್ಶಕತ್ವವೇ ಇಲ್ಲ, ಉದಾಹರಣೆ 'ಆ ಘಟ'. ರಸಿಕತೆ ಸಾಲದ ಪಂಡಿತಂಮನ್ಯರೊಡನೆ ವಿವಾದ ಅನಗತ್ಯ.

ಸಕಲ ವಿಲಾಸಗಳಿಗೂ ನೆಲೆಯಾದ ಆ ಕಣ್ಣುಗಳನ್ನು ನಿಸ್ಸಹಾಯಳಾಗಿ 'ಕಾಪಾಡುವವರು ಯಾರು ? ಪ್ರಿಯತಮನೆಲ್ಲಿ ?' ಎಂದು ದಿಕ್ಕುದಿಕ್ಕಿಗೂ ತಿರುಗಿಸುವ ಅವಸ್ಥೆ ಶೋಕಕ್ಕೆ ಅತ್ಯಂತ ಉದ್ದೀಪಕವಾಗಿದೆ—ಲೋ.

23 'ಗುರುಜನರಿದ್ದರೂ ಲೆಕ್ಕಿಸದೆ ಆಕೆಯು ಹಾಗೂ ಹೀಗೂ ನನ್ನ ಕಡೆಗೆ ಅಭಿಲಾಷೆ, ಪ್ರಣಯಕೋಪ, ದೈನ್ಯ, ಗರ್ವಗಳನ್ನು ಸೂಚಿಸುವ ನೋಟವನ್ನು ಬೀರಿದಳು' ಎಂಬುದರ ಸ್ಮರಣೆಯಿರುವುದರಿಂದ, ಇಬ್ಬರೂ ಜೀವಿಸಿರುವಾಗ ಒದಗುವ ಪ್ರವಾಸವಿಪ್ರಲಂಭಕ್ಕೆ 'ತ್ರಿಭಾಗ' ಶಬ್ದವು ಸ್ಫುಟವಾಗಿ ಉದ್ದೀಪಕವಾಗಿದೆ—ಲೋ.

ವಾಕ್ಯರೂಪವಾದ[24] ಅಲಕ್ಷ್ಯಕ್ರಮ-ವ್ಯಂಗ್ಯ-ಧ್ವನಿಯು 'ಶುದ್ಧ'[25] ಮತ್ತು 'ಅಲಂಕಾರ ಸಂಕೀರ್ಣ'ವೆಂದು ಎರಡು ಬಗೆ. 'ಶುದ್ಧ'ವೆನಿಸುವ ಧ್ವನಿಗೆ **ರಾಮಾಭ್ಯುದಯ***ದಲ್ಲಿ ಬರುವ ಈ ಶ್ಲೋಕವೇ ಉದಾಹರಣೆ :—

೮೨ ಕೃತಕಕುಪಿತೈರ್ಬಾಷ್ಪಾಂಭೋಭಿಃ ಸದೈನ್ಯವಿಲೋಕಿತೈ-
ರ್ವನಮಪಿ ಗತಾ ಯಸ್ಯ ಪ್ರೀತ್ಯಾ ಧೃತಾಪಿ ತಥಾಂಬಯಾ ।
ನವಜಲಧರಶ್ಯಾಮಾಃ ಪಶ್ಯನ್ ದಿಶೋ ಭವತೀಂ ವಿನಾ
ಕಠಿನಹೃದಯೋ ಜೀವತ್ಯೇವ ಪ್ರಿಯೋ ಸ ತವ ಪ್ರಿಯಃ ॥

ತಡೆಯುತ್ತಿರ್ದೊಡಮಬ್ಬೆ, ನೀನು ವನಮಂ ಪ್ರೇಮಾಸ್ಥೆಯಿಂದಾವನಾ
ನಡೆದೈತಂದೆಯೊ ದೈನ್ಯದಿಂ ಪ್ರಣಯಕೋಪೋನ್ಮೇಷದಿಂ ಕಣ್ಣ ನೀ- ।
ರ್ವಿಡಿಯುತ್ತಿರ್ದ ವಿಲೋಕನಂಬೆರಸು, ತಾನಾತಂ ಪ್ರಿಯಂ ನಿರ್ದಯಂ
ನಡೆನೋಡುತ್ತೆ ಪಯೋದನೀಲದಿಶೆಯಂ ನೀಂ ಬಿಟ್ಟೊಡಂ ಜೀವಿಪಂ ॥

ಈ ಇಡಿಯ ವಾಕ್ಯವೇ ಪರಸ್ಪರಾನುರಾಗದ ಪರಿಪೋಷವನ್ನು ತೋರಿಸುವುದರ ಮೂಲಕ ರಸ-ಧ್ವನಿಗೆ ಆಶ್ರಯವಾಗಿದೆ.[26]

---

24 ಇಲ್ಲಿ ಪ್ರಥಮಾವಿಭಕ್ತಿಯ ನಿರ್ದೇಶಕ್ಕೆ ಅಭಿಪ್ರಾಯವಿಷ್ಟು:—ವರ್ಣ, ಪದ, ಪದ ಭಾಗಗಳೆಲ್ಲ ಇದ್ದಾಗಲೇ ಅಲಕ್ಷ್ಯಕ್ರಮ ವ್ಯಂಗ್ಯವು ಪ್ರಕಾಶಿಸುತ್ತದೆಯಾದರೂ, ಅದು ಸಮಸ್ತ ಕಾವ್ಯವ್ಯಾಪಕವಾಗಿಯೇ ಪ್ರಕಾಶಿಸುತ್ತದೆ, ವಿಭಾವಾದಿ ಸಂಯೋಗವೇ ಅದರ ಪ್ರಾಣವಾದ್ದರಿಂದ. ಆದ್ದರಿಂದ ವರ್ಣಾದಿಗಳಿಗೆ ಕೇವಲ ನಿಮಿತ್ತತ್ವ ಮಾತ್ರ, ಆದರೆ ಇವುಗಳಂತೆ ವಾಕ್ಯವು ಅಲಕ್ಷ್ಯಕ್ರಮ ವ್ಯಂಗ್ಯಕ್ಕೆ ಕೇವಲ ನಿಮಿತ್ತವಷ್ಟೇ ಅಲ್ಲ, ಸಮಗ್ರ ವಿಭಾವಾದಿಗಳ ಪ್ರತೀತಿಯಲ್ಲೇ ಅದು ಪರ್ಯವಸನ್ನವಾಗಿರುತ್ತದೆಯಾಗಿ. ಆದ್ದರಿಂದ ವಾಕ್ಯವು ರಸಮಯವಾಗಿಯೇ ಕಾಣುತ್ತದೆ, ಬರಿಯ ರಸನಿಮಿತ್ತವೆಂದಲ್ಲ. ಆದ್ದರಿಂದ ಕಾರಿಕೆಯಲ್ಲಿ ವಾಕ್ಯದ ವಿಷಯ ಹೇಳುವಾಗ ನಿಮಿತ್ತ ಸಪ್ತಮಿ ಕಾಣುವುದಿಲ್ಲ

25 ಶುದ್ಧವೆಂದರೆ ಯಾವ ಅರ್ಥಾಲಂಕಾರಗಳೊಡನೆಯೂ ಮಿಶ್ರಿತವಾಗದೆ ಇರುವುದೆಂದರ್ಥ.

* ಈ ಹೆಸರಿನ ನಾಟಕವನ್ನು ಬರೆದವನು ಯಶೋವರ್ಮನೆಂಬ ರಾಜ. (ಇವನು ಭವಭೂತಿಯ ಸಮಕಾಲೀನ)

26 ಅಷ್ಟಷ್ಟು ಪ್ರಕಾರವಾಗಿ ತಾಯಿ ತಡೆದರೂ, ನನ್ನ ಮೇಲಿನ ಅನುರಾಗದ ಭರದಲ್ಲಿ ಹಿರಿಯರ ಮಾತನ್ನು ಕೂಡ ನೀನು ಮೀರಿದೆ. 'ಪ್ರಿಯೆ', 'ಪ್ರಿಯ' ಎನ್ನುವಾಗ ಒಬ್ಬರಿಗೊಬ್ಬರು ಜೀವವಾಗಿರುವಂತಹ ಅತಿಶಯ ರತಿಯು (ಸ್ಥಾಯಿಭಾವ) ಧ್ವನಿತವಾಗುತ್ತದೆ. ಹಿಂದೆಂದೂ ಸಹಿಸಿ ಕಾಣದ ಹೊಸ ಮಳೆ ಮೋಡದ ಉಲ್ಲೇಖವು ವಿಪ್ರಲಂಭಕ್ಕೆ ಉದ್ದೀಪಕವಾದ ವಿಭಾವ.

'ಅಲಂಕಾರಾಂತರ–ಸಂಕೀರ್ಣ'ವೆಂಬ ಬಗೆಗೆ ಉದಾಹರಣೆ :—

೬೩ ಸ್ಮರನವನದೀಪೂರೇಣೋಢಾಃ ಪುನರ್ಗುರುಸೇತುಭಿ-
ರ್ಯದಪಿ ವಿಧೃತಾಃ ತಿಷ್ಠನ್ತ್ಯಾರಾದಪೂರ್ಣಮನೋರಥಾಃ ।
ತದಪಿ ಲಿಖಿತಪ್ರಖ್ಯೈರಂಗೈಃ ಪರಸ್ಪರಮುನ್ಮುಖಾ
ನಯನನಲಿನೀನಾಲಾನೀತಂ ಪಿಬನ್ತಿ ರಸಂ ಪ್ರಿಯಾಃ ॥

ಮದನನದೀಪ್ರವಾಹದೊಳು ತೇಲುತೆ ಮೇಣ್ಗುರುಸೇತುವಿಂದೆ ತ–
ವ್ಮೈರ್ದೆ ತಡೆದಂತಿರಾಗೆ ಮುರಿದಾಸೆಯಿನಂತೆಯೆ ನಿಲ್ವರಾದೊಡಂ ।
ಬಿದಿಯವರಂಗಮಂ ಬರೆದವೋಲಿರೆ ಮತ್ತೆ ಪರಸ್ಪರೋನ್ಮುಖಾ–
ಸ್ಪವರೆನೆ ನೇತ್ರಪಂಕಜದ ನಾಳಗಳಿಂ ರಸಮಂ ಕುಡಿವರ್ ಸುರಾಗಿಗಳ್ ॥

ಇಲ್ಲಿ ವ್ಯಂಜಕತ್ವವನ್ನೊಳಕೊಂಡ ರೂಪಕಾಲಂಕಾರದ[27] ಮೂಲಕ ರಸವು ಅಲಂಕೃತವಾಗಿ[28] ಕಂಗೊಳಿಸುತ್ತದೆ.

ಅಲಕ್ಷ್ಯಕ್ರಮ–ವ್ಯಂಗ್ಯವಾದ ಧ್ವನಿಯು 'ಸಂಘಟನೆ'ಯಲ್ಲಿಯೂ[29] ಪ್ರಕಾಶಿ

---

'ಜೀವತ್ಯೇವ' ಎಂಬಲ್ಲಿ ಸಾಪೇಕ್ಷಭಾವ (=ಸಮಾಗಮದ ಪ್ರತ್ಯಾಶೆ) ಸ್ಪಷ್ಟವಿರುವುದು ಕರುಣಕ್ಕೆ ಅವಕಾಶವಿಲ್ಲವೆಂಬುದನ್ನು ತೋರಿಸುವುದಕ್ಕಾಗಿ

27 ಸ್ಮರನೇ ಹೊಸ ನದೀಪ್ರವಾಹ, ರಭಸವಾಗಿ ಹೊರಟಿರುವುದರಿಂದ, ಅವನಿಂದ ಪರಸ್ಪರ ಅಭಿಮುಖವಾಗಿ ಕೊಚ್ಚಲ್ಪಡುತ್ತಾರೆ ಕಾಮಿಗಳು. ಅತ್ತೆ, ಮಾವ, ಮುಂತಾದ ಹಿರಿಯರೇ ('ಗುರು') ಅಡ್ಡಬರುವ ಸೇತುವೆಗಳು, ದಾಟಲಾರದ ಅಡ್ಡಗೋಡೆಗಳು. ಅವರ ದೆಸೆಯಿಂದ ಕಾಮಿಗಳು ಭಗ್ನ ಮನೋರಥರಾಗುತ್ತಾರೆ. ಆದರೂ ಪರಸ್ಪರ ಅಭಿಮುಖ್ಯ ಅಥವಾ ಅನ್ಯೋನ್ಯ ತಾದಾತ್ಮ್ಯದಿಂದ ಚಿತ್ರದಲ್ಲಿ ಬರೆದಂತೆ ನಿಶ್ಚೇಷ್ಟವಾದ ತಮ್ಮ ಮೈಯಲ್ಲಿ ಕಣ್ಣುಗಳೇ ಕಮಲನಾಳಗಳೆಂದೂ, ಅವುಗಳ ಮೂಲಕ ಪರಸ್ಪರ ಅನುರಾಗವೆಂಬ ರಸವನ್ನು ಕುಡಿಯುವರೆಂದೂ (ಎಂದರೆ ಪರಸ್ಪರ ನೋಟದ ಆಸಕ್ತಿಯಲ್ಲಿ ಹೊತ್ತುಗಳೆಯುವರೆಂದು) ವರ್ಣಿಸಿದೆ. ಇಲ್ಲಿ ರೂಪಕವು ಪೂರ್ಣಾಕಾರವನ್ನು ತಳೆಯಲಿಲ್ಲವಲ್ಲಾ; ಹಂಸ, ಚಕ್ರವಾಕ, ಎಂದು ನಾಯಕ ನಾಯಿಕೆಯರನ್ನು ಹೇಳಲಿಲ್ಲವಲ್ಲಾ ಒಂದೇ ಕಮಲನಾಳದಿಂದ ಜಲಪಾನಮಾಡತಕ್ಕವೆಂದರೆ ಅವೇ ಸರಿ, ಎಂಬ ಆಶಂಕೆಗೆ ಮೊದಲೇ ಉತ್ತರ ಹೇಳಿಯಾಗಿದೆ—'ಅತಿಯಾಗಿ ಅಲಂಕಾರದ ಆಸಕ್ತಿ ತರವಲ್ಲ' ವೆಂದು—ಲೋ.

28 ವಿಭಾವಾದಿಗಳು ಅಲಂಕೃತವಾಗುವುದರಿಂದ ರಸವೂ ಅಲಂಕೃತವಾಗುತ್ತದೆಂದು ತಾತ್ಪರ್ಯ—ಲೋ.

29 ಇಲ್ಲಿ ಸಂಘಟನೆಯ ಬಗೆಗೂ ನಿಮಿತ್ತಸಪ್ತಮಿ ಬಂದಿರುವುದು ಗಮನಾರ್ಹ. ಸಂಘಟನೆಯೂ ವರ್ಣಾದಿಗಳಂತೆ ಮಾತ್ರ ವ್ಯಂಜಕತ್ವವನ್ನುಳ್ಳದು, ವಾಕ್ಯದಂತಲ್ಲ—ಲೋ.

ಸುವುದೆಂದು ಹೇಳಲಾಯಿತು. ಈಗ ಸಂಘಟನೆಯ ಸ್ವರೂಪವೇನೆಂದು ನಿರೂಪಿಸಲಾಗುತ್ತದೆ[30]:—

ಕಾರಿಕೆ

ಅಸಮಾಸಾ ಸಮಾಸೇನ ಮಧ್ಯಮೇನ ಚ ಭೂಷಿತಾ ।
ತಥಾ ದೀರ್ಘಸಮಾಸೇತಿ ತ್ರಿಧಾ ಸಂಘಟನೋದಿತಾ ॥೫॥

'ಅಸಮಾಸಾ,' 'ಮಧ್ಯಮಸಮಾಸಾ,' 'ದೀರ್ಘಸಮಾಸಾ'—ಎಂದು ಮೂರು ಬಗೆಯಾಗಿ ಸಂಘಟನೆಯು ನಿರೂಪಿತವಾಗಿದೆ.

ವೃತ್ತಿ

'ಬೇರೆ ಕೆಲವರಿಂದ' ಎಂದು ಅಧ್ಯಾಹಾರ. ಅದನ್ನಿಲ್ಲಿ ಸುಮ್ಮನೆ ಅನುವಾದ ಮಾಡಿಕೊಂಡು ಇದನ್ನು ಹೇಳಲಾಗುತ್ತದೆ—

ಕಾರಿಕೆ

ಗುಣಾನಾಶ್ರಿತ್ಯ ತಿಷ್ಠನ್ತೀ ಮಾಧುರ್ಯಾದೀನ್ ವ್ಯನಕ್ತಿ ಸಾ ।
ರಸಾಂಸ್ತನ್ನಿಯಮೇ ಹೇತುರೌಚಿತ್ಯಂ ವಕ್ತೃವಾಚ್ಯಯೋಃ ॥೬॥

ಆ ಸಂಘಟನೆಯು ಮಾಧುರ್ಯವೇ ಮೊದಲಾದ ಗುಣಗಳನ್ನು ಆಶ್ರಯಿಸಿ ನಿಂತು ರಸಗಳನ್ನು ಧ್ವನಿಸುತ್ತದೆ. ಹೇಳುವ ಮನುಷ್ಯನ ಮತ್ತು ಹೇಳಬೇಕಾದ ವಿಷಯದ ಔಚಿತ್ಯವು ಅದರ ವೈಶಿಷ್ಟ್ಯನಿಯಮಕ್ಕೆ ಕಾರಣ.

ವೃತ್ತಿ

ಆ ಸಂಘಟನೆಗೆ ರಸಗಳೇ ವ್ಯಂಗ್ಯ, ಗುಣಗಳೇ ಆಶ್ರಯ, ಎಂದಂತಾಯಿತು. ಆದರೆ ಇಲ್ಲಿ ಹೀಗೂ ವಿಷಯವನ್ನು ಕಲ್ಪಿಸಬಹುದು—'ಗುಣ' ಮತ್ತು 'ಸಂಘಟನೆ' ಇವುಗಳಿಗೆ ಅಭೇದವಿದೆಯೋ ಇಲ್ಲವೆ ಭೇದವೋ? ಭೇದವಿದೆಯೆಂದರೆ ಮತ್ತೆ ಎರಡು ಪಕ್ಷಗಳಿಗೆ ಅವಕಾಶವುಂಟು—ಗುಣಾಶ್ರಿತವಾದುದು ಸಂಘಟನೆಯೇ ಅಥವಾ ಸಂಘಟನಾಶ್ರಿತವಾದುದು ಗುಣವೆ? ಎಂದು. ಆವೆರಡಕ್ಕೂ ಅಭೇದವೇ ಉಂಟೆನ್ನುವ ಪಕ್ಷದಲ್ಲಿ ಮತ್ತು ಸಂಘಟನಾಶ್ರಿತವಾದುದೇ ಗುಣವೆಂಬ ಪಕ್ಷದಲ್ಲಿ,[31] (ಅನುಕ್ರಮ

---

30 ಗುಣಗಳಿಗಿಂತ ಹೇಗೆ ಬೇರೆಯೆಂದು ವಿಚಾರಿಸಲಾಗುತ್ತದೆ ಎಂದು ತಾತ್ಪರ್ಯ—ಲೋ.

31 ಸಂಘಟನೆಯ ಧರ್ಮಗಳೇ ಗುಣಗಳು ಎಂಬುದು ಭಟ್ಟ ಉದ್ಭಟ ಮುಂತಾದವರ ಸಿದ್ಧಾಂತ. ಧರ್ಮಗಳು ಧರ್ಮಿಯನ್ನು ಆಶ್ರಯಿಸಿದಂಥವು ಎಂಬುದು ಸುಪ್ರಸಿದ್ಧ ಸರಣಿ—ಲೋ.

ವಾಗಿ) ಆತ್ಮಾಭಿನ್ನವಾದ ಅಥವಾ ಆಧೇಯವಾದ ಗುಣಗಳನ್ನು ಆಶ್ರಯಿಸಿ, ಸಂಘಟನೆಯು ರಸಗಳನ್ನು ಧ್ವನಿಸುವುದೆಂದರ್ಥ. ಹಾಗೆಯೇ, ಅವೆರಡೂ ಭಿನ್ನ ವೆಂಬುದರ ಜತೆಗೆ ಗುಣಾಶ್ರಿತವಾದುದೇ ಸಂಘಟನೆಯೆಂಬ ಪಕ್ಷದಲ್ಲಿ "ಗುಣಗಳ ನ್ನಾಶ್ರಯಿಸಿ ನಿಂತು" ಎಂಬುದಕ್ಕೆ 'ಗುಣಪರತಂತ್ರವಾದ ಸ್ವಭಾವವುಳ್ಳದಾಗಿ' ಎಂದರ್ಥ;[32]'ಗುಣಸ್ವರೂಪವನ್ನೇ ತಳೆದು' ಎಂದಾಗುವುದಿಲ್ಲ. ಹೀಗೆ ನಾನಾ ವಿಕಲ್ಪಗಳನ್ನು ಮಾಡುವುದರಿಂದ ಬರುವ ಲಾಭವೇನು?

ಇದೇ ಉತ್ತರ—

ಗುಣಗಳೂ ಸಂಘಟನೆಯೂ ಒಂದೇ ಎಂದರೂ, ಅಥವಾ ಗುಣಗಳಿಗೆ ಸಂಘಟನೆಯೇ ಆಶ್ರಯವೆಂದರೂ, ಸಂಘಟನೆಯಂತೆ ಗುಣಗಳಿಗೂ ಕೂಡ ಅನಿಯತ ವಾದ ವ್ಯಾಪ್ತಿಯು ಬಂದೊದಗುತ್ತದೆ. (ಆದರೆ ವಸ್ತುತಃ ಗುಣಗಳ ವ್ಯಾಪ್ತಿಯು ನಿಯತವೇ ಹೊರತು ಅನಿಯತವಲ್ಲ). ಉದಾಹರಣೆಗೆ 'ಕರುಣ' ಮತ್ತು 'ವಿಪ್ರಲಂಭ ಶೃಂಗಾರ,' ಈ ಎರಡು ರಸಗಳ ವಿಷಯದಲ್ಲಿ ಮಾತ್ರ 'ಮಾಧುರ್ಯ' ಮತ್ತು 'ಪ್ರಸಾದ'ಗಳಿಗೆ ವಿಶೇಷವಾದ ಮಹತ್ತ್ವವುಂಟು. ಹಾಗೆಯೇ 'ಓಜಸ್ಸು', 'ರೌದ್ರ' ಮತ್ತು 'ಅದ್ಭುತ' ರಸಗಳನ್ನು ಕುರಿತುದು. ಅಲ್ಲದೆ, 'ಮಾಧುರ್ಯ' ಮತ್ತು 'ಪ್ರಸಾದ'ಗಳು ರಸ, ಭಾವ, ಮತ್ತು ಇವುಗಳ ಆಭಾಸಗಳಿಗೆ ಮಾತ್ರ ಅನ್ವಯಿಸು ವುವೆಂಬ ವಿಷಯವನ್ನೂ ವ್ಯವಸ್ಥೆ ಮಾಡಲಾಗಿದೆ. ಆದರೆ ಸಂಘಟನೆಯಲ್ಲಿ ಈ ನಿಯಮ ಗಳು ಅನ್ವಯಿಸುವುದಿಲ್ಲ. ಹೇಗೆಂದರೆ, ಶೃಂಗಾರರಸದಲ್ಲಿಯೂ 'ದೀರ್ಘಸಮಾಸ'ದ ಸಂಘಟನೆಯನ್ನು ಕಾಣಬಹುದು, ರೌದ್ರವೇ ಮೊದಲಾದ ರಸಗಳಲ್ಲಿ 'ಅಸಮಾಸ'ದ ಸಂಘಟನೆಯನ್ನೂ ನೋಡಬಹುದು.

ಶೃಂಗಾರದಲ್ಲಿ 'ದೀರ್ಘಸಮಾಸ'–ಸಂಘಟನೆಗೆ ಉದಾಹರಣೆ :—

೮೪ "ಮಂದಾರಕುಸುಮರೇಣುಪಿಂಜರಿತಾಲಕಾ"

ಅಥವಾ—[33]

[32] ಇಲ್ಲಿ 'ಆಶ್ರಯ'ವೆಂದರೆ ಆಧಾರಾಧೇಯಭಾವ ಅಲ್ಲ, ಗುಣಗಳಲ್ಲಿ ಸಂಘಟನೆ ನಿಲ್ಲ ಲಾರದ ಕಾರಣ ಆದ್ದರಿಂದ 'ಅಮಾತ್ಯವರ್ಗವು ರಾಜಾಶ್ರಯ' ಎಂದರೆ ಹೇಗೆ ಅಮಾತ್ಯರು ರಾಜನ ಆಜ್ಞಾಧೀನ ಎಂಬ ಅರ್ಥವೋ ಹಾಗೆ ಇಲ್ಲಿಯೂ ಗುಣಗಳಿಗೆ ಪರತಂತ್ರವಾಗಿರತಕ್ಕುದೇ ಸಂಘಟನೆಯೆಂಬ ಅರ್ಥ ಬರುತ್ತದೆ—ಲೋ.

[33] ಇಲ್ಲಿ ಶೃಂಗಾರರಸವೇ ಇಲ್ಲವಲ್ಲಾ ಎಂದುಕೊಂಡು, ಮತ್ತೊಂದು ಉದಾಹರಣೆ ಯನ್ನು ಕೊಡುತ್ತಾನೆ—ಲೋ

೮೫ ಅವನರತನಯನಜಲಲವನಿಪತನಪರಿಮುಷಿತಪತ್ರಲೇಖಾನ್ತಮ್ ।
ಕರತಲನಿಷಣ್ಣಮಬಲೇ ವದನಮಿದಂ ಕಂ ನ ತಾಪಯತಿ ॥[34]

ಅನವರತನಯನಜಲಲವ-
ವಿನಿಸ್ಸರಣನಷ್ಟಪತ್ರಲೇಖಾಂತಂ ತಾ- |
ನೆನೆ ನಿನ್ನೀ ಕರನಿಹಿತವ-
ದನಮಾವನ ಮಾನಸಾಂತಮಂ ಸುಡದಿರ್ಕುಂ ||

ಹಾಗೆಯೇ ರೌದ್ರವೇ ಮೊದಲಾದ ರಸಗಳಲ್ಲಿ ಬರುವ ಅಸಮಾಸ-ಸಂಘಟನೆಗೆ "ಯೋ ಯಃ ಶಸ್ತ್ರಂ...."[35] ಮೊದಲಾದುವು ಉದಾಹರಣೆಗಳು. ಆದುದರಿಂದ **ಗುಣಗಳಿಗೂ ಸಂಘಟನೆಗೂ ಅಭೇದವಿಲ್ಲ; ಗುಣಗಳಿಗೆ ಸಂಘಟನೆಯು ಆಶ್ರಯವೂ ಅಲ್ಲ.**

'ಸಂಘಟನೆಯು ಗುಣಗಳಿಗೆ ಆಶ್ರಯವಲ್ಲವೆಂದು ಬಿಟ್ಟರೆ, ಇನ್ನು ಬೇರಾವುದನ್ನು ಅವುಗಳಿಗೆ ಆಶ್ರಯವೆನ್ನೋಣ?' ಎಂದು ಪೂರ್ವಪಕ್ಷದವರು ಕೇಳಬಹುದು.[36] ಅದಕ್ಕೆ ನಮ್ಮ ಉತ್ತರವಿಷ್ಟೆ: ಹಿಂದೆಯೇ ಗುಣಗಳ ಆಶ್ರಯವೇನೆಂಬುದನ್ನು ನಾವು ಪ್ರತಿಪಾದಿಸಿಬಿಟ್ಟಿದ್ದೇವೆ, ಎಂದು.[37]

ಅಥವಾ ಗುಣಗಳಿಗೆ 'ಶಬ್ದ'ವೇ ಆಶ್ರಯವೆಂದರೂ ಸರಿಯೆ. ಹಾಗೆಂದ ಮಾತ್ರಕ್ಕೆ ಗುಣಗಳು ಅನುಪ್ರಾಸವೇ ಮೊದಲಾದ ಶಬ್ದಾಲಂಕಾರಗಳಿಗೇನೂ ಸಮವಾಗಿಬಿಡುವುದಿಲ್ಲ ಏಕೆಂದರೆ, ಅನುಪ್ರಾಸವೇ ಮೊದಲಾದುವು ಅರ್ಥದ ಅಪೇಕ್ಷೆಯೇ ಇಲ್ಲದ ಕೇವಲ ಶಬ್ದದ ಧರ್ಮಗಳೆಂದು ಹಿಂದಿನವರೇ ನಿರೂಪಿಸಿದ್ದಾರೆ. ಆದರೆ ವ್ಯಂಗ್ಯವಿಶೇಷವನ್ನು (=ರಸಾದಿಗಳನ್ನು) ಧ್ವನಿಸುವಂತಹ ವಾಚ್ಯಾರ್ಥವನ್ನು ಬೋಧಿಸಬಲ್ಲ ಸಾಮರ್ಥ್ಯವು ಯಾವ ಶಬ್ದಗಳಿಗುಂಟೋ, ಆ ಶಬ್ದಗಳಿಗೆ ಮಾತ್ರ ಗುಣಗಳು ಧರ್ಮವೆನಿಸುತ್ತವೆ. ವಸ್ತುತಃ ಆತ್ಮಧರ್ಮಗಳಾದರೂ ಶೌರ್ಯಾದಿ ಗುಣಗಳನ್ನು ಶರೀರಧರ್ಮಗಳೆನ್ನುವಂತೆಯೇ, ರಸಧರ್ಮಗಳಾದ ಕಾವ್ಯಗುಣಗಳನ್ನೂ

---

34 ಇದು ಪ್ರಣಯಕುಪಿತೆಯಾದ ನಾಯಿಕೆಯನ್ನು ಒಲಿಸಿಕೊಳ್ಳಲು ನಾಯಕನಾಡುವ ಮಾತು—ಲೋ.

35 ಉದಾಹರಣ ಪದ್ಯ ೨೬, ಪುಟ-೭೨.

36 ಶಬ್ದ, ಅರ್ಥ, ಇವುಗಳೇ ಸಂಘಟನೆಗೆ ಆಲಂಬನವಾದರೆ ಅದಕ್ಕೂ ಅಲಂಕಾರಗಳಿಗೂ ಯಾವ ವ್ಯತ್ಯಾಸ? ಎಂದು ಪ್ರಾಚೀನರು ಹೇಳಿದ್ದಾರೆಂದು ತಾತ್ಪರ್ಯ—ಲೋ.

37 ಮೂಲಕಾರಿಕೆಯಲ್ಲಿಯೇ ಎಂದರ್ಥ—ಲೋ.

ಶಬ್ದಧರ್ಮಗಳೆಂದು ರೂಢಿಯಲ್ಲಿ ವ್ಯವಹರಿಸುತ್ತೇವೆ.[38]

ಮತ್ತೆ ಪೂರ್ವಪಕ್ಷಕಾರರು ಹೀಗೆ ವಾದಿಸಬಹುದು—'ಗುಣಗಳನ್ನು ಶಬ್ದ ಧರ್ಮಗಳೆಂದೊಡನೆಯೇ ಗುಣಗಳ ಸ್ವರೂಪವು ಸಂಘಟನೆಯ ಸ್ವರೂಪಕ್ಕಿಂತ ಬೇರೆಯಲ್ಲವೆಂದು, ಅಥವಾ ಸಂಘಟನೆಯೇ ಗುಣಗಳಿಗೆ ಆಶ್ರಯವೆಂದು, ತಾನೇ ಸಿದ್ಧವಾಗಿ ಹೋಗುವುದು. ಏಕೆಂದರೆ 'ಸಂಘಟಿತ'ವಲ್ಲದ ಶಬ್ದಗಳು, ಮೇಲೆ ಹೇಳಿದಂತಹ ವಿಶಿಷ್ಟಾರ್ಥಗಳಿಂದ ಗಮ್ಯವಾದ ರಸಾದಿಗಳನ್ನು ಆಶ್ರಯಿಸಿರುವ ಗುಣಗಳಿಗೆ, ಆಶ್ರಯವೆನಿಸುವುದೇ ಸಾಧ್ಯವಿಲ್ಲ. ಸಂಘಟಿತವಲ್ಲದ ಶಬ್ದಗಳಿಗೆ ಗುಣ ಗಳನ್ನು ಬೋಧಿಸುವ ಶಕ್ತಿಯಿಲ್ಲದಿರುವುದೇ ಕಾರಣ.'[39]

ಈ ವಾದವು ಸರಿಯಲ್ಲ. ಏಕೆಂದರೆ ರಸಾದಿಗಳು ಅಕ್ಷರಗಳಿಂದಲೂ (ಅಸಂಘಟಿತ)

---

38 ಏಕಾಶ್ರಯದಿಂದಲೇ ಐಕ್ಯ ಬಾರದು. ಒಂದೇ ವಸ್ತುವನ್ನು ಆಶ್ರಯಿಸಿಕೊಂಡು ರೂಪಾದಿಗಳೂ ಇರುತ್ತವೆ; ಸಂಯೋಗವೆಂಬ ಸಂಬಂಧವೂ ಇರುತ್ತದೆ. ಆದರೆ ರೂಪವೇ ಸಂಯೋಗವೆನಿಸಲಾರದು. ಎರಡೂ ಇಲ್ಲದಾಗ ಸಂಯೋಗಕ್ಕೆ ಅವಕಾಶವಿಲ್ಲ. ಹಾಗೆ ಇಲ್ಲಿ ಎರಡನೆಯದಾವುದು? ಎಂದು ಕೇಳಿದರೆ—ವ್ಯಂಗ್ಯಕ್ಕೆ ಉಪಕಾರಕವಾದ ವಾಚ್ಯವೇ ಎರಡನೆಯ ದೆನ್ನುತ್ತೇವೆ. ಪೂರ್ವ ಪಕ್ಷಕ್ಕೆ ಇದು ಉತ್ತರವೇ ಹೊರತು ನಮ್ಮ ಸಿದ್ಧಾಂತವೇನೂ ಅಲ್ಲ. ವಿವೇಚನೆಗೆ ಹೋಗದೆ ಸ್ಥೂಲವಾಗಿ 'ಶೌರ್ಯ' ಮುಂತಾದ ಗುಣಗಳನ್ನು ಶರೀರದ ಧರ್ಮ (=ಗುಣ) ಗಳೆನ್ನುವುದಿಲ್ಲವೇ? ಹಾಗೆಯೇ ಕಾವ್ಯ ಗುಣಗಳಾದ 'ಮಾಧುರ್ಯ' ಮುಂತಾದುವು ಸ್ಥೂಲವಾಗಿ ಶಬ್ದದ ಗುಣಗಳೆನ್ನಬಹುದು. ಸೂಕ್ಷ್ಮ ವಿವೇಚನೆಯಿಲ್ಲದವರು ಇದು ಔಪಚಾರಿಕ ವ್ಯವಹಾರವೆಂಬುದನ್ನು ಮನಗಾಣರು. ಆದರೂ ನಮ್ಮ ಸಿದ್ಧಾಂತಕ್ಕೇನೂ ತೊಂದರೆಯಿಲ್ಲವೆಂದು ತಾತ್ಪರ್ಯ—ಲೋ.

39 ಹೇಗೆಂದರೆ—ಶಬ್ದದ 'ಮಾಧುರ್ಯ'ವು ಶೃಂಗಾರಾದಿ ರಸಗಳನ್ನು ಧ್ವನಿಸಬಲ್ಲ ವಾಚ್ಯಾರ್ಥದ ಪ್ರತಿಪಾದನ ಶಕ್ತಿಯೇ ಹೊರತು ಬೇರೆಯಲ್ಲ. ಶಬ್ದಗತವಾದ ಆ ಮಾಧುರ್ಯವು ವಿಶಿಷ್ಟ 'ಘಟನೆ' (=ರಚನೆ) ಯಿಂದಲೇ ಲಭ್ಯ ಸಂಘಟನೆಯೆಂಬ ಹೊಸ ವಸ್ತುವೇ ಇಲ್ಲ. ಸಂಘಟಿತ ಶಬ್ದಗಳೇ ಸಂಘಟನೆ. ಆದಕಾರಣ ಸಂಘಟನಾಶ್ರಿತವಾದ ಸಾಮರ್ಥ್ಯವು ಪರ್ಯವ ಸಾನದಲ್ಲಿ ಶಬ್ದಾಶ್ರಿತವೆಂದೇ ಸಿದ್ಧವಾಗುತ್ತದೆ ಹೀಗೆ ಗುಣಗಳು ಶಬ್ದ ಧರ್ಮಗಳಾಗಬಹುದು ಇಲ್ಲವೇ ಶಬ್ದಾತ್ಮಕವಾಗಬಹುದು. ನಡುವೆ ಸಂಘಟನೆಗೆಲ್ಲಿ ಸ್ಥಾನ? ರಸಗಳು ಗಮ್ಯವಾಗಲು ವಿಶಿಷ್ಟ ವಿಭಾವಾದಿಗಳೇ ಬೇಕು; ನಿರಪೇಕ್ಷ ಪದಗಳಿಂದ ಅರಿವಿಗೆ ಬರುವ ಅರ್ಥ ಸಾಮಾನ್ಯ ಸಾಲದು. ಹೇಗೆ ತಾನೇ ರಸನಿಷ್ಠವಾದ ಗುಣಗಳಿಗೆ ಅಸಂಘಟಿತ (=ಪದಾಂತರ-ನಿರಪೇಕ್ಷ) ಶಬ್ದಗಳು ಆಶ್ರಯವಾದಾವು? ಔಪಚಾರಿಕವಾಗಿಯೂ ಇದು ಸಾಧ್ಯವಿಲ್ಲ. ಅಸಂಘಟಿತ ಶಬ್ದಗಳು ನಿರಾಕಾಂಕ್ಷವಾದ ಹಾಗು ವ್ಯಂಗ್ಯೋಪಯೋಗಿಯಾದ ಸಾಮಾನ್ಯಾರ್ಥವನ್ನು ಬೋಧಿಸುವುದೆಂತು? ಎಂದು ಪೂರ್ವಪಕ್ಷಿಯ ವಾದ—ಲೋ.

ಪದಗಳಿಂದಲೂ ಕೂಡ ವ್ಯಂಗ್ಯವಾಗುವುವೆಂಬುದನ್ನು ಈಗಾಗಲೇ ಪ್ರತಿಪಾದಿಸಲಾಗಿದೆ.[40]

ಅದು ಹಾಗಿರಲಿ; ವಾಕ್ಯದಿಂದ ರಸವು ವ್ಯಂಗ್ಯವಾಗುವ ಕಡೆಯನ್ನೇ ಬೇಕಾದರೂ ತೆಗೆದುಕೊಳ್ಳೋಣ.[41] ಅಲ್ಲಿ ಕೂಡ ಗುಣಗಳಿಗೆ ಆಶ್ರಯವೆನಿಸುವಂತಹ ಯಾವ ನಿಯತವಾದ ಸಂಘಟನೆಯೂ ಇಲ್ಲವಲ್ಲ![42] ಆದುದರಿಂದ ಯಾವ ಸಂಘಟನಾ ನಿಯಮಕ್ಕೂ ಒಳಗಾಗದ, ಆದರೆ ವ್ಯಂಗ್ಯವಿಶೇಷಗಳಿಗೆ ಪೋಷಕಗಳಾದ, ಶಬ್ದಗಳನ್ನು ಮಾತ್ರ ಗುಣಗಳಿಗೆ ಆಶ್ರಯವೆನ್ನಬೇಕು.[43]

ಇದಕ್ಕೆ ಇತರರು ಹೀಗೆ ವಾದಿಸಬಹುದು: 'ಮಾಧುರ್ಯಗುಣದಲ್ಲೇನೋ ಹೀಗೆ ಹೇಳುವುದಾದರೆ ಹೇಳಿಕೊಳ್ಳಿ.[44] ಆದರೆ ಓಜೋಗುಣದಲ್ಲಿ ಸಂಘಟನಾ

---

40 ಇದು ಸಿದ್ಧಾಂತಿಯ ಉತ್ತರ. ರಸವು ವರ್ಣದಿಂದ ಕೂಡ ವ್ಯಂಗ್ಯವೆಂದು ಒಪ್ಪಿದ್ದೇವೆ. ಹಾಗೆಯೇ ವಾಚಕತ್ವ ಶೂನ್ಯವಾದ ಪದದಿಂದಲೂ ಶ್ರವಣ ಮಾತ್ರ ಮನೋಹರವಾದ ಸೌಭಾಗ್ಯದ ಮೂಲಕ ರಸಾಭಿವ್ಯಕ್ತಿ ಸಾಧ್ಯ, ಅದೇ ಮಾಧುರ್ಯ. ಮತ್ತೆ ಸಂಘಟನೆಯೇಕೆ? ಇತರ ಪದಗಳ ಅಪೇಕ್ಷೆಯೇನೂ ಅನಿವಾರ್ಯವೆನ್ನುವಂತಿಲ್ಲ. ಇದೇ ರೀತಿ ಪದವ್ಯಂಗ್ಯವೆಂಬ ಧ್ವನಿಯಲ್ಲಿಯಾದರೂ ಅನ್ಯನಿರಪೇಕ್ಷವಾದ ಪದವೇ ಸ್ವಾರ್ಥವನ್ನು ನೆನಪಿಗೆ ತರುವ ಮೂಲಕ ರಸಾಭಿವ್ಯಕ್ತಿ ಯೋಗ್ಯವಾದ ಅರ್ಥಕ್ಕೆ ಭಾಸಕವೆನಿಸಬಹುದು ಈ ಬಗೆಯ ವಾಚ್ಯಾರ್ಥ ಭಾಸಕತ್ವವೇ ಅಲ್ಲಿಯ 'ಮಾಧುರ್ಯ'. ಆದ್ದರಿಂದ ಅಲ್ಲಿಯೂ 'ಸಂಘಟನೆ' ಯನ್ನೊಪ್ಪಬೇಕಾದ ಅಗತ್ಯವಿಲ್ಲ—ಲೋ.

41 'ಹಾಗಾದರೆ ವಾಕ್ಯ-ವ್ಯಂಗ್ಯವಾದ ರಸಸ್ಥಳದಲ್ಲಿ ಸಂಘಟನೆ ಅನಿವಾರ್ಯವೆಂದೊಪ್ಪಲೇಬೇಕೆಂದಂತಾಯಿತು. ವಾಕ್ಯಸೌಂದರ್ಯ ಅಥವಾ ವಾಕ್ಯಾರ್ಥ ಸೌಂದರ್ಯವನ್ನು ಮತ್ತಾವ ರೀತಿಯಿಂದಲೂ ವಿವರಿಸುವಂತೆಯೇ ಇಲ್ಲ' ಎನ್ನುವ ಪೂರ್ವಪಕ್ಷಿಯ ಅಭಿಪ್ರಾಯವನ್ನು ಈಗ ವಿಮರ್ಶಿಸಲಾಗುತ್ತದೆ—ಲೋ

42 ತಾತ್ಪರ್ಯವಿಷ್ಟೆ—ವಾಕ್ಯದಲ್ಲಿ ಸಂಘಟನೆಯ ಅನುಪ್ರವೇಶವನ್ನು ನಾವೂ ಅಲ್ಲಗಳೆಯಲಾರೆವು, ನಿಜ; ಸಂಘಟನೆ ಇದ್ದುಕೊಳ್ಳಲಿ. ಆದರೆ ಮಾಧುರ್ಯಕ್ಕೆ ನಿಯತವಾದ ಇಂಥದೇ ಸಂಘಟನೆಯೆಂಬುದೊಂದು ಉಂಟೆ? ವರ್ಣ-ವ್ಯಂಗ್ಯ ಸ್ಥಳದಲ್ಲಿ ಹೇಗೊ ಹಾಗೆಯೇ ಇಲ್ಲಿ ಕೂಡ ಸಂಘಟನೆಯನ್ನು ಮರೆತರೂ ವಾಕ್ಯಕ್ಕೆ ರಸವ್ಯಂಜಕತ್ವವೇನೂ ತಪ್ಪಬೇಕಾಗಿಲ್ಲ ಆದ್ದರಿಂದ ಸಂಘಟನೆ ವಾಕ್ಯದಲ್ಲಿದ್ದರೂ ರಸಾಭಿವ್ಯಕ್ತಿಗೆ ಅಪ್ರಯೋಜಕ, ಸಾಕ್ಷಾತ್ ಕಾರಣವಲ್ಲ—ಲೋ

43 ಔಪಚಾರಿಕವಾಗಿ, ಗುಣಗಳಿಗೆ ಶಬ್ದಗಳೇ ಆಶ್ರಯವೆನ್ನುವುದು ಸಿದ್ಧಾಂತ—ಲೋ.

44 ಈ ಮಾತು ವಾಕ್ಯ-ವ್ಯಂಗ್ಯವಾದ ಧ್ವನಿಯನ್ನು ಮಾತ್ರ ಕುರಿತುದೆಂದು ಕೆಲವರು ವಿವರಿಸುತ್ತಾರೆ. ಆದರೆ ವರ್ಣ-ವ್ಯಂಗ್ಯ, ಪದ-ವ್ಯಂಗ್ಯಗಳಿಗೂ ಇದು ಅನ್ವಯಿಸಬಹುದೆಂದು ನಮಗೆ ತೋರುತ್ತದೆ ಏಕೆಂದರೆ ವರ್ಣ, ಪದಗಳ ಓಜಸ್ಸಿನ ಸೌಂದರ್ಯ ಕೂಡ ಸಂಘಟನಾ ವಿರಹದಲ್ಲಿ ಎದ್ದು ಕಾಣಿಸುವುದಿಲ್ಲವೆಂದು ಪೂರ್ವಪಕ್ಷದವರು ಹೇಳಬಹುದು—ಲೋ.

ನಿಯಮಕ್ಕೆ ಒಳಪಡದ ಶಬ್ದಗಳನ್ನು ಆಶ್ರಯವೆಂದು ಹೇಳುವುದು ಹೇಗೆ? ಎಲ್ಲಿಯಾದರೂ ಸಮಾಸವಿಲ್ಲದ ಶಬ್ದಸಂಘಟನೆಯಿಂದ ಓಜೋಗುಣವು ಹುಟ್ಟುವುದೆ?' ಎಂದು.

ನಮ್ಮ ಉತ್ತರವಿದು: 'ಪೂರ್ವಪ್ರಸಿದ್ಧಿಯೆಂಬ ಗ್ರಹವು ನಿಮಗೆ ಹಿಡಿದಿದ್ದರೆ ನಾವು ಏನೂ ಹೇಳುವ ಹಾಗಿಲ್ಲ. ಹಾಗಿಲ್ಲದಿದ್ದರೆ, ಅಲ್ಲಿಯೂ ಏಕಾಗಬಾರದೆಂದೇ ಕೇಳುತ್ತೇವೆ. ಸಮಾಸವಿಲ್ಲದ ಶಬ್ದಸಂಘಟನೆಯು ಓಜಸ್ಸಿಗೆ ಆಶ್ರಯವೇಕಾಗಬಾರದು? ನಾವು ಮೊದಲೇ ಹೇಳಲಿಲ್ಲವೆ—ಓಜಸ್ಸೆಂದರೆ ಬೇರೇನೂ ಅಲ್ಲ; ರೌದ್ರವೇ ಮೊದಲಾದ ರಸಗಳನ್ನು ಪ್ರಕಾಶಿಸಬಲ್ಲ ಕಾವ್ಯದ ದೀಪ್ತಿಯೇ ಅದು, ಎಂದು? ಆ ಓಜಸ್ಸು ಸಮಾಸವಿಲ್ಲದ ಸಂಘಟನೆಯಲ್ಲಿಯೂ ಇದ್ದರೆ ತಪ್ಪೇನು? ಅದರಿಂದ ಸೌಂದರ್ಯಲೋಪವಾವುದೂ ಸಹೃದಯರಾದವರ ಹೃದಯಕ್ಕೆ ಭಾಸವಾಗುವುದಿಲ್ಲ.[45] ಆದುದರಿಂದ ನಿಯತ ಸಂಘಟನೆಗೊಳಪಡದ ಶಬ್ದಗಳನ್ನೇ ಗುಣಗಳಿಗಾಶ್ರಯವೆನ್ನುವುದರಿಂದ ಯಾವ ಹಾನಿಯೂ ಇಲ್ಲ. ಅಷ್ಟೇ ಅಲ್ಲದೆ, ಕಣ್ಣೇ ಮೊದಲಾದ ಇಂದ್ರಿಯಗಳಿಗೆ ತಮ್ಮ ತಮ್ಮ ಪ್ರತ್ಯಕ್ಷವಿಷಯವು ಹೇಗೆ ನಿಯತವಾಗಿರುವುದೋ, ಹಾಗೆಯೇ ಗುಣಗಳಿಗೂ ತಮ್ಮ ತಮ್ಮ ರಸವಿಷಯವು ನಿರ್ದಿಷ್ಟವಾಗಿಯೇ ಇರುವುದು. ಈ ವಿಷಯ ನಿಯಮಕ್ಕೆ[46] ಯಾವಾಗಲೂ ಭಂಗ ಬರುವುದಿಲ್ಲ. ಆದುದರಿಂದ ಸಂಘಟನೆಯೇ ಬೇರೆ, ಗುಣಗಳೇ ಬೇರೆ. ಸಂಘಟನೆಯನ್ನಾಶ್ರಯಿಸಿಕೊಂಡೇ ಗುಣಗಳಿರುತ್ತವೆಂದರೆ ಇದನ್ನೇ ಹೇಳಿದಂತಾಗುವುದಿಲ್ಲ. ಅಥವಾ ರಸಾನುಗುಣವಾಗಿ ಶಬ್ದಗಳು ಸಂಘಟನೆಗಳನ್ನು ತಳೆಯುವುದನ್ನೇ 'ಗುಣ'ವೆಂದು ಹೇಳಿದರೂ ಹೇಳಬಹುದು.'[47]

ಪೂರ್ವಪಕ್ಷಕಾರರು ಇನ್ನೂ ಒಂದು ಮಾತನ್ನು ಹೇಳಿದ್ದಾರೆ: 'ಸಂಘಟನೆಯು ಅನಿಯತ ವಿಷಯವಾಗುವುದಾದರೆ, ಗುಣಗಳೂ ಅನಿಯತ ವಿಷಯಗಳೇ ಆಗುತ್ತವೆ—ಲಕ್ಷ್ಯಗಳಲ್ಲಿ ಸಾಂಕರ್ಯ ಬರುವುದರಿಂದ', ಎಂದು. ಅದಕ್ಕೆ ನಾವು ಹೇಳುವುದಿಷ್ಟೆ: 'ನಿಮ್ಮ ಪೂರ್ವಗ್ರಹದೋಷದಿಂದ ಲಕ್ಷ್ಯಗಳಲ್ಲಿ ವೈರೂಪ್ಯ ಕಂಡರೆ, ಕಂಡುಕೊಳ್ಳಲಿ!'

---

45 'ಯೋ ಯಃ ಶಸ್ತ್ರಂ....' ಇತ್ಯಾದಿ ಲಕ್ಷ್ಯಗಳಲ್ಲಿ ಚಾರುತ್ವವು ಸ್ಪಷ್ಟವೆಂದು ತಾತ್ಪರ್ಯ—ಲೋ.

46 'ಶೃಂಗಾರ ಏವ ಮಧುರಃ....' ಇತ್ಯಾದಿ ಕಾರಿಕೆಗಳಲ್ಲಿ ಹೇಳಿರುವ ರಸ—ಗುಣಗಳ ನಿಯಮವೇ ವಿಷಯನಿಯಮ—ಲೋ.

47 ಶಬ್ದಗಳಲ್ಲಿರುವ ರಸಾಭಿವ್ಯಕ್ತಿಯ ಸಾಮರ್ಥ್ಯವೆಂದರೆ ಉಚಿತವಾಗಿ ಸಂಘಟಿತವಾಗುವುದೇ ಎಂದು ಭಾವ—ಲೋ.

ಎಂದು. 'ಸಹೃದಯರಿಗೆ ಆ ಲಕ್ಷ್ಯಗಳಲ್ಲಿ ಸೌಂದರ್ಯಹಾನಿಯು ಕಾಣದೆ ಹೋಗು ವುದು ಹೇಗೆ?' ಎಂದು ಮತ್ತೆ ಕೇಳಿದರೆ, 'ಕವಿಪ್ರತಿಭೆಯ ಪ್ರಭಾವದಿಂದ'[48] ಎಂದು ನಾವು ಉತ್ತರಕೊಡುತ್ತೇವೆ. ದೋಷಗಳಲ್ಲಿ ಎರಡು ಬಗೆ—ಕವಿಯ ವ್ಯುತ್ಪತ್ತಿಯ ಕೊರತೆಯಿಂದಾದುದು ಮತ್ತು ಕವಿಯ ಪ್ರತಿಭೆಯ ಕೊರತೆಯಿಂದಾದುದು, ಎಂಬು ದಾಗಿ. ಇವುಗಳಲ್ಲಿ ಅವ್ಯುತ್ಪತ್ತಿಯಿಂದಾದ ದೋಷವು ಪ್ರತಿಭೆಯಿಂದ ಮುಚ್ಚಿಹೋಗಿ ಒಮ್ಮೊಮ್ಮೆ ಲಕ್ಷ್ಯಕ್ಕೆ ಬಾರದಿರುವುದೂ ಉಂಟು. ಆದರೆ ಪ್ರತಿಭಾದಾರಿದ್ರ್ಯದಿಂದಾದ ದೋಷವು ಥಟ್ಟನೆ ಕಣ್ಣಿಗೆ ಬೀಳುತ್ತದೆ. ಇದನ್ನೇ ಕೆಳಗಿನ ಪರಿಕರಶ್ಲೋಕವು ಸಂಗ್ರಹ ವಾಗಿ ಹೇಳುತ್ತದೆ :

ಅವ್ಯುತ್ಪತ್ತಿಕೃತೋ ದೋಷಃ ಶಕ್ತ್ಯಾ ಸಂವ್ರಿಯತೇ ಕವೇಃ ।
ಯಸ್ತ್ವಶಕ್ತಿಕೃತಸ್ತಸ್ಯ[49] ಸ ಝಟಿತ್ಯವಭಾಸತೇ ॥

ಇದಕ್ಕೆ ಉದಾಹರಣೆಗಳನ್ನು ನೋಡೋಣ: ಮಹಾಕವಿಗಳೂ ಕೂಡ ಉತ್ತಮ ರಾದ ದೇವತೆಗಳ ವಿಷಯದಲ್ಲಿ ಮನುಷ್ಯಪ್ರಸಿದ್ಧವಾದ ಸಂಭೋಗಶೃಂಗಾರವನ್ನು ಬಣ್ಣಿಸಿ ಅನೌಚಿತ್ಯದೋಷಕ್ಕೆ[50] ಪಕ್ಕಾಗಿದ್ದರೂ, ಅವರ ಪ್ರತಿಭೆಯು ಆ ದೋಷವನ್ನು ಮರೆಸುವುದರಿಂದ[51] ಅದು ಗ್ರಾಮ್ಯವೆಂದು ತೋರುವುದಿಲ್ಲ. **'ಕುಮಾರಸಂಭವ'** ದಲ್ಲಿರುವ ದೇವೀಸಂಭೋಗವರ್ಣನೆಯೇ ಇದಕ್ಕೆ ನಿದರ್ಶನ. ಇಂತಹ ಕಡೆಗಳಲ್ಲಿ ಔಚಿತ್ಯಕ್ಕೆ ಹೇಗೆ ಹಾನಿ ಬಂದಿಲ್ಲವೆಂಬುದನ್ನು ಮುಂದೆ ತೋರಿಸಲಾಗಿದೆ.[52]

---

48 ಪ್ರತಿಭೆ=ಶಕ್ತಿ=ವರ್ಣನೀಯ ವಸ್ತುವಿನ ಬಗೆಗೆ ಹೊಸ ಹೊಸ ಉಲ್ಲೇಖ ಮಾಡುವ ಸಾಮರ್ಥ್ಯ; 'ವ್ಯುತ್ಪತ್ತಿ'ಯೆಂದರೆ ಅದಕ್ಕೆ ಉಪಯುಕ್ತವಾದ ಸಮಸ್ತ ವಸ್ತುಗಳ ಪೌರ್ವಾಪರ್ಯ -ಪರಾಮರ್ಶದ ಕೌಶಲ—ಲೋ.

49 'ತಸ್ಯ'=ಕವಿಯ.

50 ಸಹೃದಯರ ಚಮತ್ಕಾರಕ್ಕೆ ಯಾವ ವಿಘಾತವೂ ಇಲ್ಲದಿರುವುದೇ ರಸದ ಜೀವ ಜೀವಾಳ, ಆಸ್ವಾದವೊಂದೇ ರಸಕ್ಕೆ ಲಕ್ಷಣವಾದ್ದರಿಂದ. ಉತ್ತಮ ಪಾತ್ರಗಳಾದ ದೇವಾದಿಗಳ ಶೃಂಗಾರವನ್ನು ಸವಿಯುವಾಗ ತಂದೆತಾಯಿಗಳ ಶೃಂಗಾರ ದರ್ಶನದಿಂದ ಹೇಗೋ ಹಾಗೆಯೇ ಲಜ್ಜೆ, ಆತಂಕಗಳು ಒದಗುವುದರಿಂದ ಚಮತ್ಕಾರಕ್ಕಲ್ಲಿಯ ಅವಕಾಶವೆಂದರ್ಥ—ಲೋ.

51 ಅತ್ಯಂತ ಪರಾಕ್ರಮಿಯಾದವನೊಬ್ಬನ ಯುದ್ಧವನ್ನು ನೋಡುವಾಗ ಅವನ ಪರಾ ಕ್ರಮವನ್ನು ಮೆಚ್ಚುತ್ತೇವೆಯೇ ಹೊರತು, ಅವನು ಮಾಡುತ್ತಿರುವ ಯುದ್ಧ ಯುಕ್ತವೇ ಅಲ್ಲವೇ ಎಂದು ಪೂರ್ವಾಪರ ವಿವೇಚನೆ ಮಾಡುವುದಿಲ್ಲ. ಹಾಗೆಯೇ ಪ್ರತಿಭಾವಂತನಾದ ಕವಿಯ ಶೃಂಗಾರ ಪ್ರತಿಪಾದನೆಯನ್ನೂ ನಾವು ಪೌರ್ವಾಪರ್ಯ ವಿವೇಚನೆಗೆ ಹೋಗದಿದ್ದಾಗ ಮೆಚ್ಚುತ್ತೇವೆ—ಲೋ.

52 'ಅನೌಚಿತ್ಯಾದೃತೇ ....' ಎಂಬ ಕಾರಿಕೆಯಲ್ಲಿ.

ಪ್ರತಿಭೆಯು ದೋಷವನ್ನು ಮರೆಸಿದೆಯೇ ಇಲ್ಲವೇ ಎಂಬುದನ್ನು ಅನೇಕ ಸಮಾನ ಮತ್ತು ವಿಭಿನ್ನ ದೃಷ್ಟಾಂತಗಳ ಪರೀಕ್ಷೆಯಿಂದ ನಿರ್ಣಯಿಸಬೇಕು. ಹೇಗೆಂದರೆ, ಪ್ರತಿಭೆಯ ಕೊರತೆಯುಳ್ಳ ಕವಿಯೊಬ್ಬನು ಇಂತಹ ದೇವತೆಗಳ ಶೃಂಗಾರವನ್ನು ಚಿತ್ರಿಸಿದ್ದಿದ್ದರೆ ಅದು ಸ್ಪಷ್ಟವಾಗಿ ದೋಷವೆಂದೇ ಎದ್ದು ಕಾಣುತ್ತಿದ್ದಿತು.

ಮೇಲೆ ಹೇಳಲಾದ 'ಸಂಘಟನಾರೂಪವೇ ಗುಣಗಳು' ಎಂಬ ಪಕ್ಷದ ಪ್ರಕಾರ 'ಯೋ ಯಃ ಶಸ್ತ್ರಂ ಬಿಭರ್ತಿ—' ಮೊದಲಾದ ಉದಾಹರಣೆಗಳಲ್ಲಿ ಆಗಿರುವ ಸೌಂದರ್ಯ ಹಾನಿಯೇನು? 'ಯಾರೂ[53] ಅರಿಯಲಾಗದಂತಹುದು' ಎಂದೇ ನಾವು ಆರೋಪಿಸು ತ್ತೇವೆ. ಆದುದರಿಂದ ಸಂಘಟನೆಯು ಗುಣಗಳಿಗಿಂತ ಬೇರೆಯೇ ಆಗಿರಲಿ, ಗುಣಗಳ ರೂಪವೇ ಆಗಿರಲಿ, ಸಂಘಟನೆಯ ನಿಯಮಕ್ಕೆ ಬೇರೊಂದು ಕಾರಣವನ್ನು ಹೇಳಲೇ ಬೇಕಾಗುತ್ತದಾದ ಕಾರಣ[54] ಅದನ್ನೀಗ ವಿವರಿಸುತ್ತೇವೆ.

'ಹೇಳುವ ಮನುಷ್ಯ'[55]ನೆಂದರೆ ಕವಿಯಾಗಬಹುದು; ಅಥವಾ ಕವಿಕೃತವಾದ ಪಾತ್ರವಾಗಬಹುದು. ಕವಿಕೃತವಾದ ಪಾತ್ರವು ಸಹ ರಸಭಾವರಹಿತನಾಗಿರಬಹುದು ಅಥವಾ ರಸಭಾವಸಮನ್ವಿತನಾಗಿರಬಹುದು. ಹಾಗೆಯೇ ರಸವು ಕಥಾನಾಯಕನಲ್ಲಿ[56] ಆಶ್ರಯವನ್ನು ಪಡೆಯಬಹುದು ಅಥವಾ ಪ್ರತಿನಾಯಕನನ್ನಾಶ್ರಯಿಸಬಹುದು. ಕಥಾ ನಾಯಕರಲ್ಲಿಯೂ 'ಧೀರೋದಾತ್ತ'ನೇ[57] ಮೊದಲಾದ ಭೇದಗಳಂತೆ 'ಮುಖ್ಯ ನಾಯಕ' ,ಅಥವಾ 'ಉಪನಾಯಕ' ಇವೇ ಮೊದಲಾದ ವೈವಿಧ್ಯಗಳೂ ಇರುತ್ತವೆ.

---

53 ಪೂರ್ವಾಪರ ವಿವೇಚನೆ ಮಾಡತಕ್ಕವರು ಕೂಡ—ಲೋ.

54 ಗುಣ—ಸಂಘಟನೆಗಳು ಬೇರೆ ಬೇರೆಯೆಂದರೆ ಸಂಘಟನೆಗೆ ಯಾವದೇ ನಿಯಾಮಕವೂ ಉಳಿಯುವುದಿಲ್ಲ , ಒಂದೇಯೆಂದರೆ ರಸವೂ ನಿಯಾಮಕವಾಗುವುದಿಲ್ಲ ಆದ್ದರಿಂದ ಬೇರೆ ನಿಯಾ ಮಕವನ್ನು ಕಲ್ಪಿಸುವ ಪ್ರಸಕ್ತಿ—ಲೋ.

55 ಹಿಂದೆ ೬ನೆಯ ಕಾರಿಕೆಯ ಉತ್ತರಾರ್ಧವನ್ನು ನೋಡಿ.

56 ಕಥೆಯ ಪರ್ಯವಸಾನದಲ್ಲಿ ಫಲ ಯಾರಿಗೆ ದೊರೆಯುವುದೋ ಅವನೇ ಕಥಾ ನಾಯಕ—ಲೋ.

57 ಧರ್ಮವೀರ ಯುದ್ಧವೀರಗಳಲ್ಲಿ ನಾಯಕನು 'ಧೀರೋದಾತ್ತ', ವೀರರೌದ್ರದ ಪ್ರಧಾನ ನಾಯಕ 'ಧೀರೋದ್ಧತ', ವೀರಶೃಂಗಾರದ ಪ್ರಧಾನ ನಾಯಕ 'ಧೀರಲಲಿತ', ದಾನವೀರ -ಧರ್ಮವೀರ-ಶಾಂತರಸಗಳಲ್ಲಿ ಪ್ರಧಾನ ನಾಯಕ 'ಧೀರ ಪ್ರಶಾಂತ'. ಅನುಕ್ರಮವಾಗಿ ಇವರ 'ವೃತ್ತಿ'ಗಳು 'ಸಾತ್ತ್ವತೀ', 'ಆರಭಟೀ', 'ಕೈಶಿಕೀ' ಮತ್ತು 'ಭಾರತೀ'. ಮುಖ್ಯನಾದವನು ಕಥಾ ನಾಯಕ; ಅನಂತರ ಬರತಕ್ಕವನು ಉಪನಾಯಕ (ಪಾಠಾಂತರ - 'ಪ್ರತಿನಾಯಕ')—ಲೋ.

ಹಾಗೆಯೇ 'ಹೇಳಬೇಕಾದ ವಿಷಯ' ಎಂಬುದು ಧ್ವನ್ಯಾತ್ಮಕವಾದ[58] ರಸಕ್ಕೆ ಇಲ್ಲವೆ ರಸಾಭಾಸಕ್ಕೆ ಅಂಗವಾಗಬಹುದು; ರಂಗಸ್ಥಳದ ಮೇಲೆ ಅಭಿನಯಯೋಗ್ಯವಾಗಿರಬಹುದು[59] ಅಥವಾ ಇಲ್ಲದಿರಬಹುದು; ಉತ್ತಮ ಪಾತ್ರಗಳನ್ನು ಕುರಿತಿರಬಹುದು ಇಲ್ಲವೆ ಮಧ್ಯಮಾಧಮ ಪಾತ್ರಗಳನ್ನು ಕುರಿತಿರಬಹುದು; ಹೀಗೆ ಇದೂ ಕೂಡ ಬಹು ಪ್ರಕಾರಗಳನ್ನೊಳಗೊಳ್ಳುತ್ತದೆ. ಇವುಗಳ ಪೈಕಿ, ರಸಭಾವಶೂನ್ಯನಾದ ಕವಿಯು ಯಾವಾಗ 'ಹೇಳುವವ'ನಾಗುತ್ತಾನೋ ಆಗ ಸಂಘಟನೆಗೆ ಯಾವ ನಿಯಮವೂ ಇರುವುದಿಲ್ಲ; ರಸಭಾವರಹಿತನಾದ ಕವಿಕೃತ ಪಾತ್ರವು 'ಹೇಳುವವ'ನಾದಾಗಲೂ ಅಷ್ಟೆ. ಆದರೆ ಯಾವಾಗ 'ಹೇಳುವವ'ನು ರಸಭಾವಸಮನ್ವಿತನಾದ ಕವಿ[60] ಇಲ್ಲವೆ ಕವಿನಿರ್ಮಿತ ಪಾತ್ರನಾಗಿ, ರಸವು ಕೂಡ ಪ್ರಧಾನವೆನಿಸುವಂತೆ ಧ್ವನ್ಯಾತ್ಮಕವಾಗಿರುವುದೋ,[61] ಆಗ ನಿಯತವಾಗಿ ಸಮಾಸವಿಲ್ಲದ ಮತ್ತು ಅಲ್ಪ ಸಮಾಸವಿರುವ ಸಂಘಟನೆಗಳು ಮಾತ್ರ ಬರುವುವು. ಅದರಲ್ಲಿಯೂ ಕರುಣರಸ ಮತ್ತು ವಿಪ್ರಲಂಭ ಶೃಂಗಾರರಸಗಳಿರುವೆಡೆಯಲ್ಲಿ ಸಮಾಸವಿಲ್ಲದ ಸಂಘಟನೆಯೊಂದೇ ಬರುವುದು. ಹೇಗೆಂದರೆ,[62] ಅದಕ್ಕೆ ಕಾರಣವಿಷ್ಟೆ: ರಸವನ್ನೇ ಪ್ರಧಾನವಾಗಿ ಪ್ರತಿಪಾದಿಸಬೇಕಾದರೆ, ರಸಪ್ರತೀತಿಗೆ ವಿಘ್ನಕಾರಿಗಳಾದ ಮತ್ತು ವಿರೋಧಿಗಳಾದ ಅಂಶಗಳನ್ನೆಲ್ಲ ಸರ್ವಥಾ ಪರಿಹರಿಸಿಕೊಳ್ಳಬೇಕಾಗುತ್ತದೆ. ಹೀಗಿರುವಲ್ಲಿ ದೀರ್ಘಸಮಾಸದ ಸಂಘಟನೆಯು ಬಂದರೆ, ಸಮಾಸಗಳನ್ನು ಅನೇಕಪ್ರಕಾರಗಳಲ್ಲಿ ಅರ್ಥಮಾಡಿಕೊಳ್ಳುವ ಸಂಭವ

---

58 ಎಂದರೆ ಧ್ವನಿಯೇ ಸ್ವಭಾವವಾಗಿರುವ, ಎಂದರ್ಥ. ರಸಕ್ಕೆ 'ಅಂಗ' ಎಂದರೆ ವ್ಯಂಜಕವೆಂದು ಅಭಿಪ್ರಾಯ

59 ಇದು ಪ್ರಸಿದ್ಧವಾದ ಅರ್ಥ. ಆದರೆ ಅಭಿನವಗುಪ್ತರು 'ಅಭಿನೇಯಾರ್ಥ' ಎಂಬ ಮೂಲದ ಶಬ್ದಕ್ಕೆ 'ಅಭಿನೇಯ=ವ್ಯಂಗ್ಯಧ್ವನಿ; ಅದರ ವ್ಯಂಜಕ=ವಾಚ್ಯಾರ್ಥ=ಕಾವ್ಯಾರ್ಥ ಎಂದು ನಯನ ಮಾಡಿದ್ದಾರೆ ಇದಕ್ಕೆ ಆಧಾರವಾಗಿ 'ವಾಗಂಗಸತ್ತ್ವೋಪೇತಾತ್ ಕಾವ್ಯಾರ್ಥಾನ್ ಭಾವಯನ್ತಿ' ಎಂಬ ಭರತನ ವಚನವನ್ನೂ ಉದಾಹರಿಸಿದ್ದಾರೆ

60 ಯದ್ಯಪಿ, ಕವಿಯು ರಸಾವೇಶದಿಂದಲೇ ಹೇಳುವವನೆಂಬುದು ನಿಜ ಇಲ್ಲದಿದ್ದರೆ 'ಸ ಏವ ವೀತರಾಗಶ್ಚೇತ್....' ಎಂಬ ನ್ಯಾಯದಂತೆ ಕಾವ್ಯವೆಲ್ಲ ನೀರಸವಾದೀತು. ಆದರೂ ಯಮಕಾದಿ ಚಿತ್ರಪ್ರದರ್ಶನಕ್ಕೆಂದೇ ಅವನು ಮುಖ್ಯವಾಗಿ ಹೊರಟಾಗ ರಸಾದಿಹೀನನೆನಿಸುತ್ತಾನೆಂದು ಕಲ್ಪಿಸಲಾಗಿದೆ. ಕವಿ ರಸಾದಿಹೀನ ಇಲ್ಲವೇ ಉದಾಸೀನನಾಗಿದ್ದಾಗ ಸಂಘಟನೆಯ ನಿಯಮಗಳು ಅನ್ವಯಿಸವು—ಲೋ.

61 ಎಂದರೆ 'ರಸವದಲಂಕಾರ'ದಂತೆ ಆದರೆ ಸಾಲದು—ಲೋ.

62 ನಿಮ್ಮ ನಿಯಮಗಳು ಧರ್ಮಸೂತ್ರಕಾರರ ನಿಯಮಗಳಂತೆ ಕಡ್ಡಾಯವಾಗುವುದೆಂತು? ಎಂದು ಕೇಳುವವರಿಗೆ ಉತ್ತರ ಹೇಳಲಾಗುತ್ತದೆ—ಲೋ.

